RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೬, ೨೦೧೩ (ಆಶ್ವಯುಜ ೪, ಶಕ ವರ್ಷ ೧೯೩೫)<br>**Bangalore, Thursday, September 26, 2013 (Aashwayuja 4, Shaka Varsha 1935)** | ಸಂಚಿಕೆ ೩೯<br>**Issue 39** |
|---|---|---|


## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು

### PERSONNEL AND ADMINISTRATIVE REFORMS SECRETARIAT

**NOTIFICATION**

**No: DPAR 19 SMR 2013, Bangalore, dated : 12-7-2013.**

In exercise of the powers conferred by clause (ff) of rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after item 25 under the sub heading 'Diagnostic Centres' of Schedule 1 of the said rules namely :-

**(26) Focus Diagnostics Centre & Speciality Clinics, No. 1213, 20th Main Road, Rajajinagar 5th Block, West of Chord Road, Service Road, Shivanahalli Circle, Bangalore-560 010.**

By Order and in the name of the Governor of Karnataka,

**D. NAGESH PHATAK**

Deputy Secretary to Government,

Department of Personnel and Administrative Reforms

(Service Rules-2).

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 19 ಎಸ್‌ಎಂಆರ್ 2013, ಬೆಂಗಳೂರು, ದಿನಾಂಕ : 12–07–2013.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 3ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–1ರ 'ಡಯಾಗ್ನೊಸ್ಟಿಕ್ ಸೆಂಟರ್' ಉಪ ಶೀರ್ಷಿಕೆಯಡಿ ಐಟಂ 25 ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ :–

**(26) ಫೋಕಸ್ ಡಯಾಗ್ನೊಸ್ಟಿಕ್ ಸೆಂಟರ್ & ಸ್ಪೆಷಾಲಿಟಿ ಕ್ಲಿನಿಕ್ಸ್, ನಂ. 1213, 20ನೇ ಮುಖ್ಯ ರಸ್ತೆ, ರಾಜಾಜಿನಗರ 5ನೇ ಬ್ಲಾಕ್, ವೆಸ್ಟ್ ಆಫ್ ಕಾರ್ಡ್ ರಸ್ತೆ, ಸರ್ವಿಸ್ ರಸ್ತೆ, ಶಿವನಹಳ್ಳಿ ವೃತ್ತ, ಬೆಂಗಳೂರು–560 010.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**

ಸರ್ಕಾರದ ಉಪ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2).

**P.R.470**

**SC-100**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 12 ಎಸ್‌ಎಂಆರ್ 2013, ಬೆಂಗಳೂರು, ದಿನಾಂಕ : 17–05–2013.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 3ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–1ರ ಐಟಂ 326ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ:–

**(327) ಮಹೇಶ್ ನರ್ಸಿಂಗ್ ಹೋಂ, ಕೊಟ್ಟೂರು ರಸ್ತೆ, ಹರಪನಹಳ್ಳಿ–583 131, ದಾವಣಗೆರೆ ಜಿಲ್ಲೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2).

## PERSONNEL AND ADMINISTRATIVE REFORMS SECRETARIAT

### NOTIFICATION

**No: DPAR 12 SMR 2013, Bangalore, dated : 17-5-2013.**

In exercise of the powers conferred by clause (ff) or rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after item 326 of Schedule 1 of the said rules, namely :-

**(327) Mahesh Nursing Home, Kottur Road, Harapanahalli-583 131, Davangere District.**

By Order and in the name of the Governor of Karnataka,

**D. NAGESH PHATAK**

Under Secretary to Government,

Department of Personnel and Administrative Reforms

(Service Rules-2).

**P.R. 471**

**SC-100**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 11 ಎಸ್‌ಎಂಆರ್ 2013, ಬೆಂಗಳೂರು, ದಿನಾಂಕ : 17–05–2013.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 3ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–1ರ ಐಟಂ 325ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ.

**(326) ನಾಗಭೂಷಣ ಆಸ್ಪತ್ರೆ, ಎಸ್.ಬಿ.ಐ. ಹತ್ತಿರ, ಬಿ.ಹೆಚ್. ರಸ್ತೆ, ಅರಸೀಕೆರೆ–573 103, ಹಾಸನ ಜಿಲ್ಲೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2).

## PERSONNEL AND ADMINISTRATIVE REFORMS SECRETARIAT

### NOTIFICATION

**No: DPAR 11 SMR 2013, Bangalore, dated : 17-5-2013.**

In exercise of the powers conferred by clause (ff) of rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after item 325 of Schedule 1 to the said rules, namely :-

**(326) Nagabhushana Hospital, Near S.B.I., B.H. Road, Arsikere-573 103, Hassan District.**

By Order and in the name of the Governor of Karnataka,

**D. NAGESH PHATAK**

Under Secretary to Government,

Department of Personnel and Administrative Reforms

(Service Rules-2).

**P.R. 472**

**SC-100**

## PERSONNEL AND ADMINISTRATIVE REFORMS SECRETARIAT

**NOTIFICATION**

**No: DPAR 10 SMR 2013, Bangalore, dated : 17-5-2013.**

In exercise of the powers conferred by clause (ff) of rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after item 324 of Schedule 1 to the said rules, namely :-

**(325) Nayana Super Speciality Eye Hospital & Research Centre, 1st Main, MCC "B" Block, Davangere-577 004.**

By Order and in the name of the Governor of Karnataka,

**D. NAGESH PHATAK**

Under Secretary to Government,

Department of Personnel and Administrative Reforms (Service Rules-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 10 ಎಸ್‌ಎಂಆರ್ 2013, ಬೆಂಗಳೂರು, ದಿನಾಂಕ : 17–05–2013.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 3ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–1ರ ಐಟಂ 324ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ.

**(325) ನಯನ ಸೂಪರ್ ಸ್ಪೆಷಾಲಿಟಿ ಐ ಹಾಸ್ಪಿಟಲ್ ಮತ್ತು ರಿಸರ್ಚ್ ಸೆಂಟರ್, 1ನೇ ಮೇನ್, ಎಂಸಿಸಿ 'ಬಿ' ಬ್ಲಾಕ್, ದಾವಣಗೆರೆ–577 004.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2).

**P.R.473**

**SC-100**

## PERSONNEL AND ADMINISTRATIVE REFORMS SECRETARIAT

**NOTIFICATION**

**No: DPAR 9 SMR 2013, Bangalore, dated : 17-5-2013.**

In exercise of the powers conferred by clause (ff) of rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after item 323 of Schedule 1 to the said rules, namely :-

**(324) Bhagwan Mahaveer Darshan Eye Hospital, Opp. K.R. Mill, Mysore-Bangalore Road, Post, Siddalinagapura, Mysore-570 003.**

By Order and in the name of the Governor of Karnataka,

**D. NAGESH PHATAK**

Under Secretary to Government,

Department of Personnel and Administrative Reforms (Service Rules-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 9 ಎಸ್‌ಎಂಆರ್ 2013, ಬೆಂಗಳೂರು, ದಿನಾಂಕ : 17–05–2013.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 3ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–1ರ ಐಟಂ 323ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ.

**(324) ಭಗವಾನ್ ಮಹಾವೀರ್ ದರ್ಶನ್ ಕಣ್ಣಿನ ಆಸ್ಪತ್ರೆ, ಕೆ.ಆರ್. ಮಿಲ್ ಎದುರು, ಮೈಸೂರು–ಬೆಂಗಳೂರು ರಸ್ತೆ, ಸಿದ್ದಲಿಂಗಾಪುರ ಅಂಚೆ, ಮೈಸೂರು–570 003.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾನಿಯಮಗಳು–2).

**P.R. 474**

**SC-100**

## PERSONNEL AND ADMINISTRATIVE REFORMS SECRETARIAT

**NOTIFICATION**

**No: DPAR 8 SMR 2013, Bangalore, dated : 17-5-2013.**

In exercise of the powers conferred by clause (ff) ot rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after item 322 of Schedule 1 to the said rules, namely :-

**(323) Sanjeevini Hospital, # SIC & SID, S. Nijalingappa Extension, Near Ring Road, Davangere-577 004.**

By Order and in the name of the Governor of Karnataka,

**D. NAGESH PHATAK**
Under Secretary to Government,
Department of Personnel and Administrative Reforms
(Service Rules-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 8 ಎಸ್‌ಎಂಆರ್ 2013, ಬೆಂಗಳೂರು, ದಿನಾಂಕ : 17–05–2013.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 3ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–1ರ ಐಟಂ 322ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ.

**(323) ಸಂಜೀವಿನಿ ಹಾಸ್ಪಿಟಲ್, # ಎಸ್‌ಐಸಿ & ಎಸ್‌ಐಡಿ, ಎಸ್. ನಿಜಲಿಂಗಪ್ಪ ಬಡಾವಣೆ, ರಿಂಗ್ ರಸ್ತೆ, ಹತ್ತಿರ, ದಾವಣಗೆರೆ–577 004.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–2).

**P.R.475**

**SC-100**

## PERSONNEL AND ADMINISTRATIVE REFORMS SECRETARIAT

**NOTIFICATION**

**No: DPAR 6 SMR 2013, Bangalore, dated : 17-5-2013.**

In exercise of the powers conferred by clause (ff) of rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after item 321 of Schedule 1 to the said rules, namely :-

**(322) Mahantesh Multi Speciality Hospital, Orthopaedic and Trauma Centre, Opp I.B., Joshi Galli, Ilkal-587 125, Bagalkot District.**

By Order and in the name of the Governor of Karnataka,

**D. NAGESH PHATAK**
Under Secretary to Government,
Department of Personnel and Administrative Reforms
(Service Rules-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 8 ಎಸ್‌ಎಂಆರ್ 2013, ಬೆಂಗಳೂರು, ದಿನಾಂಕ : 17–05–2013.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 3ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–1ರ ಐಟಂ 321ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ.

**(322) ಮಹಾಂತೇಶ್ ಮಲ್ಟಿ ಸ್ಪೆಷಾಲಿಟಿ ಹಾಸ್ಪಿಟಲ್, ಆರ್ಥೋಪೆಡಿಕ್ ಮತ್ತು ಟ್ರಾಮ ಸೆಂಟರ್, ಐ.ಬಿ. ಎದುರು, ಜೋಶಿ ಗಲ್ಲಿ, ಇಲಕಲ್–587 125, ಬಾಗಲಕೋಟೆ ಜಿಲ್ಲೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–2).

**P.R.476**

**SC-100**

## PERSONNEL AND ADMINISTRATIVE REFORMS SECRETARIAT

**NOTIFICATION**

**No: DPAR 34 SMR 2012, Bangalore, dated : 17-5-2013.**

In exercise of the powers conferred by clause (ff) of rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after item 320 of Schedule 1 to the said rules, namely :-

**(321) Dr. Mahadevappa Eye Laser Hospital, 15th Cross, S.S. Puram (Horticulture Office Road), Tumkur-572 102.**

By Order and in the name of the Governor of Karnataka,

**D. NAGESH PHATAK**

Under Secretary to Government,

Department of Personnel and Administrative Reforms

(Service Rules-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 34 ಎಸ್‌ಎಂಆರ್ 2013, ಬೆಂಗಳೂರು, ದಿನಾಂಕ : 17-05-2013.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 3ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್-1ರ ಐಟಂ 320ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ.

**(321) ಡಾ॥ ಮಹದೇವಪ್ಪ ಐ ಲೇಸರ್ ಆಸ್ಪತ್ರೆ, 15ನೇ ಕ್ರಾಸ್ ಎಸ್.ಎಸ್. ಪುರಂ (ಹಾರ್ಟಿಕಲ್ಚರ್ ಆಫೀಸ್ ರಸ್ತೆ), ತುಮಕೂರು-572 102.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು-2).

**P.R.477**

**SC-100**

## KARNATAKA GOVERNOR'S SECRETARIAT

**NOTIFICATION**

**No: GS 02 MTU 2013, Bangalore, dated : 26-07-2013.**

WHEREAS the tenure of Dr. S.C. Sharma, Vice-Chancellor, Tumkur University, Tumkur expired on 3rd May, 2013.

WHEREAS in Notification No. GS 02 MTU 2013 dated 02-05-2013 Prof. Shivalingaiah, Professor and Senior most Dean, Faculty of Science and Technology of Tumkur University was appointed to act as Vice-Chancellor of Tumkur University in terms of Section 16 (2) of the Karnataka State Universities Act, 2000.

WHEREAS a Search Committee constituted by the State Government in terms of Section 14(2) of the Karnataka State Universities Act, 2000 has submitted its panel to the State Government.

AND WHEREAS the panel of names forwarded by the State Government has been examined keeping in view merit, equity and social justice.

NOW, THEREFORE, I H.R. BHARDWAJ, Governor of Karnataka and Chancellor of Universities in Karnataka in exercise of the powers conferred on me by Section 14(4) of the Karnataka State Universities Act, 2000 and with the concurrence of the State Government, hereby appoint Prof. A.H. Rajasab, Dean, Faculty of Science & Technology, Gulbarga University, Gulbarga, as the Vice-Chancellor of Tumkur University, Tumkur, for a period of four years from the date of assumption of office or till he attains the age of 67 years, whichever is earlier.

**H.R. BHARDWAJ**

Governor of Karnataka & Chancellor of Universities,

**R. KALPANA**

Under Secretary to Governor,

(Administration).

**P.R. 478**

**SC-25**

## KARNATAKA GOVERNOR'S SECRETARIAT

**NOTIFICATION**

**No: GS 7 CUM 2013, Bangalore, dated : 29th July, 2013.**

WHEREAS Prof B.R. Ananthan, a retired Professor was appointed by the State Government as first Vice Chancellor of Rani Channamma University, Belagavi vide notification No. ED 10 UKV 2010, dated 16-08-2010. by invoking sub-section (4) of Section 14 of the Karnataka State Universities Act, 2000 r/w sub-sections (5) and (6) thereof for a period of four years or till he attains 65 years, whichever is earlier.

WHEREAS The Karnataka State Universities (Amendment) Act, 2011 substituted sub-section (5) of Section 14 to enhance the upper age limit from 65 to 67 years.

WHEREAS Prof. B.R. Ananthan attains 65 years on 2nd May, 2013.

WHEREAS equity requires that the benefit of 2011 amendment enhancing the age limit from 65 years to 67 years should also be available to Prof. B.R. Ananthan so that he will also get 4 years term as other Vice-Chancellors are entitled to.

NOW, THEREFORE, I H.R. BHARDWAJ, Governor of Karnataka and Chancellor of Universities in Karnataka in exercise of the powers conferred on me by Sub-section (10) of Section 14 of the Karnataka State Universities Act, 2000 (Karnataka Act 29 of 2001), hereby determine the term of office of Prof. B.R. Ananthan, Vice Chancellor, Rani Channamma University, Belagavi as four years with effect from 16-08-2010 or till he attains the age of 67 years, whichever is earlier.

**H.R. BHARDWAJ**

Governor of Karnataka & Chancellor of Univerisities,

**P.R. 479**

**SC-25**

**PRATHIBHA D. HABBU**

Section Officer (University Section).

## ತೋಟಗಾರಿಕೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ತೋಇ 42 ರೇಉನಿ 2013, ಬೆಂಗಳೂರು, ದಿನಾಂಕ : 07-08-2013.**

ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದ ಆರ್ಟಿಕಲ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 8(ಎ) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಡಾ॥ ಹೆಚ್. ಭಾಸ್ಕರ್, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆ, ಇವರನ್ನು ಶ್ರೀ ರಾಜೀವ್ ಚಾವ್ಲಾ, ಭಾ.ಆ.ಸೇ. ಹಿಂದಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆ ಇವರ ಸ್ಥಾನದಲ್ಲಿ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಗೆ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾವತಿ**

**P.R.480**

ಪೀಠಾಧಿಕಾರಿ (ಪ್ರಭಾರ),

ತೋಟಗಾರಿಕೆ ಇಲಾಖೆ (ರೇಷ್ಮೆ).

## HEALTH AND FAMILY WELFARE SECRETARIAT

**NOTIFICATION**

**No: HFW 217 MMC 2013, Bangalore, dated : 05-08-2013.**

In exercise of the powers conferred by sub-section (2) of section 1 of the Karnataka Nursing and Paramedical Sciences Education (Regulation) Authority Act, 2012 (Karnataka Act 10 of 2013), the Government of Karnataka, hereby appoints the 05-08-2013 as the date on which all the provisions the said Act shall come into force.

By Order and in the name of the Governor of Karnataka,

**P.R. 489**

**SC-200**

**MAHABOOB KHAN**

Under Secretary to Government-2,

Health and Family Welfare Department

(Medical Education).

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 60 ರಾಶಾಪ್ರ 2010, ಬೆಂಗಳೂರು, ದಿನಾಂಕ: 09–07–2013**

The Karnataka Land Reforms Act, 1961 ಇದರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961**

**ಪ್ರಕರಣಗಳ ಅನುಕ್ರಮಣಿಕೆ**

26. ಗೇಣಿದಾರನಿಗೆ ಭೂಮಿಯನ್ನು ಫಲಾನುಭವದ ಹಕ್ಕನ್ನು ಅಡಮಾನ ಮಾಡಿರುವಾಗ ಗೇಣಿದಾರಿಕೆಯನ್ನು ಸ್ಥಗಿತಗೊಳಿಸುವುದು.

27. ಗೇಣಿದಾರನು ನೆಟ್ಟ ಗಿಡಗಳ ಮೇಲೆ ಅವನಿಗಿರುವ ಹಕ್ಕುಗಳು.

28. ಬಿಟ್ಟುಬಿಡಲಾಗಿದೆ.

29. ಗೇಣಿದಾರರು ಬಾಂದು ಗುರುತುಗಳನ್ನು ಸುಸ್ಥಿತಿಯಲ್ಲಿಡಲು ಜವಾಬ್ದಾರರಾಗಿರುವುದು.

30. ರಕ್ಷಕ ಬದುಗಳ ದುರಸ್ತಿ.

31. ಫಾರ್ಮ್ ಹೌಸನ್ನು ಕಟ್ಟಿಕೊಳ್ಳಲು ಗೇಣಿದಾರನ ಹಕ್ಕು.

32. ಪುರೋಭಿವೃದ್ಧಿ ವಂತಿಗೆ.

33. ಗೇಣಿ ರಸೀತಿಗಳು.

34. ನ್ಯಾಯಾಲಯದ ಪ್ರೊಸಸ್ ಮೂಲಕ ಜಪ್ತಿ ಅಥವಾ ಮಾರಾಟಕ್ಕೆ ಪ್ರತಿಷೇಧ.

35. ವಾಸದ ಮನೆಯಿಂದ ಹೊರದೂಡುವುದಕ್ಕೆ ಪ್ರತಿಷೇಧ.

36. ವಾಸದ ಮನೆಯನ್ನು ಯಾವ ನಿವೇಶನದ ಮೇಲೆ ಕಟ್ಟಲಾಗಿದೆಯೋ ಆ ನಿವೇಶನವನ್ನು ಗೇಣಿದಾರನಿಗೆ ಮಾರುವುದು.

37. ನಿವೇಶನವನ್ನು ಕೊಳ್ಳಲು ಗೇಣಿದಾರನ ಹಕ್ಕು.

38. ಕೃಷಿ ಕಾರ್ಮಿಕರು, ಇತ್ಯಾದಿಯವರ ವಾಸದ ಮನೆಗಳು.

39. ಭೂಮಿಯನ್ನು ಕೊಂಡುಕೊಳ್ಳಲು ಪ್ರಥಮಾವಕಾಶ.

40. ಗೇಣಿದಾರನು ಮಾಡಿದ ಅಭಿವೃದ್ಧಿಗಾಗಿ ಪರಿಹಾರ.

41. ಸ್ವಾಧೀನಕ್ಕೆ ತೆಗೆದುಕೊಳ್ಳಲು ಕಾರ್ಯವಿಧಾನ.

42. ಗೇಣಿ ವಸೂಲಿ ಕಾರ್ಯವಿಧಾನ.

43. ಗೇಣಿದಾರನ ಹಕ್ಕುಗಳಿಗೆ ಅಥವಾ ವಿಶೇಷಾಧಿಕಾರಗಳಿಗೆ ಬಾಧಕವಾಗದಿರುವುದು.

## ಅಧ್ಯಾಯ – III

### ಗೇಣಿದಾರರಿಗೆ ಒಡೆತನದ ಪ್ರದಾನ

44. ಭೂಮಿಗಳು ರಾಜ್ಯ ಸರ್ಕಾರದಲ್ಲಿ ನಿಹಿತವಾಗುವುದು.

45. ಕೆಲವು ಷರತ್ತುಗಳ ಮೇಲೆ ಗೇಣಿದಾರರನ್ನು ಭೂಮಿಯ ಅಧಿಭೋಗದಾರರನ್ನಾಗಿ ನೋಂದಾಯಿಸುವುದು.

46. ಭೂಮಿಯನ್ನು ಆಯ್ಕೆ ಮಾಡಿಕೊಳ್ಳಲು ಗೇಣಿದಾರನು ಯಾವಾಗ ಹಕ್ಕುಳ್ಳವನಾಗುವನು.

47. ಸಂದಾಯ ಮಾಡಬೇಕಾದ ಮೊಬಲಗು.

48. ನ್ಯಾಯಾಧಿಕರಣಗಳ ರಚನೆ.

48ಎ. ನ್ಯಾಯಾಧಿಕರಣದಿಂದ ವಿಚಾರಣೆ, ಇತ್ಯಾದಿ.

48ಬಿ. ಸಂದಾಯ ಮಾಡಬೇಕಾದ ಮೊಬಲಗನ್ನು ತಹಸೀಲ್ದಾರರು ನಿರ್ಧರಿಸುವುದು.

48ಸಿ. ಮಧ್ಯಕಾಲೀನ ಆದೇಶಗಳು.

49. ಗೇಣಿದಾರರ ಒಳಗೇಣಿದಾರರನ್ನು ಅಧಿಭೋಗದಾರರನ್ನಾಗಿ ನೋಂದಾಯಿಸುವುದು.

50. ಋಣಭಾರಗಳನ್ನು ಕೊನೆಗೊಳಿಸುವುದು ಮತ್ತು ಮೊಬಲಗಿನ ಸಂದಾಯ.

51. ಮೊಬಲಗನ್ನು ಸಂದಾಯ ಮಾಡುವ ವಿಧಾನ.

52. ಪರಿಹಾರ ಸಂದಾಯ ಮಾಡಿದಾಗ ಪೂರ್ಣ ವಿಮೋಚನೆ ಆಗುವುದು.

53. ಗೇಣಿದಾರನಿಂದ ಪ್ರೀಮಿಯಂನ ಸಂದಾಯ.

53ಎ. ಪ್ರತ್ಯೇಕ ನಿಧಿಯ ಸ್ಥಾಪನೆ.

54. ಪ್ರಿಮಿಯಂ ಭೂಕಂದಾಯದ ಬಾಕಿಯಂತೆ ವಸೂಲೀ ಮಾಡುವಂತದ್ದು ಆಗಿರುವುದು.

55. ನೋಂದಣಿ ಪ್ರಮಾಣ ಪತ್ರದ ನೀಡಿಕೆ.

56. ಬಿಟ್ಟುಬಿಡಲಾಗಿದೆ.

57. ಅಪ್ರಾಪ್ತ ವಯಸ್ಕರು, ವಿಕಲತೆಯುಳ್ಳ ವ್ಯಕ್ತಿಗಳು, ಮುಂತಾದವರಿಗೆ ಅನ್ವಯಿಸುವ ಉಪಬಂಧಗಳು.

58. ಈ ಅಧಿನಿಯಮಕ್ಕೆ ತದ್ವಿರುದ್ಧವಾಗಿ ಗೇಣಿಗೆ ನೀಡಿದ ಭೂಮಿಯು ರಾಜ್ಯ ಸರ್ಕಾರದಲ್ಲಿ ನಿಹಿತವಾಗುವುದು.

59. ಬಿಟ್ಟುಬಿಡಲಾಗಿದೆ.

60. ಸ್ವತಃ ಸಾಗುವಳಿ ಮಾಡಲು ತಪ್ಪುವುದು.

61. ಗೇಣಿದಾರನು ಅಧಿಭೋಗದಾರನಾಗಿರುವ ಭೂಮಿಯ ವರ್ಗಾವಣೆಗೆ ನಿರ್ಬಂಧ.

62. ರಾಜ್ಯ ಸರ್ಕಾರಕ್ಕೆ ಭೂಮಿಯನ್ನು ಬಿಟ್ಟುಕೊಡುವುದು.

**ಅಧ್ಯಾಯ – IV**

**ಭೂ ಹಿಡುವಳಿಗಳ ಗರಿಷ್ಠ ಮಿತಿ**

63. ಭೂಮಿಯ ಗರಿಷ್ಠ ಮಿತಿ.

64. ಮುಂಬರುವ ಕಾಲದಲ್ಲಿ ಭೂಮಿಯ ಆರ್ಜನೆ.

65. ಹೆಚ್ಚುವರಿ ಭೂಮಿಯನ್ನು ರಾಜ್ಯ ಸರ್ಕಾರಕ್ಕೆ ಬಿಟ್ಟು ಕೊಡುವುದು.

65ಎ. ಕೆಲವು ಭೂಮಿಗಳನ್ನು ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣಕ್ಕಿಂತ ಹೆಚ್ಚಾಗಿರುವಂತವುಗಳೆಂದು ಭಾವಿಸುವುದು.

66. ಹಿಡುವಳಿಯ ಘೋಷಣೆಯನ್ನು ದಾಖಲು ಮಾಡುವುದು.

66ಎ. ಘೋಷಣೆಯನ್ನು ಸಲ್ಲಿಸಲು ತಪ್ಪಿದ್ದಕ್ಕಾಗಿ ದಂಡ.

67. ಕೆಲವು ಸಂದರ್ಭಗಳಲ್ಲಿ ಭೂಮಿಯನ್ನು ಬಿಟ್ಟು ಕೊಡುವುದು.

67ಎ. ಭೂಮಿಯ ಬಳಕೆಗೆ ಮತ್ತು ಅಧಿಭೋಗಕ್ಕೆ ಪರಿಹಾರ ಸಂದಾಯ.

68. ಒಡೆಯನು ಬಿಟ್ಟುಕೊಟ್ಟ ಭೂಮಿಯು ನಿಹಿತವಾಗುವುದು.

69. ಪರಿಮಿತ ಒಡೆಯನು ಬಿಟ್ಟು ಕೊಟ್ಟ ಭೂಮಿಯು ನಿಹಿತವಾಗುವುದು.

70. ಭೂಮಿಯ ಫಲಾನುಭವದ ಹಕ್ಕುಳ್ಳ ಅಡಮಾನ ಮಾಡಿಸಿಕೊಂಡವನು ಬಿಟ್ಟುಕೊಟ್ಟ ಭೂಮಿಯ ಸಂಭಾವ್ಯ ಅನುಭೋಗ ಮತ್ತು ನಿಹಿತತೆ.

71. ಗೇಣಿದಾರನು ಬಿಟ್ಟು ಕೊಟ್ಟ ಭೂಮಿಯು ನಿಹಿತವಾಗುವುದು.

72. ರಾಜ್ಯ ಸರ್ಕಾರಕ್ಕೆ ಬಿಟ್ಟುಕೊಟ್ಟ ಮತ್ತು ಅದರಲ್ಲಿ ನಿಹಿತವಾಗುವ ಭೂಮಿಗಳಿಗೆ ಸಂದಾಯ ಮಾಡಬೇಕಾದ ಮೊಬಲಗು.

73. ಮೊಬಲಗಿಗೆ ಕ್ಲೇಮುಗಳು ಮತ್ತು ಮೊಬಲಗಿನ ಸಂದಾಯ.

74. ಹಿಡುವಳಿಯ ಪರಭಾರೆಗೆ ನಿಷೇಧ.

75. ಕೆಲವು ಸಂದರ್ಭಗಳಲ್ಲಿ ಹೆಚ್ಚುವರಿ ಭೂಮಿಯನ್ನು ಬಿಟ್ಟು ಕೊಡದಿರುವುದು.

76. ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.

77. ಹೆಚ್ಚುವರಿ ಭೂಮಿಯ ವಿಲೇವಾರಿ.

77ಎ. ಕೆಲವು ಪ್ರಕರಣಗಳಲ್ಲಿ ಭೂಮಿಯ ಮಂಜೂರಾತಿ.

78. ಹೆಚ್ಚುವರಿ ಭೂಮಿಯ ಖರೀದಿ ಬೆಲೆ.

79. ಹೆಚ್ಚುವರಿ ಭೂಮಿಗಳ ನಿರ್ವಹಣೆ.

**ಅಧ್ಯಾಯ – V**

**ಕೃಷಿ ಭೂಮಿಗಳನ್ನು ಧಾರಣ ಮಾಡಲು ಅಥವಾ ವರ್ಗಾವಣೆ ಮಾಡಲು ನಿರ್ಬಂಧಗಳು**

79ಎ. ಕೆಲವು ವ್ಯಕ್ತಿಗಳು ಭೂಮಿಯನ್ನು ಆರ್ಜಿಸಲು ನಿಷೇಧ.

79ಬಿ. ಕೆಲವು ವ್ಯಕ್ತಿಗಳು ಕೃಷಿ ಭೂಮಿಯನ್ನು ಧಾರಣ ಮಾಡಲು ನಿಷೇಧ.

79ಸಿ. ಘೋಷಣೆಯನ್ನು ಸಲ್ಲಿಸಲು ತಪ್ಪಿದ್ದಕ್ಕಾಗಿ ದಂಡ.

80. ಕೃಷಿಕರಲ್ಲದವರಿಗೆ ವರ್ಗಾವಣೆ ಮಾಡುವುದಕ್ಕೆ ನಿಷೇದ.

81. 79ಎ, 79ಬಿ ಮತ್ತು 80ನೇ ಪ್ರಕರಣಗಳು ಕೆಲವು ಸಂದರ್ಭಗಳಲ್ಲಿ ಅನ್ವಯವಾಗದಿರುವುದು.

81ಎ. ಕೆಲವು ಸಂದರ್ಭಗಳಲ್ಲಿ ನೋಂದಣಿ ಪ್ರಾಧಿಕಾರಿಯ ಮುಂದೆ ಘೋಷಣೆ ಮಾಡುವುದು.

82. ಕಾನೂನು ಬಾಹಿರ ವ್ಯವಹಾರಗಳನ್ನು ವರದಿ ಮಾಡುವುದು.

83. ಕಾನೂನುಬಾಹಿರ ವ್ಯವಹಾರಗಳ ವಿಚಾರಣೆ.

**ಅಧ್ಯಾಯ – VI**

**ಸಾಗುವಳಿಯಾಗದಿರುವ ಭೂಮಿಗಳ ಸಾಗುವಳಿಗೆ ಉಪಬಂಧಗಳು**

84. ಸಾಗುವಳಿಯಾಗದ ಭೂಮಿಯನ್ನು ಸಾಗುವಳಿ ಮಾಡಲು ಅಗತ್ಯಪಡಿಸುವುದು.

85. ಸಾಗುವಳಿಯಾಗದ ಭೂಮಿಯನ್ನು ಗೇಣಿಗೆ ಕೊಡಲು ಅಸಿಸ್ಟೆಂಟ್ ಕಮೀಷನರರ ಅಧಿಕಾರ.

86. ಗೇಣಿಯ ರದ್ದಿಯಾತಿ.

87. ಗೇಣಿ ಪತ್ರವನ್ನು ಕೊಡುವುದು, ಭೂ ಒಡೆಯರ ಹೊಣೆ, ಇತ್ಯಾದಿ.

88. ಗೇಣಿ ಅವಧಿಯ ನಂತರ ಸ್ವಾಧೀನವನ್ನು ಒಪ್ಪಿಸುವುದು.

**ಅಧ್ಯಾಯ – VII**

**ಸಹಕಾರ ಕೃಷಿ ಕ್ಷೇತ್ರಗಳು**

89. ಸಹಕಾರ ಕೃಷಿ ಕ್ಷೇತ್ರದ ರಚನೆ.

90. ನೋಂದಣಿಗಾಗಿ ಅರ್ಜಿ.

91. ಸಹಕಾರ ಕೃಷಿ ಕ್ಷೇತ್ರದ ನೋಂದಣಿ.

92. ಕೃಷಿ ಕ್ಷೇತ್ರಕ್ಕೆ ಸದಸ್ಯರ ಭೂಮಿಯ ವರ್ಗಾವಣೆ.

93. ನೋಂದಣಿಯ ಪರಿಣಾಮಗಳು.

94. ಕೃಷಿ ಕ್ಷೇತ್ರದ ಉಪವಿಧಿಗಳು.

95. ರಿಜಿಸ್ಟ್ರಾರರಿಂದ ಉಪವಿಧಿಗಳಿಗೆ ತಿದ್ದುಪಡಿ.

96. ಕೃಷಿ ಕ್ಷೇತ್ರಕ್ಕೆ ಕೊಟ್ಟ ಭೂಮಿಯು ಭೂ ಒಡೆಯನಲ್ಲಿ ನಿಹಿತವಾಗಿರುವುದು ಮುಂದುವರೆಯುವುದು.

97. ಸದಸ್ಯರ ಹಕ್ಕುಗಳು, ವಿಶೇಷಾಧಿಕಾರಗಳು, ಇತ್ಯಾದಿ.

98. ಸದಸ್ಯನಿಂದ ಕೊಡುಗೆ.

99. ಭೂ ಕಂದಾಯಕ್ಕೆ ಮತ್ತು ಇತರ ಬಾಕಿಗಳಿಗೆ ಕೃಷಿ ಕ್ಷೇತ್ರದ ಹೊಣೆಗಾರಿಕೆ.

100. ಹೊಸ ಸದಸ್ಯರ ಸೇರ್ಪಡೆ.

101. ವಾರಸುದಾರರನ್ನು ಸಹಕಾರ ಕೃಷಿ ಕ್ಷೇತ್ರದ ಸದಸ್ಯರೆಂದು ಭಾವಿಸುವುದು.

102. ಸಹಕಾರ ಕೃಷಿ ಕ್ಷೇತ್ರಕ್ಕೆ ರಿಯಾಯಿತಿಗಳು ಮತ್ತು ಸೌಲಭ್ಯಗಳು.

**ಅಧ್ಯಾಯ – VIII**

**ವಿನಾಯಿತಿಗಳು**

103. ಬಿಟ್ಟುಬಿಡಲಾಗಿದೆ.

104. ಪ್ಲಾಂಟೇಷನ್‌ಗಳು.

105. ಬಿಟ್ಟುಬಿಡಲಾಗಿದೆ.

106. ಧಾರ್ಮಿಕ ಸಂಸ್ಥೆ, ಮೊದಲಾದವುಗಳಿಗೆ ಸಂದಾಯ ಮಾಡಬೇಕಾದ ಮೊಬಲಗು.

107. ಕೆಲವು ಭೂಮಿಗಳಿಗೆ ಈ ಅಧಿನಿಯಮವು ಅನ್ವಯವಾಗತಕ್ಕದ್ದಲ್ಲ.

108. ಪ್ರತಿಪಾಲಿತರ ನ್ಯಾಯಾಲಯ, ಇತ್ಯಾದಿಗಳ ಆಡಳಿತಕ್ಕೆ ತೆಗೆದುಕೊಂಡ ಭೂಮಿಗಳು.

109. ಕೆಲವು ಭೂಮಿಗಳಿಗೆ ಕೆಲವು ಉಪಬಂಧಗಳಿಂದ ವಿನಾಯಿತಿ ನೀಡುವುದು.

110. ಕೆಲವು ಭೂಮಿಗಳಿಗೆ ಕೆಲವು ಉಪಬಂಧಗಳಿಂದ ವಿನಾಯಿತಿ ನೀಡದಿರುವುದು.

**ಅಧ್ಯಾಯ – IX**

**ನ್ಯಾಯಾಲಯಗಳ ಕಾರ್ಯ ವಿಧಾನ ಮತ್ತು ಅಧಿಕಾರವ್ಯಾಪ್ತಿ ಹಾಗೂ ಅಪೀಲುಗಳು**

111. ಬಿಟ್ಟುಬಿಡಲಾಗಿದೆ.

112. ತಹಸೀಲ್ದಾರರ ಮತ್ತು ನ್ಯಾಯಾಧಿಕರಣದ ಕರ್ತವ್ಯಗಳು.

113. ಸಿವಿಲ್ ಪ್ರಕ್ರಿಯಾ ಸಂಹಿತೆಯ ಅನ್ವಯ.

114. ವ್ಯವಹರಣೆಗಳ ಪ್ರಾರಂಭ.

115. ವಿಚಾರಣೆಗಳು.

116. ಆದೇಶಗಳ ಜಾರಿ.

116ಎ. ಬಿಟ್ಟುಬಿಡಲಾಗಿದೆ.

116ಬಿ. ಬಿಟ್ಟುಬಿಡಲಾಗಿದೆ.

117. ಬಿಟ್ಟುಬಿಡಲಾಗಿದೆ.

118. ಅಪೀಲುಗಳು.

118ಎ. ರೀಜಿನಲ್ ಕಮೀಷನರರಿಂದ ಪುನರೀಕ್ಷಣೆ.

119. ಆದೇಶಗಳ ಜಾರಿಗೆ ತಡೆ.

120. ಬಿಟ್ಟುಬಿಡಲಾಗಿದೆ.

121. ಅಪೀಲಿನ ಮೇಲೆ ಆದೇಶಗಳು.

121ಎ. ಉಚ್ಚ ನ್ಯಾಯಾಲಯದಿಂದ ಪುನರೀಕ್ಷಣೆ.

122. ಕಾಲ ಪರಿಮಿತಿ.

122ಎ. ನ್ಯಾಯಾಧಿಕರಣದಿಂದ ಪುನರವಲೋಕನ.

123. ನ್ಯಾಯಾಲಯ ಫೀಜುಗಳು.

124. ವಿಚಾರಣೆಗಳು ಮತ್ತು ವ್ಯವಹರಣೆಗಳು.

## ಅಧ್ಯಾಯ – X

### ಅಪರಾಧಗಳು ಮತ್ತು ದಂಡಗಳು

125. ಅಪರಾಧಗಳು ಮತ್ತು ದಂಡಗಳು.

## ಅಧ್ಯಾಯ – XI

### ಸಂಕೀರ್ಣ

126. ಇನಾಮುಗಳಿಗೆ ಅಧಿನಿಯಮದ ಅನ್ವಯ.

127. ಬಡ ಗೇಣಿದಾರರಿಗೆ ಕಾನೂನು ನೆರವು.

127ಎ. ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ಗರಿಷ್ಠ ಮೊಬಲಗು.

128. ತುಂಡು ಭೂಮಿಗಳ ವಿಲೇವಾರಿ.

129. ಸ್ವಾಧೀನ ಹೊಂದಿರುವ ವ್ಯಕ್ತಿಗಳನ್ನು ಕಾನೂನುಬದ್ಧ ಆದೇಶಗಳ ಮೇರೆಗೆ ಹೊರತು ಸ್ವಾಧೀನತೆಯಿಂದ ತಪ್ಪಿಸಲಾಗದು.

130. ಕ್ಷಿಪ್ರವಾಗಿ ಒಕ್ಕಲೆಬ್ಬಿಸುವುದು.

131. ಬಿಟ್ಟುಬಿಡಲಾಗಿದೆ.

132. ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ.

133. ನ್ಯಾಯಾಧಿಕರಣವು ತೀರ್ಮಾನಿಸಬೇಕಾದ ಪ್ರಶ್ನೆಗಳನ್ನೊಳಗೊಂಡ ದಾವೆಗಳು, ವ್ಯವಹರಣೆಗಳು, ಇತ್ಯಾದಿ.

134. ನಿಯಂತ್ರಣ.

135. ಕಂಪೆನಿಗಳಿಂದ ಅಪರಾಧಗಳು.

136. ರಕ್ಷಣೆ.

137. ನಿಯಮಗಳು.

138. ಇತರ ಅಧಿನಿಯಮಿತಿಗಳಿಗಿಂತಲೂ ಈ ಅಧಿನಿಯಮವು ಪ್ರಾಧಾನ್ಯತೆವುಳ್ಳದ್ದಾಗಿರುವುದು.

139. ತೊಂದರೆಗಳ ನಿವಾರಣೆ.

140. ನಿಯಮಗಳನ್ನು ಮತ್ತು ಅಧಿಸೂಚನೆಗಳನ್ನು ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸುವುದು.

141. ಭೂ ಹಿಡುವಳಿ ರದ್ದಿಯಾತಿ ಅಧಿನಿಯಮಗಳು.

142. ನಿರಸನ ಮತ್ತು ಉಳಿಸುವಿಕೆಗಳು.

ಅನುಸೂಚಿ – I

ಅನುಸೂಚಿ – II

ಅನುಸೂಚಿ – III

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

I

**1962 ಅಧಿನಿಯಮ 10.–** ಹಲವಾರು ಪ್ರದೇಶಗಳಲ್ಲಿ ಜಾರಿಯಲ್ಲಿರುವ ಈ ಮುಂದಿನ ಅಧಿನಿಯಮಗಳ ಬದಲಿಗೆ, ಹೊಸ ಮೈಸೂರು ರಾಜ್ಯದಾದ್ಯಂತ ಗೇಣಿದಾರಿಕೆ ಮತ್ತು ಇತರ ಸಂಬಂಧಿತ ವಿಷಯಗಳಿಗೆ ಸಂಬಂಧಿಸಿದಂತೆ ಒಂದು ಸಾಮಾನ ಕಾನೂನನ್ನು ತರುವ ದೃಷ್ಟಿಯಿಂದ ಈ ವಿಧೇಯಕವನ್ನು ಸಿದ್ಧಪಡಿಸಲಾಗಿದೆ:–

1. ಮುಂಬಯಿ ಗೇಣಿದಾರಿಕೆ ಮತ್ತು ಕೃಷಿ ಭೂಮಿಗಳ ಅಧಿನಿಯಮ, 1948, ಮುಂಬಯಿ ಪ್ರದೇಶದಲ್ಲಿ ಜಾರಿಯಲ್ಲಿ ಇದ್ದ ಅಧಿನಿಯಮ;
2. ಹೈದ್ರಾಬಾದ್ ಗೇಣಿದಾರಿಕೆ ಮತ್ತು ಕೃಷಿ ಭೂಮಿಗಳ ಅಧಿನಿಯಮ, 1950, ಹೈದ್ರಾಬಾದ್ ಪ್ರದೇಶದಲ್ಲಿ ಜಾರಿಯಲ್ಲಿ ಇದ್ದ ಅಧಿನಿಯಮ;
3. ಮೈಸೂರು ಗೇಣಿದಾರಿಕೆ ಅಧಿನಿಯಮ, 1952 ಬಳ್ಳಾರಿ ಜಿಲ್ಲೆಯನ್ನು ಒಳಗೊಂಡು, ಮೈಸೂರು ಪ್ರದೇಶದಲ್ಲಿ ಜಾರಿಯಲ್ಲಿ ಇದ್ದ ಅಧಿನಿಯಮ;
4. (ಎ) ಮದ್ರಾಸು ಸಾಗುವಳಿ ಗೇಣಿದಾರರ ರಕ್ಷಣೆ ಅಧಿನಿಯಮ, 1955;

   (ಬಿ) ಮದ್ರಾಸು ಸಾಗುವಳಿ ಗೇಣಿದಾರರ (ನ್ಯಾಯಯುತ ಗೇಣಿ ಸಂದಾಯ) ಅಧಿನಿಯಮ, 1956 ದಕ್ಷಿಣ ಕನ್ನಡದಲ್ಲಿ ಮತ್ತು ಕೊಳ್ಳೆಗಾಲ ತಾಲ್ಲೂಕಿನಲ್ಲಿ ಜಾರಿಯಲ್ಲಿ ಇದ್ದ ಅಧಿನಿಯಮ; ಮತ್ತು
5. ಕೊಡಗು ಗೇಣಿದಾರರ ಅಧಿನಿಯಮ, 1957 ಕೊಡಗು ಜಿಲ್ಲೆಯಲ್ಲಿ ಜಾರಿಯಲ್ಲಿ ಇದ್ದ ಅಧಿನಿಯಮ.

1957ರ ಮೇನಲ್ಲಿ ರಚಿಸಲಾಗಿದ್ದ ಮೈಸೂರು ಗೇಣಿದಾರಿಕೆ ಮತ್ತು ಕೃಷಿ ಭೂಮಿ ಕಾನೂನುಗಳ ಸಮಿತಿಯ ಶಿಫಾರಸುಗಳ ಮತ್ತು ಯೋಜನಾ ಅಯೋಗವು ರಚಿಸಿದ ಭೂ ಸುಧಾರಣೆಗಳ ಕೇಂದ್ರ ಸಮಿತಿಯ ಸಲಹೆಗಳ ಮೇಲೆ ಮತ್ತು ಆ ಬಗ್ಗೆ ವಿಧಾನಮಂಡಲದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಕೆಲವು ಬದಲಾವಣೆಗಳೊಂದಿಗೆ ಸಾಮಾನ್ಯವಾಗಿ ಈ ವಿಧೇಯಕವನ್ನು ರೂಪಿಸಲಾಗಿದೆ.

**ವಿಧೇಯಕದ ಮುಖ್ಯ ವೈಶಿಷ್ಟಗಳು:–**

(1) ಕೆಲವೊಂದು ಅಸಮರ್ಥತೆಯಿಂದ ಬಳಲುತ್ತಿರುವ ವ್ಯಕ್ತಿಗಳು ಅಥವಾ ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ವ್ಯಕ್ತಿಗಳು ಅಥವಾ ಯಾರ ಹಿಡುವಳಿಯು ಮೂಲ ಹಿಡುವಳಿಯನ್ನು ಮೀರುವುದಿಲ್ಲವೋ ಆ ವ್ಯಕ್ತಿಗಳು ಹೊಂದಿರುವ ಭೂಮಿಗಳ ಸಂಬಂಧದಲ್ಲಿ ಮಾತ್ರವೇ ಇನ್ನು ಮುಂದೆ ಗೇಣಿಗಳಿಗೆ ಅನುಮತಿ ನೀಡಲಾಗುತ್ತದೆ;

(2) ಅಧಿನಿಯಮವು ಪ್ರಾರಂಭವಾದಾಗ ಗೇಣಿಗೆ ನೀಡಲಾಗಿದ್ದ ಭೂಮಿಗಳ ಸಂಬಂಧದಲ್ಲಿ ಪುನರ್ವಶದ ಹಕ್ಕನ್ನು, ಗೇಣಿಗೆ ನೀಡಿದ ಭೂಮಿಯು ಮೂಲ ಹಿಡುವಳಿಗಿಂತ ಕಡಿಮೆ ಇದ್ದ ಮತ್ತು ಅದನ್ನು ಉಪ – ವಿಭಜನೆ ಮಾಡಲಾಗದಿದ್ದರೆ ಆ ಹಿಡುವಳಿಯ ಒಂದು ಭಾಗವನ್ನು ಆ ಗೇಣಿದಾರನಿಗೆ ಬಿಡಲಾಗಿದೆ ಎಂಬುದಾಗಿ ಸಾಮಾನ್ಯವಾಗಿ ವಿನಿಯಮಿಸಲಾಗಿದೆ;

(3) ಪ್ರಸ್ತುತ ಗೇಣಿಯ ದರಗಳಲ್ಲಿ ಹೆಚ್ಚಳ ಮಾಡುವುದಿಲ್ಲ ಎಂಬ ಷರತ್ತಿಗೆ ಒಳಪಟ್ಟು, ಗೇಣಿಯ ದರವು ನೀರಾವರಿ ಭೂಮಿಗಳ ಸಂಬಂದದಲ್ಲಿ ಒಟ್ಟು ಉತ್ಪತ್ತಿಯ ನಾಲ್ಕನೇ ಒಂದರಷ್ಟು ಮತ್ತು ಇತರ ಭೂಮಿಗಳ ಸಂಬಂಧದಲ್ಲಿ ಒಟ್ಟು ಉತ್ಪತ್ತಿಯ ಐದನೇ ಒಂದರಷ್ಟಾಗಿರುತ್ತದೆ;

(4) ಭೂಮಿಯ ಎಷ್ಟು ವಿಸ್ತೀರ್ಣವನ್ನು ಭೂ ಮಾಲೀಕನು ಸ್ವಂತ ಸಾಗುವಳಿಗಾಗಿ ಪುನರ್ವಶಕ್ಕೆ ತೆಗೆದುಕೊಳ್ಳಲು ಸಾಧ್ಯವಾಗುವದಿಲ್ಲವೋ ಭೂಮಿಯ ಅಷ್ಟು ವಿಸ್ತೀರ್ಣವು, ಅಧಿಸೂಚಿಸಿದ ದಿನಾಂಕದಂದು ಸರ್ಕಾರದಲ್ಲಿ ನಿಹಿತವಾಗುತ್ತದೆ ಮತ್ತು ಅಂಥ ಭೂಮಿಗಳನ್ನು ವಾಸ್ತವವಾಗಿ ಸಾಗುವಳಿ ಮಾಡುತ್ತಿರುವ ಗೇಣಿದಾರನಿಗೆ, ಭೂ ಕಂದಾಯ ಕಳೆದು ಗೇಣಿಯ ಹದಿನೈದು ಪಟ್ಟು ಹಣ ಸಂದಾಯಕ್ಕೆ ಒಳಪಟ್ಟು ಅಧಿಭೋಗದ ಹಕ್ಕುಗಳನ್ನು ನೀಡಲಾಗುವುದು, ಆ ಮೊತ್ತವನ್ನು ಮಾಲೀಕನಿಗೆ ಪರಿಹಾರವಾಗಿ ಸಂದಾಯ ಮಾಡಲಾಗುತ್ತದೆ;

(5) ಪುನರ್ವಶಕ್ಕೆ ತೆಗೆದುಕೊಳ್ಳುವ ಹಕ್ಕುಗಳನ್ನು ಮತ್ತು ಇತರ ಎಲ್ಲ ವಿಷಯಗಳನ್ನು ವಿನಿಯಮಿಸುವುದಕ್ಕಾಗಿ ಕುಟುಂಬದ ಹಿಡುವಳಿಯನ್ನು ವಾರ್ಷಿಕ 1,200 ರೂ. ಗಳ ಆದಾಯ ನೀಡುವ ಹಿಡುವಳಿ ಎಂದು ಪರಿಭಾಷಿಸಲಾಗಿದೆ; ಮತ್ತು

(6) ಭೂ ಹಿಡುವಳಿಗಳಿಗೆ ಗರಿಷ್ಠ ಪರಿಮಿತಿಯು Three -fan ಹಿಡುವಳಿಗಳಾಗಿರುತ್ತದೆ. ಸ್ವಂತ ಸಾಗುವಳಿ ಮಾಡಲಾಗುತ್ತಿರುವ ಯಾವ ಹಾಲಿ ಹಿಡುವಳಿಗಳನ್ನು ಗೊತ್ತುಪಡಿಸಿದ ಮಾನದಂಡಗಳಿಗನುಸಾರವಾಗಿ ಸಾಗುವಳಿ ಮಾಡಲಾಗುತ್ತಿದೆಯೋ ಆ ಹಿಡುವಳಿಗಳಿಗೆ ಮತ್ತು ತೆಂಗು ಹಾಗು ಅಡಿಕೆ ಪ್ಲಾಂಟೆಷನ್‌ಗಳಿಗೆ ಸೇರಿದಂತೆ ಈಗಿರುವ ಪ್ಲಾಂಟೇಷನ್‌ಗೆ ಗರಿಷ್ಠ ಪರಿಮಿತಿಯಿಂದ ವಿನಾಯಿತಿ ಕೊಡಲಾಗುತ್ತದೆ.

(1958ರ ನವೆಂಬರ್ 29ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–2ಎ ಯಲ್ಲಿ ಪುಟ ಸಂ. 78, ಸಂಖ್ಯೆ. 174 ಎಂದು ಪ್ರಕಟಿಸಲಾಗಿದೆ)

II

**1965ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 14.–** ಮೈಸೂರು ಭೂ ಸುಧಾರಣೆಗಳ ಅಧಿನಿಯಮ, 1961ನ್ನು ಜಾರಿಗೆ ತರುವುದಕ್ಕೆ ಮೊದಲು ಭಾರತ ಸರ್ಕಾರವು ಸಲಹೆ ನೀಡಿದಂತೆ ಸದರಿ ಅಧಿನಿಯಮಕ್ಕೆ ಕೆಲವು ತಿದ್ದುಪಡಿಗಳನ್ನು ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಆದುದರಿಂದ ಈ ವಿಧೇಯಕ. ಬಹು ಮುಖ್ಯ ತಿದ್ದುಪಡಿಗಳು ಈ ಮುಂದಿನಂತಿವೆ:–

(1) ರಾಜ್ಯ ವಿಧಾನಮಂಡಲವು, ಮೈಸೂರು ಭೂ ಸುದಾರಣೆಗಳ ವಿಧೇಯಕ, 1961ನ್ನು, 1961ರ ನವೆಂಬರ್ 18ರಂದು ಅಂಗೀಕರಿಸಿದ ತರುವಾಯ ಮಾಡಿದ ವರ್ಗಾವಣೆಗಳನ್ನು, ಪುನಃ ವಶಕ್ಕೆ ತೆಗೆದುಕೊಳ್ಳುವ ಸಲುವಾಗಿ ಭೂಮಿಯ ವಿಸ್ತೀರ್ಣವನ್ನು ನಿರ್ಧರಣೆ ಮಾಡುವ ಹಾಗೂ ಗರಿಷ್ಠ ಮಿತಿ ವಿಸ್ತೀರ್ಣವನ್ನು ನಿರ್ಧರಣೆ ಮಾಡುವ ಇವೆರಡೂ ಉದ್ದೇಶಗಳಿಗಾಗಿ ಪರಿಗಣಿಸಲಾಗುವುದಿಲ್ಲ.

(2) ಪುನಃ ವಶಕ್ಕೆ ತೆಗೆದುಕೊಳ್ಳೂವ ಹಕ್ಕಿನ ಸಂಬಂಧದಲ್ಲಿ ಹೇಳುವುದಾದರೆ ಭೂಮಿಯನ್ನು ಪುನಃವಶಕ್ಕೆ ತೆಗೆದುಕೊಳ್ಳಲು ಭೂ ಮಾಲೀಕರಿಗೆ ಇರುವ ಹಕ್ಕುಗಳನ್ನು ಮುಂಬಯಿ ಗೇಣಿದಾರಿಕೆ ಮತ್ತು ಕೃಷಿ ಭೂಮಿಗಳ ಅಧಿನಿಯಮ, 1948ರ ಮೇರೆಗೆ ಗೊತ್ತುಪಡಿಸಿದ ಅವಧಿಯೊಳಗೆ ಯಾವ ಪ್ರಕರಣಗಳಲ್ಲಿ ನೋಟೀಸುಗಳನ್ನು ನೀಡಲಾಗಿದೆಯೋ ಆ ಪ್ರಕರಣಗಳಿಗೆ ಮುಂಬಯಿ ಪ್ರದೇಶದಲ್ಲಿ ಸೀಮಿತವಾಗಿರುತ್ತದೆ ಮತ್ತು ಹೈದ್ರಾಬಾದ್

ಗೇಣಿದಾರಿಕೆ ಮತ್ತು ಕೃಷಿ ಭೂಮಿಗಳ ಅಧಿನಿಯಮ, 1950ರ ಮೇರೆಗೆ ಗೊತ್ತುಪಡಿಸಿದ ಅವಧಿಯೊಳಗೆ ಯಾವ ಪ್ರಕರಣಗಳಲ್ಲಿ ಘೋಷಣೆಗಳನ್ನು ಮಾಡಲಾಗಿದೆಯೋ ಆ ಪ್ರಕರಣಗಳಿಗೆ ಹೈದ್ರಾಬಾದ್ ಪ್ರದೇಶದಲ್ಲಿ ಸೀಮಿತವಾಗಿರುತ್ತದೆ ಮತ್ತು ಪುನಃವಶಕ್ಕೆ ಪಡೆಯಬಹುದಾದ ಭೂಮಿಯ ವಿಸ್ತೀರ್ಣವನ್ನು ಮೇಲೆ ಹೇಳಲಾದ ಅಧಿನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾಗುವುದು.

(3) ಯಾವ ಗೇಣಿದಾರನನ್ನು ಅವನು ಹೊಂದಿದ ಭೂಮಿಯ ಸ್ವಾಧೀನದಿಂದ ತಪ್ಪಿಸಲಾಗಿತ್ತೋ, ಆ ಗೇಣಿದಾರನಿಗೆ ಆ ಭೂಮಿಯ ಸ್ವಾಧೀನವನ್ನು ವಾಪಸ್ಸು ನೀಡುವುದಕ್ಕೆ ಸಂಬಂಧಿಸಿದಂತೆ, ಆತನು, 1961ರ ಸೆಪ್ಟಂಬರ್ 10ಕ್ಕೆ ಮುಂಚೆ ಆರು ನಿರಂತರ ವರ್ಷಗಳ ಅವಧಿಗೆ ಭೂಮಿಯನ್ನು ಧಾರಣ ಮಾಡಿರತಕ್ಕದ್ದು ಎಂಬ ಅಗತ್ಯತೆಯನ್ನು, ಈ ಅಗತ್ಯತೆಯನ್ನು ಈಡೇರಿಸದ ಗೇಣಿದಾರರಿಗೆ ಸ್ವಾಧೀನವನ್ನು ವಾಪಸ್ಸು ಪಡೆಯಲು ಸಾಧ್ಯವಾಗುವಂತೆ ಮಾಡುವ ಸಲುವಾಗಿ ಬಿಟ್ಟುಬಿಡಲಾಗುವುದು.

(4) ಒಕ್ಕೂಟ ಸಶಸ್ತ್ರ ಸೇನಾಪಡೆಗಳ ಸದಸ್ಯರ ಅನುಕೂಲಕ್ಕಾಗಿ ಕಲ್ಪಿಸಿರುವ ಸಾಮಾಜಿಕ ಏರ್ಪಾಡುಗಳನ್ನು ವಾಣಿಜ್ಯ ನೌಕಾಪಡೆಯ ಸಿಬ್ಬಂದಿಗೂ ಅನ್ವಯವಾಗುವಂತೆ ಮಾಡಲಾಗಿದೆ ಮತ್ತು ಒಕ್ಕೂಟ ಸಶಸ್ತ್ರ ಪಡೆಗಳ ಯಾವ ಸದಸ್ಯನು/ಳು ಭಾರತದ ರಕ್ಷಣೆಗಾಗಿಯ ಕಾರ್ಯಾಚರಣೆಗಳಲ್ಲಿ ತೊಡಗಿದ್ದಾಗ ಮರಣ ಹೊಂದಿರುವನೋ/ಳೋ ಆ ಯಾರೇ, ಅಂಥ ಸದಸ್ಯನ/ಳ ಅಂಥ ಸದಸ್ಯನ/ಳ ಮೇಲೆ ಅವಲಂಬಿತವಾಗಿರುವ ಹೆಂಡತಿಗೆ/ಗಂಡನಿಗೆ, ಮಗುವಿಗೆ ಮತ್ತು ಮೊಮ್ಮಗುವಿಗೆ ಸಹ ಅಂಥ ವಿಶೇಷ ಏರ್ಪಾಡುಗಳು ಅನ್ವಯವಾಗುತ್ತವೆ.

(5) ಯಾವ ಭೂಮಿಯನ್ನು ಬಿಟ್ಟುಕೊಡುವುದಕ್ಕೆ ಅಧಿನಿಯಮದ 25ನೇ ಪ್ರಕರಣವು ಅನ್ವಯವಾಗುವುದೋ ಹಾಗೆ ಬಿಟ್ಟುಕೊಡುವುದಕ್ಕೆ ಸಂಬಂಧಿಸಿದಂತೆ, ಭೂ ಮಾಲೀಕನಿಗೆ ಆತನು ಎಷ್ಟು ವಿಸ್ತೀರ್ಣದ ಭೂಮಿಯನ್ನು ಪುನಃವಶಕ್ಕೆ ತೆಗೆದುಕೊಳ್ಳಲು ಸಾಧ್ಯವಾಗುತ್ತಿತ್ತೋ ಅಷ್ಟು ವಿಸ್ತೀರ್ಣದ ಭೂಮಿಯನ್ನು ಮಾತ್ರ ಬಿಟ್ಟುಕೊಡುವುದನ್ನು ಒಪ್ಪಿಕೊಳ್ಳುವಂತೆ ಅವನಿಗೆ ಅನುಮತಿ ನೀಡಲು, ಹೆಚ್ಚಿನ ಭೂಮಿಯನ್ನು ಹೆಚ್ಚುವರಿ ಭೂಮಿ ಎಂದು ಪರಿಗಣಿಸಲು ಅವಕಾಶ ಕಲ್ಪಿಸಲಾಗಿದೆ.

(6) 51ನೇ ಪ್ರಕರಣದ ಮೇರೆಗೆ ನಗದು ರೂಪದಲ್ಲಿ ಸಂದಾಯ ಮಾಡಬಹುದಾದ ಪರಿಹಾರ ಮೊತ್ತವನ್ನು ಹತ್ತು ಸಾವಿರ ರೂಪಾಯಿಗಳಿಗೆ ಬದಲಾಗಿ ಎರಡು ಸಾವಿರ ರೂಪಾಯಿಗಳಿಗೆ ಮಿತಿಗೊಳಿಸಲಾಗುವುದು.

(7) ಪ್ಲಾಂಟೇಷನ್‌ಗಳಿಗೆ ಸಂಬಂಧಿಸಿದಂತೆ, 104ನೇ ಪ್ರಕರಣಕ್ಕೆ ಇರುವ ವಿವರಣೆಯ (ii) ನೇ ಖಂಡದಲ್ಲಿ ನಿಗದಿಪಡಿಸಿರುವಂತೆ, ಪ್ಲಾಂಟೇಷನ ಅಭಿವೃದ್ಧಿಗಾಗಿ ಒಂದು ನೂರು ಎಕರೆಗಳ ಮಿತಿಯನ್ನು ತೆಗೆದುಹಾಕಲಾಗುವುದು ಮತ್ತು ಅದೇ ವಿವರಣೆಯ (iii) ನೇ ಖಂಡವು ನಿರ್ದಿಷ್ಟಪಡಿಸಿರುವಂತೆ ಅಲ್ಲಲ್ಲಿ ಇರುವ ಭೂಮಿಯ ಮಿತಿಯನ್ನು ಸಹ ತೆಗೆದುಹಾಕಲಾಗುವುದು.

(8) 107ನೇ ಪ್ರಕರಣದ ಮೇರೆಗೆ ಸರ್ಕಾರಿ ಭೂಮಿಗಳಿಗೆ ಮಂಜೂರು ಮಾಡಿದ ವಿನಾಯಿತಿಯನ್ನು, ಸರ್ಕಾರವು ಅಥವಾ ಸರ್ಕಾರದ ನಿಯಂತ್ರಣದಲ್ಲಿ ನಿರ್ವಹಿಸಲಾಗುತ್ತಿರುವ ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆಗಳಿಗೆ ಸೇರಿದ ಅಥವಾ ಅವುಗಳಿಂದ ಗೇಣಿಗೆ ಪಡೆದು ಧಾರಣ ಮಾಡಿರುವ ಭೂಮಿಗಳಿಗೂ ಸಹ ಮಂಜೂರು ಮಾಡಲಾಗುತ್ತದೆ.

(1965ರ ಏಪ್ರಿಲ್, 9ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ –**IV** 2ಎ ಯಲ್ಲಿ, ಪುಟ ಸಂ. 16 ರಲ್ಲಿ, ಸಂಖ್ಯೆ. 86ರಲ್ಲಿ ಪ್ರಕಟಿಸಲಾಗಿದೆ)

**III**

**1966ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 38.–** ಸ್ವತಃ ಸಾಗುವಳಿ ಮಾಡುವುದಕ್ಕಾಗಿ ಅಥವಾ ಯಾವುದೇ ಕೃಷಿಯೇತರ ಉದ್ದೇಶಕ್ಕಾಗಿ ಭೂಮಿಯು ನಿಜವಾಗಿಯೂ ಬೇಕಾಗಿದೆ ಎಂದು ಭೂ ಮಾಲೀಕ ತಮ್ಮ ಹೇಳಿಕೆಗಳನ್ನು ಮೈಸೂರು ಭೂ ಸುಧಾರಣೆಗಳ ಅಧಿನಿಯಮ, 1961ರ 14ನೇ ಪ್ರಕರಣಕ್ಕೆ ಅನುಸಾರವಾಗಿ ಗೊತ್ತುಪಡಿಸಿದ ದಿನಾಂಕದಿಂದ ಎಂದರೆ, 1965 ಅಕ್ಟೋಬರ್, 2ನೇ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ ನ್ಯಾಯಾಧಿಕರಣದಲ್ಲಿ ದಾಖಲಿಸಬೇಕಾಗಿತ್ತು. ಅಂಥ ಹೇಳಿಕೆಗಳನ್ನು ದಾಖಲು ಮಾಡಲು ಸಾಧ್ಯವಾಗುವುದಕ್ಕೆ ಅನುವು ಮಾಡಿಕೊಡುವ ಸಲುವಾಗಿ ಎಲ್ಲಿ ಭೂಮಿಗೆ ಖಾತರಿ ನೀರಾವರಿ ಸೌಲಭ್ಯಗಳು ಇವೆಯೋ ಅಂಥ ಪ್ರದೇಶಗಳ ನಿರ್ಧರಣೆಯಂಥ ಮತ್ತು ಪ್ರಕಟಣೆಯಂಥ ಮತ್ತು ವಿವಿಧ ಪ್ರದೇಶಗಳಲ್ಲಿ ಸರಾಸರಿ ವಾರ್ಷಿಕ ಮಳೆ ಪ್ರಮಾಣವನ್ನು ಅಧಿಸೂಚಿಸುವಂತೆ ಮತ್ತು ಪ್ರಾರಂಭಿಕ ವಿಧಿವಿಧಾನಗಳು ಪೂರ್ಣವಾಗದೇ ಇದ್ದುದರಿಂದ, ಮೂರು ತಿಂಗಳುಗಳವರೆಗೆ ಕಾಲ ಮಿತಿಯನ್ನು ವಿಸ್ತರಿಸಲು ಸದರಿ ಪ್ರಕರಣದ (2)ನೇ ಮತ್ತು (4) ನೇ ಉಪ ಪ್ರಕರಣಗಳನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಯಿತು. ಅದರಂತೆ 1966ರ ಮೈಸೂರು ಅಧ್ಯಾದೇಶ ಸಂ.2ನ್ನು ಹೊರಡಿಸಲಾಗಿತ್ತು. 14ನೇ ಪ್ರಕರಣದ (2)ನೇ ಉಪ ಪ್ರಕರಣದ (ಸಿ) ಖಂಡಕ್ಕೆ ಮತ್ತು 81ಎ ಪ್ರಕರಣಕ್ಕೆ ಹಾಗೂ 142ನೇ ಪ್ರಕರಣಕ್ಕೆ ಕೆಲವು ಸಣ್ಣಪುಟ್ಟ ಸ್ಪಷ್ಟೀಕರಣ ತಿದ್ದುಪಡಿಗಳನ್ನು ಸಹ ಮಾಡಲಾಯಿತು. ಪ್ರಸ್ತುತ ವಿಧೇಯಕವನ್ನು ಸದರಿ ಅಧ್ಯಾದೇಶದ ಬದಲಿಗೆ ತರಲು ಉದ್ದೇಶಿಸಲಾಗಿದೆ. ಗೊತ್ತುಪಡಿಸಿದ ದಿನಾಂಕದಿಂದ ಹದಿನೈದು ತಿಂಗಳುಗಳ ಅವಧಿಯೊಳಗೆ ಸ್ವಾಧೀನತೆಯನ್ನು ಪುನಃ ವಾಪಸ್ಸು ಪಡೆಯುವುದಕ್ಕೆ ಅರ್ಜಿಗಳನ್ನು ಸಲ್ಲಿಸಲು ಸ್ವಾಧೀನ ತಪ್ಪಿದ ಗೇಣಿದಾರರಿಗೆ ಸಾಧ್ಯವಾಗುವಂತೆ ಮಾಡಲು 7ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದಕ್ಕಾಗಿ ಸಹ ವಿಧೇಯಕದಲ್ಲಿ ಉಪಬಂಧವನ್ನು ಕಲ್ಪಿಸಲಾಗಿದೆ. ಅಧಿನಿಯಮದ 1ನೇ ಅನುಸೂಚಿಯ ಭಾಗ–ಎ ಯ ಉದ್ದೇಶಗಳಿಗಾಗಿ ವಿವಿಧ ಪ್ರದೇಶಗಳ ಸರಾಸರಿ ವಾರ್ಷಿಕ ಮಳೆ ಪ್ರಮಾಣವನ್ನು ಪ್ರಕಟಿಸಲು ಸಾಂಖ್ಯಿಕ ಇಲಾಖೆಯ ನಿರ್ದೇಶಕರಿಗೆ ಅಧಿಕಾರ ನೀಡಲಾಗಿದೆ. ಈ ಭಾಗಕ್ಕೆ ಇರುವ ವಿವರಣೆಯನ್ನು ಕೂಡ ಈ ಉದ್ದೇಶಕ್ಕಾಗಿ ತಿದ್ದುಪಡಿ ಮಾಡಲು ಸಹ ಪ್ರಸ್ತಾಪಿಸಲಾಗಿದೆ.

(1966ರ ನವೆಂಬರ್, 9ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ **IV**–2ಎ ಯಲ್ಲಿ ಪುಟ ಸಂ. 4ರ ಸಂಖ್ಯೆ. 188 ಎಂದು ಪ್ರಕಟಿಸಲಾಗಿದೆ)

**IV**

**1967ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 1.–** ಪ್ರಸ್ತುತ, 1947ರ ಮುಂಬಯಿ ಹಿಡುವಳಿಗಳ ತುಂಡೀಕರಣ ನಿರೋಧ ಮತ್ತು ಸಂಯೋಜನಾ ಅಧಿನಿಯಮವು, ಮುಂಬಯಿ ಪ್ರದೇಶದಲ್ಲಿ ಜಾರಿಯಲ್ಲಿದೆ ಮತ್ತು 1956ರ ಹೈದ್ರಾಬಾದ್ ಹಿಡುವಳಿಗಳ ಸಂಯೋಜನೆ ಮತ್ತು ತುಂಡೀಕರಣ ನಿರೋಧ ಅಧಿನಿಯಮ, ಹೈದ್ರಾಬಾದ್ ಪ್ರದೇಶದಲ್ಲಿ ಜಾರಿಯಲ್ಲಿದೆ.

ಪ್ರಥಮ ಪಂಚವಾರ್ಷಿಕ ಯೋಜನೆ ಮತ್ತು ದ್ವಿತೀಯ ಪಂಚವಾರ್ಷಿಕ ಯೋಜನೆಗಳೆರಡೂ ಎಲ್ಲ ರಾಜ್ಯಗಳಲ್ಲಿ, ಹಿಡುವಳಿಗಳ ಸಂಯೋಜನೆಗಾಗಿ ಕಾರ್ಯಕ್ರಮಗಳನ್ನು ವಿಸ್ತರಿಸಬೇಕೆಂಬುದಕ್ಕೆ ಮತ್ತು ಅವುಗಳನ್ನು ತುಂಬಾ ಉತ್ಸಾಹದಿಂದ ಕಾರ್ಯಗತಗೊಳಿಸಬೇಕು ಎಂಬುದಕ್ಕೆ ಒತ್ತು ನೀಡಿವೆ. ಹಿಡುವಳಿಗಳ ತುಂಡೀಕರಣ ನಿರೋಧ ಮತ್ತು ಸಂಯೋಜನೆಗೆ ಸಂಬಂಧಿಸಿದಂತೆ ಹೊಸ ಮೈಸೂರು ರಾಜ್ಯದಾದ್ಯಂತ ಅನ್ವಯವಾಗಬಹುದಾದ ಏಕರೂಪದ ಕಾನೂನನ್ನು ಹೊಂದುವುದು ಅವಶ್ಯವೆಂದು ಭಾವಿಸಲಾಗಿದೆ. ಆದುದರಿಂದ ಈ ವಿಧೇಯಕ.

ವಿಧೇಯಕದ ಮುಖ್ಯ ವೈಶಿಷ್ಟಗಳೆಂದರೆ:–

(1) ಸಮುಚಿತ ಪ್ರಮಾಣದ ಪ್ರದೇಶಕ್ಕಿಂತ ಕಡಿಮೆ ವಿಸ್ತೀರ್ಣದ ಯಾವ ಭೂ–ನೆಲವು ಸಾಗುವಳಿಗೆ ಲಾಭದಾಯಕವಲ್ಲವೊ ಅದನ್ನು ತುಂಡು ಭೂಮಿಯೆಂದು ಪರಿಗಣಿಸಲಾಗಿದೆ;

(2) ಭೂಮಿಗಳನ್ನು ಇನ್ನು ಮುಂದೆ ತುಂಡೀಕರಣ ಮಾಡುವುದನ್ನು ಪ್ರತಿಬಂಧಿಸಲಾಗಿದೆ;

(3) ಪ್ರತಿಯೊಬ್ಬ ಹಿಡುವಳಿದಾರನಿಗೆ ಬೇರೆ ಬೇರೆ ಕಡೆ ಇದ್ದಂತ ಹೊಲಗದ್ದೆಗಳಿಗೆ ಯಾವ ಮೌಲ್ಯ ಇತ್ತೋ ಆ ಮೌಲ್ಯಕ್ಕೆ ಸಮನಾದ ಒಂದೇ ಕಡೆ ಇರುವಂಥ ಹೊಲಗದ್ದೆಯನ್ನು ನೀಡಲಾಗುವುದು;

(4) ಭೂಮಿಯನ್ನು ತುಂಡು ತುಂಡು ಮಾಡುವಂಥ ಪರಿಣಾಮವುಳ್ಳಂಥ ವರ್ಗಾವಣೆಗಳನ್ನು ಅಥವಾ ಪಾಲು ಮಾಡಿಕೊಳ್ಳುವುದನ್ನು ನಿಷೇಧಿಸಲಾಗಿದೆ;

(5) ಸಂಯೋಜನೆಯ ವಿಧಿವಿಧಾನಗಳು ನಡೆಯುತ್ತಿರುವಾಗ ಆತ ಎಷ್ಟೇ ಸಣ್ಣ ಹಿಡುವಳಿದಾರನಾಗಿದ್ದರೂ, ಭೂರಹಿತನಾಗುವುದಿಲ್ಲ ಮತ್ತು ಆತ ಎಷ್ಟೇ ದೊಡ್ಡ ಭೂ ಹಿಡುವಳಿದಾರನಾಗಿದ್ದರೂ ಸಂಯೋಜಿತ ವಿಸ್ತೀರ್ಣದಲ್ಲಿ ದೊಡ್ಡ ಹಿಡುವಳಿ ಸಿಗುವುದಿಲ್ಲ.

(6) ತುಂಡು ಭೂಮಿಯ ಯಾರೇ ಮಾಲೀಕನು ಜಿಲ್ಲಾಧಿಕಾರಿಯು ನಿರ್ಧರಿಸಿದ ಪರಿಹಾರವನ್ನು ಸಂದಾಯ ಮಾಡಿದ ಮೇಲೆ ಪಕ್ಕದಲ್ಲೇ ಇರುವ ಸರ್ವೆ ನಂಬರಿನ ಭೂ ಮಾಲೀಕನಿಗೆ ಅಂಥ ತುಂಡು ಭೂಮಿಯನ್ನು ವರ್ಗಾಯಿಸಬಹುದು. ಪಕ್ಕದಲ್ಲೇ ಇರುವ ಭೂ ಮಾಲೀಕನು ಅದನ್ನು ತೆಗೆದುಕೊಳ್ಳಲು ನಿರಾಕರಿಸಿದರೆ, ಆತನು ರಾಜ್ಯ ಸರ್ಕಾರಕ್ಕೆ ಅದನ್ನು ವರ್ಗಾಯಿಸಬಹುದು.

(7) ಹಿಡುವಳಿಯ ಮೇಲೆ ಗೇಣಿ, ಅಡಮಾನ, ಋಣ ಅಥವಾ ಇತರ ಪೂರ್ವಾಧಿಗಳ ಭಾರ ಇದ್ದರೆ, ಅಂಥ ಪೂರ್ವಾಧಿಗಳನ್ನು, ಆ ಹಿಡುವಳಿಯಿಂದ ಬೇರ್ಪಡಿಸತಕ್ಕದ್ದು ಮತ್ತು ಹಾಗೆ ಬೇರ್ಪಡಿಸಿದ್ದರಿಂದಾಗಿ ಯೋಜನೆಯಲ್ಲಿ ಅದರ ಮೂಲ ಮಾಲೀಕನಿಗೆ ಹಂಚಿದ ಹಿಡುವಳಿಗೆ ಅದೇ ಸೇರಿಕೊಳ್ಳುತ್ತದೆ.

ಆದುದರಿಂದ ಈ ವಿಧೇಯಕ.

(1964 ರ ಜೂನ್, 19ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ **IV**–2ಎ ಯಲ್ಲಿ, ಪುಟ ಸಂ. 26–27ರಲ್ಲಿ ಸಂಖ್ಯೆ. 156 ರಲ್ಲಿ ಎಂದು ಪ್ರಕಟಿಸಲಾಗಿದೆ)

**V**

**1967ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 5.–** ಮೈಸೂರು ಭೂ ಸುಧಾರಣೆಗಳ ಅಧಿನಿಯಮ, 1961ರ 14ನೇ ಪ್ರಕರಣವು, ತಮ್ಮ ಸ್ವಂತ ಸಾಗುವಳಿಗಾಗಿ ಅಥವಾ ಯಾವುದೇ ಕೃಷಿಯೇತರ ಉದ್ದೇಶಕ್ಕಾಗಿ ಭೂಮಿಯು ನಿಜವಾಗಿಯೂ ಬೇಕಾಗಿದೆ ಎಂದು ಕೋರುವ ಭೂಮಾಲೀಕರು ಹೇಳಿಕೆಗಳನ್ನು ಗೊತ್ತುಪಡಿಸಿದ ದಿನದಿಂದ ಎಂದರೆ 1965 ಅಕ್ಟೋಬರ್ 2ನೇ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ ನ್ಯಾಯಾಧಿಕರಣದಲ್ಲಿ ದಾಖಲಿಸಬೇಕಿತ್ತು ಎಂದು ಅಗತ್ಯಪಡಿಸಿತು. ಖಾತ್ರಿ ನೀರಾವರಿ ಸೌಲಭ್ಯಗಳು ಇರುವ ಪ್ರದೇಶಗಳ ನಿರ್ಧರಣೆಯಂಥ ಮತ್ತು ಪ್ರಕಟಣೆಯಂಥ ಮತ್ತು ತಾಲೂಕುವಾರು ಸರಾಸರಿ ವಾರ್ಷಿಕ ಮಳೆ ಪ್ರಮಾಣವನ್ನು ಅಧಿಸೂಚಿಸುವಂಥ ಕೆಲವು ಪ್ರಾರಂಭಿಕ ವಿಧಿವಿಧಾನಗಳು 1966ರ ಅಕ್ಟೋಬರ್, 2ಕ್ಕೆ ಮುಂಚೆ ಪೂರ್ಣವಾಗಲಿಲ್ಲವಾದ್ದರಿಂದ ಅಂಥ ಹೇಳಿಕೆಯನ್ನು ದಾಖಲು ಮಾಡುವುದು ಸಾಧ್ಯವಾಗುವಂತೆ ಕಾಲ ಮಿತಿಯನ್ನು, ಮೊದಲು 1966ರ ಮೈಸೂರು ಅಧ್ಯಾದೇಶ ಸಂಖ್ಯೆ 2ರ ಮೂಲಕ ಮೂರು ತಿಂಗಳಿಗೆ ವಿಸ್ತರಿಸಲಾಗಿತ್ತು. ಅದರ ಬದಲಿಗೆ 1966ರ ಮೈಸೂರು ಅಧಿನಿಯಮ ಸಂಖ್ಯೆ 38ನ್ನು ತರಲಾಯಿತು.

ವಿಸ್ತರಿಸಿದ ಕಾಲಮಿತಿಯು 1967ರ ಜನವರಿ, 2ರಂದು ಕೊನೆಗೊಂಡಿತು. ವಿಸ್ತರಿಸಿದ ಕಾಲಪರಿಮಿತಿಯ ಮುಕ್ತಾಯಕ್ಕೆ ಮುಂಚೆ, ಖಾತ್ರಿ ನೀರಾವರಿ ಸೌಲಭ್ಯಗಳು ಇರುವ ಪ್ರದೇಶಗಳ ನಿರ್ಧರಣೆ ಮತ್ತು ಪ್ರಕಟಣೆಯನ್ನು ಎಂಟು ಜಿಲ್ಲೆಗಳಲ್ಲಿ ಎಂದರೆ, (1) ಚಿಕ್ಕಮಗಳೂರು, (2) ಧಾರವಾಡ, (3) ಗುಲ್ಬರ್ಗ, (4) ಹಾಸನ, (5) ಮೈಸೂರು, (6) ಶಿವಮೊಗ್ಗ, (7) ದಕ್ಷಿಣ ಕನ್ನಡ, ಮತ್ತು (8) ತುಮಕೂರು ಜಿಲ್ಲೆಗಳಲ್ಲಿ ಪೂರ್ಣಗೊಳಿಸಲಾಗಲಿಲ್ಲ. ಆದುದರಿಂದ ಈ ಎಂಟು ಜಿಲ್ಲೆಗಳಲ್ಲಿ 14ನೇ ಪ್ರಕರಣದ ಮೇರೆಗೆ ಭೂಮಾಲೀಕರು ಹೇಳಿಕೆಗಳನ್ನು ದಾಖಲಿಸುವುದಕ್ಕಾಗಿ ಕಾಲಮಿತಿಯನ್ನು 1967ರ ಜನವರಿ, 2ರಿಂದ ನಾಲ್ಕು ತಿಂಗಳುಗಳವರೆಗೆ ಮತ್ತಷ್ಟು ವಿಸ್ತರಿಸುವುದು ಅವಶ್ಯವೆಂದು ಪರಿಗಣಿಸಲಾಯಿತು. ಈ ಕಾಲಮಿತಿಯನ್ನು 1967ರ ಅಧ್ಯಾದೇಶ ಸಂ.1ನ್ನು ಹೊರಡಿಸುವ ಮೂಲಕ ವಿಸ್ತರಿಸಲಾಯಿತು.

ಈಗ 1967ರ ಅಧ್ಯಾದೇಶ ಸಂಖ್ಯೆ 1ರ, ಬದಲಿಗೆ ಈ ವಿಧೇಯಕವನ್ನು ತರಲು ಉದ್ದೇಶಿಸಲಾಗಿದೆ.

(1967ರ ಮಾರ್ಚ್, 27ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–2ಎ ಯಲ್ಲಿ, ಪುಟ ಸಂ. 3ರಲ್ಲಿ ಸಂಖ್ಯೆ. 79 ರಲ್ಲಿ ಪ್ರಕಟಿಸಲಾಗಿದೆ).

**VI**

**1968ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 11.–** ಮುಂಬಯಿ ಪ್ರದೇಶದಲ್ಲಿರುವ ಕೆಲವು ಭೂ– ನ್ಯಾಯಾಧಿಕರಣಗಳು, ಮೈಸೂರು ಭೂಸುಧಾರಣೆಗಳ ಅಧಿನಿಯಮ, 1961ರ 14ನೇ ಪ್ರಕರಣದ ಮೇರೆಗೆ ದಾಖಲಿಸಿದ ಹೇಳಿಕೆಗಳನ್ನು ವಿಲೆ ಮಾಡುವಾಗ ಅಧಿನಿಯಮದ 16(10 ಬಿ) ಪ್ರಕರಣದ ದೃಷ್ಟಿಯಿಂದ, ಮುಂಬಯಿ ಗೇಣಿದಾರಿಕೆ ಮತ್ತು ಕೃಷಿ ಭೂಮಿಗಳ ಅಧಿನಿಯಮ, 1948ರ 31, 31ಬಿ ಮತ್ತು 31ಸಿ ಪ್ರಕರಣಗಳ ಉಪಬಂಧಗಳನ್ನು, 1957ರ ಮುಂಬಯಿ ಗೇಣಿದಾರಿಕೆ (ಉಪಬಂಧಗಳ ಅಮಾನತು ಮತ್ತು ತಿದ್ದುಪಡಿ) ಅಧಿನಿಯಮವು, ಅಮಾನತುಗೊಳಿಸಿರುವುದರಿಂದಾಗಿ (1957ರ ಮೈಸೂರು ಅಧಿನಿಯಮ 13) ಆ ಉಪಬಂಧಗಳು ಅನ್ವಯವಾಗುವುದಿಲ್ಲವೆಂದು ನಿರ್ಣಯಿಸಿದ್ದವು. ಸದರಿ ಪ್ರಕರಣಗಳ ಉಪಬಂಧಗಳು ಅಂಥ ಮೊಕದ್ದಮೆಗಳಿಗೆ ಅನ್ವಯವಾಗಬೇಕೆಂಬ ಉದ್ದೇಶವಿದ್ದುದರಿಂದ, ಅದನ್ನು ಸ್ಪಷ್ಟಪಡಿಸುವುದು ಅವಶ್ಯ ಎಂದು ಪರಿಗಣಿಸಲಾಗಿದೆ. ಅಧಿನಿಯಮದ 6ನೇ ಪ್ರಕರಣದಲ್ಲಿ ಹೇಳಿರುವ ರಕ್ಷಣೆಯು ಕೈಗಾರಿಕೆ ಮತ್ತು ವಾಣಿಜ್ಯ ಉದ್ಯಮಗಳ ಹೆಸರಿನಲ್ಲಿರುವ ಗೇಣಿಗಳಿಗೆ ಅನ್ವಯವಾಗುವುದಿಲ್ಲ ಎಂದು ಉಪಬಂಧವನ್ನು ಕಲ್ಪಿಸಲು 103ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದು ಸಹ ಅವಶ್ಯಕವಾಗಿದೆ. ಅಧಿನಿಯಮದ 8(3)ನೇ ಪ್ರಕರಣದ ಮೇರೆಗೆ ನಿಯಮಿಸಿದ ಪ್ರಾಧಿಕಾರದ ಆದೇಶದ ವಿರುದ್ಧ ಅಪೀಲನ್ನು ಸಲ್ಲಿಸುವುದಕ್ಕೆ ಉಪಬಂಧ ಕಲ್ಪಿಸುವುದು ಅತ್ಯಗತ್ಯವಾಗಿದೆ. ಆದುದರಿಂದ ಈ ವಿಧೇಯಕ.

(1967ರ ಡಿಸೆಂಬರ್, 6ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ **IV**–2ಎ ಯಲ್ಲಿ, ಪುಟ ಸಂ. 4ರಲ್ಲಿ ಸಂಖ್ಯೆ. 275 ರಲ್ಲಿ ಪ್ರಕಟಿಸಲಾಗಿದೆ)

VII

**1970ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 6.–** ಭೂಸುಧಾರಣೆಗಳ ಅಧಿನಿಯಮದ ಮೇರೆಗೆ ಪುನಃ ವಶಕ್ಕೆ ತೆಗೆದುಕೊಳ್ಳುವುದಕ್ಕಾಗಿ ಸಲ್ಲಿಸಿರುವ ಅರ್ಜಿಗಳು, ಗೇಣಿ ಅರ್ಜಿಗಳು ಮತ್ತು ಇತರ ಸಂಕೀರ್ಣ ಅರ್ಜಿಗಳು ಬಹು ಸಂಖ್ಯೆಯಲ್ಲಿ ಸಲ್ಲಿಕೆಯಾಗಿರುವುದರಿಂದ, ಅವುಗಳ ವಿಲೇವಾರಿ ಉದ್ದೇಶಕ್ಕಾಗಿ ವಿಶೇಷ ನ್ಯಾಯಾಧೀಕರಣಗಳನ್ನು ನೇಮಕ ಮಾಡಿರುವುದರಿಂದ ಮುನ್ಸಿಫ್ ಕೋರ್ಟುಗಳು ಭೂ ನ್ಯಾಯಾಧಿಕರಣವಾಗಿ ಕಾರ್ಯನಿರ್ವಹಿಸಲು ಅವುಗಳಿಗೆ ಅಧಿಕಾರ ನೀಡಿ ಮತ್ತು ನ್ಯಾಯಿಕ ಪ್ರಕಾರ್ಯಗಳನ್ನು ಕಾರ್ಯಾಂಗ ಪ್ರಕಾರ್ಯಗಳಿಂದ ಪ್ರತ್ಯೇಕಗೊಳಿಸಿ ಆ ಕಾರ್ಯಾಂಗ ಪ್ರಕಾರ್ಯಗಳನ್ನು ತಹಸೀಲ್ದಾರರಿಗೆ ವರ್ಗಾಯಿಸಿ ಆ ಎಲ್ಲಾ ಅರ್ಜಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡುವುದೇ ವಿಧೇಯಕದ ಮುಖ್ಯ ಉದ್ದೇಶವಾಗಿದೆ. ಪ್ರಸ್ತುತ ಭೂ ನ್ಯಾಯಾಧಿಕರಣದ ಅಧಿಕಾರ ವ್ಯಾಪ್ತಿಯನ್ನು ಹಲವಾರು ಪ್ರಕರಣಗಳಲ್ಲಿ ಒಂದಕ್ಕಿಂತ ಹೆಚ್ಚು ತಾಲ್ಲೂಕುಗಳಿಗೆ ವಿಸ್ತರಿಸಿರುವುದರಿಂದ, ಪಕ್ಷಕಾರರಿಗೆ ಸಹ ಅನುಕೂಲವಾಗುತ್ತದೆ ಮತ್ತು ಈ ಹೊಸ ಏರ್ಪಾಡಿನಿಂದ ಎಲ್ಲ ಪದೇಶಗಳಲ್ಲಿ ನ್ಯಾಯಾಧಿಕರಣಗಳನ್ನು ಸುಲಭವಾಗಿ ಸಂಪರ್ಕಿಸಲು ಸಾಧ್ಯವಾಗುತ್ತದೆ. ಭಾರತ ಸರ್ಕಾರವು ಇಚ್ಛಿಸಿದಂತೆ ಭೂಸುಧಾರಣೆಗಳ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿದ ವಿಸ್ತೀರ್ಣಗಳನ್ನು ದಶಮಾಂಶ ಪದ್ಧತಿಯಲ್ಲಿ ಪರಿಭಾಷಿಸಲು ಮತ್ತು ಗೇಣಿದಾರ ಎಂದರೆ ಯಾರು ಎಂಬುದನ್ನು ನಿರ್ಧರಿಸಲು ನ್ಯಾಯಾಲಯಕ್ಕೆ ಇರುವ ಅಧಿಕಾರಗಳಿಗೆ ಸಂಬಂಧಿಸಿದಂತೆ ನ್ಯೂನತೆ ಇದೆ ಎಂದು ಉಚ್ಚ ನ್ಯಾಯಾಲಯವು ತನ್ನ ತೀರ್ಪುಗಳಲ್ಲಿ ಒಂದು ತೀರ್ಪಿನಲ್ಲಿ ಅಭಿಪ್ರಾಯಪಟ್ಟಿರುವುದರಿಂದ ಆ ನ್ಯೂನತೆಯನ್ನು ಸರಿಪಡಿಸಲು ಈ ಅವಕಾಶವನ್ನು ಬಳಸಿಕೊಳ್ಳಲಾಗಿದೆ.

(1970ರ ಡಿಸೆಂಬರ್, 12ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ **IV**–2ಎ ಯಲ್ಲಿ ಸಂ. 16 ರಲ್ಲಿ ಪ್ರಕಟಿಸಲಾಗಿದೆ)

VIII

**1972ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 4.–** 1966ರ ತರುವಾಯ ಭೂ ಮಾಲೀಕರು ದಾಖಲಿಸಿದ ಗೇಣಿ ವಸೂಲಿ ದಾವೆಗಳನ್ನು ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ರಿಟ್ ಅರ್ಜಿಗಳ ಮೇಲೆ ಅದು ನೀಡಿದ ನಿರ್ದೇಶನಗಳಿಗೆ ಅನುಸಾರವಾಗಿ, ಅನುಕ್ರಮವಾಗಿ ತಹಸೀಲ್ದಾರರು ಮತ್ತು ಮುಖ್ಯ ಮಾರುಕಟ್ಟೆ ಅಧಿಕಾರಿಯು ಅಧಿಸೂಚಿಸಿದ ಪ್ರಮುಖ ಬೆಳೆಗಳ ಸರಾಸರಿ ಇಳುವರಿಗಳು ಮತ್ತು ಅಂಥ ಬೆಳೆಗಳ ಬೆಲೆಗಳನ್ನು ಪರಿಷ್ಕರಿಸಬೇಕಾಗಿತ್ತು. ಆದರೆ ಕೆಲವು ಪ್ರಕರಣಗಳಲ್ಲಿ ಹಾಗೆ ಮಾಡಲು ಆಗಲಿಲ್ಲ. ಸರಾಸರಿ ಇಳುವರಿ ಬಗೆಗಿನ ಅಧಿಸೂಚನೆಗಳನ್ನು 1971ನೇ ವರ್ಷದಲ್ಲಿ ಮಾತ್ರ ಕೆಲವು ಪ್ರಕರಣಗಳಲ್ಲಿ ಅಂತಿಮಗೊಳಿಸಬಹುದಿತ್ತು. ತತ್ಪರಿಣಾಮವಾಗಿ, 1966ರಿಂದ ದಾಖಲಿಸಿದ ಗೇಣಿ ವಸೂಲಿ ದಾವೆಗಳನ್ನು ಈಗ ವಿಲೆ ಮಾಡಲಾಗುತ್ತಿದೆ. 1966ರಿಂದ ಸಂಚಯವಾದ ಗೇಣಿ ಬಾಕಿಗಳನ್ನು ಸಂದಾಯ ಮಾಡುವುದು ಗೇಣಿದಾರರ ಮೇಲೆ ಬಹಳ ದೊಡ್ಡ ಹೊರೆಯಾಗಿದೆ.

ಎರಡು ವರ್ಷಗಳ ಗೇಣಿಗೆ ಸಮನಾದ ಮೊತ್ತವನ್ನು ಸಂದಾಯ ಮಾಡಿದ್ದರೆ, ಅಂಥ ಗೇಣಿದಾರರನ್ನು ಒಕ್ಕಲೆಬ್ಬಿಸದಂತೆ ರಕ್ಷಣೆ ಕೊಡಲು ಈ ಪ್ರಸ್ತುತ ವಿಧೇಯಕವು ಉದ್ದೇಶಿಸಿದೆ. ಒಕ್ಕಲೆಬ್ಬಿಸಿದ ಗೇಣಿದಾರರಿಗೆ ಕೆಲವು ಸಂದರ್ಭಗಳಲ್ಲಿ ಸ್ವಾಧೀನತೆಯನ್ನು ಮರಳಿ ಕೊಡಲು ಸಹ ಉಪಬಂಧವನ್ನು ಕಲ್ಪಿಸಲಾಗಿದೆ.

(1972ರ ಏಪ್ರಿಲ್, 11ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ **IV**–2ಎ ಯಲ್ಲಿ ಪುಟ ಸಂ. 5ರಲ್ಲಿ ಸಂಖ್ಯೆ 135ರಲ್ಲಿ ಪ್ರಕಟಿಸಲಾಗಿದೆ)

IX

**1973ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 2.–** 1972 ಮೇ 11ರಿಂದ ಜಾರಿಗೆ ಬಂದಿರುವುದಾಗಿ ಭಾವಿಸಲಾದ ಮೈಸೂರು ಭೂಸುಧಾರಣೆಗಳ (ತಿದ್ದುಪಡಿ ಮತ್ತು ಸಂಕೀರ್ಣ ಉಪಬಂಧಗಳ) ಅಧಿನಿಯಮ, 1972ರಲ್ಲಿ, ಗೇಣಿದಾರನು ಎರಡು ವರ್ಷಗಳ ಅವಧಿಗೆ ಬಾಕಿ ಇರುವ ಗೇಣಿಗೆ ಸಮನಾದ ಮೊತ್ತವನ್ನು ಭೂಮಾಲೀಕನಿಗೆ ಸಂದಾಯ ಮಾಡಿದ್ದರೆ ಗೇಣಿದಾರನು ಗೇಣಿ ಸಂದಾಯ ಮಾಡುವಲ್ಲಿ ತಪ್ಪಿದ ಕಾರಣದ ಮೇಲೆ ಭೂ ಮಾಲೀಕನಿಗೆ ಯಾವುದೇ ಭೂಮಿಯ ಸ್ವಾಧೀನತೆಯನ್ನು ಪುನಃ ನೀಡುವುದಕ್ಕೆ ಮಾಡಿದ ಯಾವುದೇ ಆದೇಶವನ್ನು ಜಾರಿಗೊಳಿಸತಕ್ಕದ್ದಲ್ಲ ಎಂದು ಇತರ ವಿಷಯಗಳ ಜೊತೆಗೆ ಉಪಬಂಧ ಕಲ್ಪಿಸಲಾಗಿದೆ, ಅಮಲಜಾರಿ ಮಾಡುವುದಕ್ಕೆ ಸಲ್ಲಿಸಿದ ಡಿಕ್ರಿಗಳು ಒಂದಕ್ಕಿಂತ ಹೆಚ್ಚಿಗೆ ಇದ್ದಂಥ ಸಂದರ್ಭದಲ್ಲಿ ಅನ್ಯಾಯವಾಗಿ ಗೇಣಿದಾರರನ್ನು ಒಕ್ಕಲೆಬ್ಬಿಸದಂತೆ ರಕ್ಷಣೆ ಕೊಡಲು ಈ ಉಪಬಂಧವು ಸಾಕಾಗುವುದಿಲ್ಲವೆಂದು ಪರಿಗಣಿಸಲಾಯಿತು. ಗೇಣಿ ಬಾಕಿಗಳನ್ನು ಸುಲಭ ಕಂತುಗಳಲ್ಲಿ ಸಂದಾಯ ಮಾಡುವುದಕ್ಕೆ ಈ ಉಪಬಂಧದಲ್ಲಿ ಅವಕಾಶ ಕಲ್ಪಿಸಿಲ್ಲವಾದ್ದರಿಂದ, ಈ ಉಪಬಂಧದ ಮೇರೆಗೆ ಗೇಣಿದಾರರು ಅಗತ್ಯ ಪರಿಹಾರವನ್ನು ಪಡೆಯಲು ಆಗುವುದಿಲ್ಲವೆಂದು ಸಹ ಪರಿಗಣಿಸಲಾಯಿತು.

ಗೇಣಿದಾರರಿಗೆ ಇನ್ನೂ ಹೆಚ್ಚಿನ ರಕ್ಷಣೆಗಳನ್ನು ತುರ್ತಾಗಿ ಒದಗಿಸುವ ದೃಷ್ಟಿಯಿಂದ,–

(**i**) ಗೇಣಿದಾರನ ಸಂದಾಯ ಸಾಮರ್ಥ್ಯವನ್ನು ಗಮನದಲ್ಲಿರಿಸಿಕೊಂಡು ಮುನ್ಸಿಫ್ ನ್ಯಾಯಾಲಯಗಳು ನಿಗದಿಪಡಿಸುವ ಸುಲಭ ಕಂತುಗಳಲ್ಲಿ ಸಂಚಿತ ಗೇಣಿ ಬಾಕಿಗಳ ವಸೂಲಾತಿಗೆ;

(**ii**) ಭೂ–ಕಂದಾಯವನ್ನು ರದ್ದು ಮಾಡಿದಾಗ ಅಥವಾ ಮನ್ನಾ ಮಾಡಿದಾಗ ಕಂತುಗಳ ಸಂದಾಯವನ್ನು ಮುಂದೂಡುವುದಕ್ಕೆ;

(**iii**) ಡಿಕ್ರಿಯನ್ನು ಅಥವಾ ಆದೇಶವನ್ನು ಜಾರಿ ಮಾಡುವಾಗ ದಸ್ತಗಿರಿ ಆಗದಂತೆ ಅಥವಾ ಕಾರಾವಾಸಕ್ಕೆ ಕಳಿಸದಂತೆ ಗೇಣಿದಾರನಿಗೆ ವಿನಾಯಿತಿ ನೀಡುವುದಕ್ಕೆ;

(**iv**) ಗೇಣಿದಾರನು ಕಂತುಗಳನ್ನು ಸಂದಾಯ ಮಾಡಲು ಉದ್ದೇಶ ಪೂರ್ವಕವಾಗಿ ತಪ್ಪಿದ್ದಕ್ಕಾಗಿ ಡಿಕ್ರಿಗಳನ್ನು ಜಾರಿಗೊಳಿಸುವುದಕ್ಕೆ

– ಉಪಬಂಧ ಕಲ್ಪಿಸಿ ಮೈಸೂರು ಗೇಣಿದಾರರ (ಗೇಣಿ ಬಾಕಿಗಳನ್ನು ಸಂದಾಯ ಮಾಡುವುದಕ್ಕೆ ಸಂಬಂಧಿಸಿದಂತೆ ಪರಿಹಾರ) ಅಧ್ಯಾದೇಶ 1972ನ್ನು 1972ರ ಅಕ್ಟೋಬರ್, 28 ರಂದು ಹೊರಡಿಸಲಾಯಿತು.

ಸದರಿ ಅಧ್ಯಾದೇಶದ ಬದಲು ಈ ವಿಧೇಯಕವನ್ನು ತರಲು ಉದ್ದೇಶಿಸಲಾಗಿದೆ.

(1972ರ ನವೆಂಬರ್, 22ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ **IV**–2ಎ ಯಲ್ಲಿ, ಪುಟ ಸಂ. 6ರಲ್ಲಿ ಸಂಖ್ಯೆ. 553ರಲ್ಲಿ ಪ್ರಕಟಿಸಲಾಗಿದೆ)

**X**

**1974ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 1.–** ಮೈಸೂರು ಭೂ ಸುಧಾರಣೆಗಳ ಅಧಿನಿಯಮ, 1961ರ ಪ್ರಸ್ತುತ ಉಪಬಂಧಗಳಿಗನುಸಾರವಾಗಿ, ಒಬ್ಬ ವ್ಯಕ್ತಿಯು 1965ರ ಅಕ್ಟೋಬರ್, 2ನೇ ದಿನಾಂಕದ ತರುವಾಯ 18 ಸ್ಟಾಂಡರ್ಡ್ ಎಕರೆಗಳವರೆಗೆ ಅಥವಾ ಕೊನೆಯ ವರ್ಗದ ಭೂಮಿಯ 144 ಎಕರೆಗಳವರೆಗೆ ಧಾರಣ ಮಾಡಬಹುದಿತ್ತು. 1965ರ ಅಕ್ಟೋಬರ್ 2ಕ್ಕೆ ಮುಂಚೆ ಭೂಮಿಯನ್ನು ಧಾರಣ ಮಾಡಿದ ವ್ಯಕ್ತಿಯ ಸಂದರ್ಭದಲ್ಲಿ 27 ಸ್ಟಾಂಡರ್ಡ್ ಎಕರೆಗಳ ವಿಸ್ತೀರ್ಣದ ಭೂಮಿಯನ್ನು ಅಥವಾ ಭೂಮಿಯ ಕೊನೆಯ ವರ್ಗದ 216 ಎಕರೆಗಳಷ್ಟು ವಿಸ್ತೀರ್ಣದ ಭೂಮಿಯನ್ನು ಧಾರಣ ಮಾಡುವುದನ್ನು ಮುಂದುವರಿಸಲು ಅವನಿಗೆ ಅನುಮತಿಕೊಡಲಾಯಿತು. ಕುಟುಂಬದ ಅಥವಾ ಜಂಟಿ ಕುಟುಂಬದ ಸಂದರ್ಭದಲ್ಲಿ ಐದಕ್ಕಿಂತ ಹೆಚ್ಚು ಜನರಿರುವ ಕುಟುಂಬದಲ್ಲಿ ಪ್ರತಿಯೊಬ್ಬ ಸದಸ್ಯನಿಗೆ, ಕುಟುಂಬಕ್ಕೆ ಅನ್ವಯವಾಗಬಹುದಾದ ಗರಿಷ್ಠ ಭೂ ಪರಿಮಿತಿಯ ಎರಡರಷ್ಟಕ್ಕೆ ಒಳಪಟ್ಟು ಆರು ಹೆಚ್ಚುವರಿ ಸ್ಟಾಂಡರ್ಡ್ ಎಕರೆಯನ್ನು ಧಾರಣ ಮಾಡಲು ಅನುಮತಿಸಲಾಗಿದೆ. ಈ ರೀತಿಯಾಗಿ 1965ರ ಅಕ್ಟೋಬರ್, 2ಕ್ಕೆ ಮುಂಚೆ ಭೂಮಿಗಳನ್ನು ಧಾರಣ ಮಾಡಿರುವ ದೊಡ್ಡ ಕುಟುಂಬಗಳು ಕೊನೆಯ ವರ್ಗದ ಭೂಮಿಯ 432 ಎಕರೆಗಳವರೆಗೆ ಧಾರಣ ಮಾಡಬಹುದಾಗಿದೆ. ಸಾಗುವಳಿ ಮಾಡಲು ಇಚ್ಛಿಸುವ ಭೂರಹಿತ ವ್ಯಕ್ತಿಗಳ ದೊಡ್ಡ ಸಂಖ್ಯೆಯನ್ನು ಗಮನದಲ್ಲಿರಿಸಿದರೆ ಇದು ತೀರಾ ಉದಾರವಾದ ಪ್ರಮಾಣವೆಂದು ಪರಿಗಣಿಸಲಾಗಿದೆ.

ಈಗಿರುವ ಕಾನೂನು ಕುಟುಂಬಕ್ಕೆ ಈ ಅರ್ಥ ವಿವರಣೆ ಕೊಟ್ಟಿದೆ:–

ವ್ಯಕ್ತಿಗೆ ಸಂಬಂಧಿಸಿದಂತೆ "ಕುಟುಂಬ" ಎಂದರೆ ಆ ವ್ಯಕ್ತಿ, ಅವನಿಗೆ/ಅವಳಿಗೆ ಮದುವೆ ಆಗಿದ್ದರೆ, ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಅವಲಂಬಿತ ಮಕ್ಕಳು ಮತ್ತು ಅಂಥ ವ್ಯಕ್ತಿಯ ಮೊಮ್ಮಕ್ಕಳು.

ಆದರೂ ಹೊಸ ಅರ್ಥವಿವರಣೆಯನ್ನು ಅಳವಡಿಸಿಕೊಳ್ಳಲು ಉದ್ದೇಶಿಸಲಾಗಿದೆ. ಅದರಲ್ಲಿ ಕುಟುಂಬ ಪದದ ಅರ್ಥ ವ್ಯಾಪ್ತಿಗೆ ಗಂಡ, ಹೆಂಡತಿ ಮತ್ತು ಅಪ್ರಾಪ್ತ ಮಕ್ಕಳನ್ನು ಸೇರಿಸಬೇಕಾಗುತ್ತದೆ. ಇದೇ ನಿಜವಾದ ಕುಟುಂಬ. ಗಂಡ, ಹೆಂಡತಿ ಮತ್ತು ಮೂವರು ಅಪ್ರಾಪ್ತ ಮಕ್ಕಳು ಇರುವಂಥ ಕುಟುಂಬಕ್ಕೆ ಗರಿಷ್ಠ ಭೂಪರಿಮಿತಿಯು ವರ್ಷದಲ್ಲಿ ಭತ್ತದ ಎರಡು ಬೆಳೆಗಳನ್ನು ಅಥವಾ ಕಬ್ಬಿನ ಒಂದು ಬೆಳೆಯನ್ನು ಬೆಳೆಯಲು ಬೇಕಾಗುವ ಖಾತ್ರಿ ನೀರಾವರಿ ಸೌಲಭ್ಯ ಹೊಂದಿದ 10 ಎಕರೆ ಭೂಮಿ ಅಥವಾ ನದಿ ಯೋಜನೆಗಳಿಂದ ಮತ್ತು ದೊಡ್ಡ ಕೆರೆಗಳಿಂದ ನೀರಾವರಿ ಸೌಲಭ್ಯ ಕಲ್ಪಿಸಿದರೆ ಭತ್ತದ ಒಂದು ಬೆಳೆ ಬೆಳೆಯಲು ಬೇಕಾಗುವಂಥ ನೀರಾವರಿ ಸೌಲಭ್ಯವಿರುವ 15 ಎಕರೆ ಭೂಮಿ; ಮತ್ತು ಸಣ್ಣ ಕೆರೆಗಳಿಂದ ನೀರಾವರಿ ಸೌಲಭ್ಯ ಕಲ್ಪಿಸಿದ್ದರೆ 18 ಎಕರೆಗಳ ಭೂಮಿ, ಏತ ನೀರಾವರಿ ವ್ಯಾಪ್ತಿಗೆ ಬರುವ ಭೂಮಿಗಳಿಗೆ ಗರಿಷ್ಠ ಮಿತಿ 15 ಎಕರೆಗಳು. ಮಳೆಯಾಶ್ರಿತ ತರಿ ಭೂಮಿಗಳಿಗೆ ಗರಿಷ್ಠ ಮಿತಿ 25 ಎಕರೆಗಳು. ಖುಷ್ಕಿ ಭೂಮಿಗಳಿಗೆ ಮಳೆ ಬೀಳುವ ಪ್ರಮಾಣಕ್ಕನುಸಾರವಾಗಿ ಗರಿಷ್ಠ ಮಿತಿ 36 ಎಕರೆಗಳು, 45 ಎಕರೆಗಳು ಮತ್ತು 54 ಎಕರೆಗಳು, 5ಕ್ಕಿಂತ ಹೆಚ್ಚು ಜನರು ಇರುವಂತಹ ದೊಡ್ಡ ಕುಟುಂಬಗಳಿಗೆ, ಒಟ್ಟಾರೆಯಾಗಿ ಮೊದಲ ವರ್ಗದ ಭೂಮಿಯ ಇಪ್ಪತ್ತು ಎಕರೆಗಳ ಒಟ್ಟಾರೆ ಮಿತಿಗೆ ಒಳಪಟ್ಟು ಹೆಚ್ಚಿಗೆ ಇರುವ ಪ್ರತಿಯೊಬ್ಬ ವ್ಯಕ್ತಿ ಮೊದಲ ವರ್ಗದ ಭೂಮಿಯ ಎರಡು ಎಕರೆಗಳಂತೆ ಪ್ರಮಾಣನುಸಾರ ಹೆಚ್ಚಳವನ್ನು ಮಾಡಲಾಗಿದೆ.

ಕುಟುಂಬಕ್ಕೆ ಭೂ ಗರಿಷ್ಠ ಮಿತಿಯನ್ನು ಅನ್ವಯಿಸುವಾಗ ಮತ್ತು ಹೆಚ್ಚುವರಿ ಭೂಮಿಯನ್ನು ನಿರ್ಧರಿಸುವಾಗ, ಕುಟುಂಬದ ಪ್ರತಿಯೊಬ್ಬನು ಧಾರಣ ಮಾಡಿದ ಭೂಮಿಗಳನ್ನು ಒಟ್ಟಿಗೇ ಸೇರಿಸಲಾಗುವುದು. ಕುಟುಂಬದಲ್ಲಿ ಗಂಡ ಮತ್ತು ಹೆಂಡತಿಯು ಪ್ರತ್ಯೇಕವಾಗಿ ಭೂಮಿಗಳನ್ನು ಧಾರಣ ಮಾಡಿದ್ದರೆ, ಕುಟುಂಬದ ಪ್ರತಿಯೊಬ್ಬನು ಧಾರಣ ಮಾಡಿದ ಹಿಡುವಳಿಯಿಂದ ಪ್ರಮಾಣಾನುಸಾರ ಆಧಾರದ ಮೇಲೆ ಹೆಚ್ಚುವರಿ ಭೂಮಿಯನ್ನು ಬಿಟ್ಟುಕೊಡತಕ್ಕದ್ದು.

ಸಹಕಾರಿ ಬೇಸಾಯ ಸೊಸೈಟಿಗಳು ಧಾರಣ ಮಾಡಿರುವ ಭೂಮಿಗಳಿಗೆ ಗರಿಷ್ಠ ಮಿತಿಯು ಅನ್ವಯವಾಗುವುದಿಲ್ಲ. ಆದರೆ, ಅಂಥ ಸೊಸೈಟಿಯಲ್ಲಿ ಹಾಗೂ ಫರ್ಮ್‌ಗಳಲ್ಲಿ, ಸಂಘಗಳಲ್ಲಿ ಮತ್ತು ಖಾಸಗಿ ಟ್ರಸ್ಟ್‌ಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಯು ಹೊಂದಿದ ಭೂ ವಿಸ್ತೀರ್ಣವನ್ನು ಗರಿಷ್ಠ ಮಿತಿಯನ್ನು ಅನ್ವಯಿಸುವಾಗ ಆತನ ವೈಯಕ್ತಿಕ ಹಿಡುವಳಿ ಎಂಬುದಾಗಿ ಭಾವಿಸತಕ್ಕದ್ದು.

ಕೃಷಿಯೇತರ ಮೂಲದಿಂದ ವಾರ್ಷಿಕವಾಗಿ 12,000/– ರೂ.ಗಳಿಗಿಂತ ಕಡಿಮೆಯಲ್ಲದ ನಿಶ್ಚಿತ ಆದಾಯ ಹೊಂದಿರುವ ವ್ಯಕ್ತಿಗಳಿಗೆ ಕೃಷಿ ಭೂಮಿಗಳನ್ನು ಹೊಂದಲು ಅನುಮತಿ ಕೊಡಲಾಗುವುದಿಲ್ಲ. ಸ್ವತಃ ಸಾಗುವಳಿ ಮಾಡದಿರುವ ವ್ಯಕ್ತಿಗಳಿಗೂ ಕೃಷಿ ಭೂಮಿ ಹೊಂದಲು ಅನುಮತಿಕೊಡಲಾಗುವುದಿಲ್ಲ.

"ಸ್ವತಃ ಸಾಗುವಳಿ ಮಾಡುವ" ಈ ಪದವನ್ನು, ಭೂಮಿಯು ಯಾವ ಗ್ರಾಮದ ಎಲ್ಲೆಗಳೊಳಗೆ ಇರುವುದೋ ಆ ಗ್ರಾಮದ ಎಲ್ಲೆಗಳಿಂದ 16 ಕಿಲೋಮೀಟರುಗಳ ವ್ಯಾಪ್ತಿಯೊಳಗೆ ವಾಸಸ್ಥಾನ ಇರಬೇಕೆಂದು ಅಗತ್ಯಪಡಿಸುವ ಸಲುವಾಗಿ ಅರ್ಥ ವಿವರಣೆ ಮಾಡಲಾಗಿದೆ.

ದನಗಳನ್ನು ಮೇಯಿಸುವುದಕ್ಕಾಗಿ ಮಾತ್ರವೇ ಬಳಸಲಾಗುವ ಭೂಮಿಗಳಿಗೆ, ಅರಣ್ಯ ಭೂಮಿಗೆ, ವಿಶಿಷ್ಟ ಬೇಸಾಯ ಕ್ಷೇತ್ರಗಳಿಗೆ ಬಳಸಲಾಗುವ ಭೂಮಿಗೆ, ಕಬ್ಬು ಬೇಸಾಯ ಕ್ಷೇತ್ರಗಳಿಗೆ ಬಳಸಲಾಗುವ ಭೂಮಿಗೆ ಮತ್ತು ದಕ್ಷವಾಗಿ ನಿರ್ವಹಿಸಿಕೊಂಡು ಬಂದ ಬೇಸಾಯ ಕ್ಷೇತ್ರಗಳಿಗೆ ಬಳಸಲಾಗುವ ಭೂಮಿಗೆ ಪ್ರಸ್ತುತ ಲಭ್ಯವಿರುವ ಗರಿಷ್ಠ ಮಿತಿ ವಿನಾಯಿತಿಗಳನ್ನು ತೆಗೆದುಹಾಕಲಾಗಿದೆ ಮತ್ತು ವಿಸ್ತೀರ್ಣಕ್ಕೆ ಇರುವಂತಹ ಗರಿಷ್ಠ ವಿನಾಯಿತಿಗಳನ್ನು ಈ ಮುಂದಿನ ಸಂದರ್ಭಗಳಲ್ಲಿ ಮಾತ್ರವೇ ನೀಡಲಾಗುತ್ತದೆ, ಎಂದರೆ:–

(ಎ) ಸರ್ಕಾರಿ ಒಡೆತನದಲ್ಲಿರುವ ಅಥವಾ ಇಪ್ಪತ್ತು ವರ್ಷಗಳಿಗೆ ಮೀರದ ಅವಧಿಗೆ ಸರ್ಕಾರದಿಂದ ಗೇಣಿಗೆ ಪಡೆದ ಭೂಮಿಗಳು;

(ಬಿ) ಶೌರ್ಯ ಪುರಸ್ಕಾರವಾಗಿ ನೀಡಿದ ಭೂಮಿಗಳು;

(ಸಿ) ಸರ್ಕಾರವು ಅನುಮೋದಿಸಿದ ಅಶ್ವ ತಳಿ ಸಂವರ್ಧನೆ ಕೇಂದ್ರಗಳಿಗೆ ಸೇರಿದ ಭೂಮಿಗಳು;

(ಡಿ) ಕೃಷಿ ಉತ್ಪನ್ನ ಮಾರುಕಟ್ಟೆ ಸೊಸೈಟಿಗಳಿಗೆ ಸೇರಿದ ಭೂಮಿಗಳು

– ಗೇಣಿಗೆ ಸಂಬಂಧಿಸಿದ 8ನೇ ಪ್ರಕರಣವು ವಿನಾಯಿತಿ ಪಡೆದ ಭೂಮಿಗಳಿಗೂ ಸಹ ಅನ್ವಯವಾಗುವುದು.

ಸಕ್ಕರೆ ಕಾರ್ಖಾನೆಗಳಿಗೆ ಸಂಶೋಧನೆ ಮತ್ತು ಬೇಸಾಯ ಕ್ಷೇತ್ರಗಳ ಉದ್ದೇಶಗಳಿಗೆ ಖಾತ್ರಿ ನೀರಾವರಿ ಸೌಲಭ್ಯಗಳುಳ್ಳ ನೂರು ಎಕರೆ ಭೂಮಿಯನ್ನು ಧಾರಣ ಮಾಡಲು ಅನುಮತಿ ನೀಡಲಾಗಿದೆ.

ಹಣ್ಣಿನ ತೋಟಗಳನ್ನು ಖುಷ್ಕಿ ಭೂಮಿಗಳೆಂದು ಪರಿಗಣಿಸಲಾಗುವುದು ಮತ್ತು ಅವುಗಳಿಗೆ ಐವತ್ನಾಲ್ಕು ಎಕರೆಗಳ ಗರಿಷ್ಠ ಮಿತಿಯನ್ನು ಅನ್ವಯವಾಗುವಂತೆ ಮಾಡಲಾಗಿದೆ. ತೆಂಗಿನ ಮರಗಳನ್ನು ಬೆಳೆಯುವ ಭೂಮಿಗಳನ್ನು, ಯಾವುದೇ ನೀರಾವರಿ ಇಲ್ಲದೆ ಬೆಳೆದಿದ್ದರೆ ಅವುಗಳನ್ನು ಖುಷ್ಕಿ ಭೂಮಿಯೆಂದು ಪರಿಗಣಿಸಲಾಗಿದೆ.

ಪರಿಷ್ಕೃತ ಗರಿಷ್ಠ ಮಿತಿಯನ್ನು ಲೆಕ್ಕ ಹಾಕುವುದಕ್ಕಾಗಿ, 1961ರ ನವೆಂಬರ್, 18 ರಂದು ಮಾಡಿದ ಭೂ ವರ್ಗಾವಣೆಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದು.

**ಗೇಣಿ:** ಪ್ರಸ್ತುತ ಕಾನೂನಿನ ಮೇರೆಗೆ ಗೇಣಿದಾರನು, ಭೂ ಮಾಲೀಕನಿಗೆ ಸಂದಾಯ ಮಾಡಬಹುದಾದ ಗೇಣಿಯು, ಕೆರೆಯಿಂದ ಅಥವಾ ನದಿ ನಾಲೆಯಿಂದ ಖಾತ್ರಿ ನೀರಾವರಿ ಸೌಲಭ್ಯವನ್ನು ಹೊಂದಿರುವ ಭೂಮಿಯ ಸಂದರ್ಭದಲ್ಲಿ ಒಟ್ಟು ಉತ್ಪನ್ನದ ಅಥವಾ ಅದರ ನಗದು ಮೌಲ್ಯದ ನಾಲ್ಕನೇ ಒಂದರಷ್ಟನ್ನು ಮತ್ತು ಯಾವುದೇ ಇತರ ಭೂಮಿಯ ಸಂದರ್ಭದಲ್ಲಿ ಒಟ್ಟು ಉತ್ಪನ್ನದ ಅಥವಾ ಅದರ ನಗದು ಮೌಲ್ಯದ ಐದನೇ ಒಂದರಷ್ಟನ್ನು ಮೀರತಕ್ಕದ್ದಲ್ಲ.

ಇದು, ಪ್ರಧಾನ ಬೆಳೆಗಳ ಸರಾಸರಿ ಇಳುವರಿಯನ್ನು ಹಾಗೂ ವಿವಿಧ ಸರಕುಗಳ ಮಾರುಕಟ್ಟೆ ಬೆಲೆಗಳ ನಿರ್ಧರಣೆಯನ್ನು ಒಳಗೊಂಡಿದೆ ಮತ್ತು ಗೇಣಿಯನ್ನು ನಿಗದಿಪಡಿಸುವುದು ಹೆಚ್ಚು ಕಾಲವನ್ನು ಮತ್ತು ಶ್ರಮವನ್ನು ಒಳಗೊಂಡಿರುವ ಕ್ಲಿಷ್ಟಕರ ಪ್ರಕ್ರಿಯೆಯಾಗಿದೆ. ಗೇಣಿ ನಿಗದಿಪಡಿಸುವ ವಿಧಾನವನ್ನು ಸರ್ಕಾರದ ಮೂಲಗಳಿಂದ ನೀರಾವರಿ ಸೌಲಭ್ಯಗಳನ್ನು ಹೊಂದಿರದ ಖುಷ್ಕಿ ಭೂಮಿಗಳಿಗೆ ಭೂ ಕಂದಾಯದ ಹತ್ತು ಪಟ್ಟು ಗೇಣಿಯನ್ನು ನಿಗದಿಪಡಿಸಿ ಸರಳಗೊಳಿಸಲು ಪ್ರಸ್ತಾವಿಸಲಾಗಿದೆ. ಖುಷ್ಕಿ ಎಂದು ವರ್ಗೀಕರಿಸಿದ ಆದರೆ, ಸರ್ಕಾರದ ಮೂಲಗಳಿಂದ ನೀರಾವರಿ ಸೌಲಭ್ಯಗಳನ್ನು ಹೊಂದಿರುವ ಭೂಮಿಗಳಿಗೆ ಸರ್ಕಾರದ ಮೂಲದಿಂದ ನೀರಾವರಿ ದೊರಕುವಂತೆ ಮಾಡಿದ ನೀರಾವರಿ ಸೌಲಭ್ಯಗಳ ಆಧಾರದ ಮೇಲೆ ಪ್ರತಿ ವರ್ಷಕ್ಕೆ ಪ್ರತಿ ಎಕರೆಗೆ 22 ರೂಪಾಯಿಗಳಿಂದ ಪ್ರತಿವರ್ಷಕ್ಕೆ ಪ್ರತಿ ಎಕರೆಗೆ 66 ರೂಪಾಯಿಗಳ ಹೆಚ್ಚುವರಿ ದರದ ಗೇಣಿಯನ್ನು ಸಂದಾಯ ಮಾಡಬೇಕಾಗುತ್ತದೆ.

ಈ ಅಧಿನಿಯಮದ 44ನೇ ಪ್ರಕರಣದ ಮೇರೆಗೆ ಸರ್ಕಾರದಲ್ಲಿ ನಿಹಿತವಾಗಿರುವ ಪುನಃ ವಶಕ್ಕೆ ಪಡೆಯಲಾಗದ ಭೂಮಿಯ ಸಂಬಂಧದಲ್ಲಿ ಮಾಲೀಕನಿಗೆ ಸಂದಾಯ ಮಾಡಬೇಕಾದ ಮೊಬಲಗು ಮತ್ತು 72ನೇ ಪ್ರಕರಣದ ಮೇರೆಗೆ ಸರ್ಕಾರದಲ್ಲಿ ನಿಹಿತವಾಗಿರುವ ಹೆಚ್ಚುವರಿ ಭೂಮಿಯ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಮೊಬಲಗು, ನಿವ್ವಳ ವರಮಾನದ ಗುಣಕ ಆಗಲಿದೆ, ಎಂದರೆ ಆ ಮೊಬಲಗು ಗೇಣಿಯಷ್ಟೇ ಆಗುತ್ತದೆ. ವರ್ಷಕ್ಕೆ ಐದು ಸಾವಿರ ರೂಪಾಯಿಗಳವರೆಗಿನ ನಿವ್ವಳ ಆದಾಯಕ್ಕೆ ಗುಣಕವು ಹದಿನೈದು ಆಗುತ್ತದೆ. ಐದು ಸಾವಿರ ರೂಪಾಯಿಗಳಿಂದ ಹತ್ತು ಸಾವಿರ ರೂಪಾಯಿಗಳವರೆಗಿನ ನಿವ್ವಳ ಆದಾಯದ ಮುಂದಿನ ಸ್ಲ್ಯಾಬಿಗೆ ಗುಣಕವು ಹನ್ನೆರಡು ಆಗುತ್ತದೆ ಮತ್ತು ವಾರ್ಷಕ್ಕೆ ಹತ್ತು ಸಾವಿರ ರೂಪಾಯಿಗಳಿಗೂ ಮೇಲ್ಪಟ್ಟ ನಿವ್ವಳ ಆದಾಯದ ಸ್ಲ್ಯಾಬಿಗೆ ಗುಣಕವು ಹತ್ತು ಆ ಆಗುತ್ತದೆ. ಆ ಮೊಬಲಗನ್ನು ಚಾಲ್ತಿಯಲ್ಲಿರುವ ವರ್ಗಾವಣೀಯ ಬಾಂಡ್‌ಗಳ ಮೂಲಕ ಕಂತುಗಳಲ್ಲಿ ಸಂದಾಯ ಮಾಡಬೇಕಾಗುತ್ತದೆ. ಸಂದಾಯ ಮಾಡಬೇಕಾದ ಮೊಬಲಗನ್ನು ಎರಡು ಲಕ್ಷ ರೂಪಾಯಿಗಳಿಗೆ ಮಿತಿಗೊಳಿಸಲಾಗಿದೆ.

ಪರಿಷ್ಕೃತ ಗರಿಷ್ಠ ಮಿತಿಯನ್ನು ಅನ್ವಯಿಸಿದಾಗ, ಹಂಚಿಕೆ ಮಾಡುವುದಕ್ಕಾಗಿ ಲಭ್ಯವಾಗಬಹುದಾದ ಹೆಚ್ಚುವರಿ ಭೂಮಿಯನ್ನು ಈ ಕೆಳಗೆ ನೀಡಲಾದ ಆದ್ಯತೆಗಳಿಗೆ ಅನುಗುಣವಾಗಿ ಹಂಚಿಕೆ ಮಾಡಲಾಗುವುದು. ಹಾಗೆ ಹಂಚಿಕೆ ಮಾಡುವಾಗ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳಿಗೆ ಹಂಚಿಕೆ ಮಾಡುವುದಕ್ಕಾಗಿ ಶೇಕಡಾ ಐವತ್ತರಷ್ಟು ಹೆಚ್ಚುವರಿ ಭೂಮಿಯನ್ನು ಮೀಸಲಿಡಲಾಗುತ್ತದೆ:-

| | | | |
|---|---|---|---|
| (ಎ) | ಭೂಮಿಯನ್ನು ಹೊಂದಿರದ ಸ್ಥಳಾಂತರಿತ ಗೇಣಿದಾರರಿಗೆ | : | ಪ್ರತಿಯೊಬ್ಬರಿಗೆ ಒಂದು ಯೂನಿಟ್‌ಗಿಂತ ಕಡಿಮೆ ಇಲ್ಲದಂತೆ; |
| (ಬಿ) | ಭೂ ರಹಿತ ಕೃಷಿ ಕಾರ್ಮಿಕರಿಗೆ ಮತ್ತು ಇತರ ಭೂ ರಹಿತ ವ್ಯಕ್ತಿಗಳಿಗೆ | : | ಪ್ರತಿಯೊಬ್ಬರಿಗೆ ಒಂದು ಯೂನಿಟ್‌ಗಿಂತ ಕಡಿಮೆ ಇಲ್ಲದಂತೆ; |
| (ಸಿ) | ಒಂದು ಯೂನಿಟ್‌ಗಿಂತ ಕಡಿಮೆ ಭೂಮಿಯನ್ನು ಹೊಂದಿರುವ ಇತರ ವ್ಯಕ್ತಿಗಳಿಗೆ | : | ಒಂದು ಯೂನಿಟ್ ಆಗುವುದಕ್ಕೆ ಬೇಕಾಗುವ ವಿಸ್ತೀರ್ಣಕ್ಕಿಂತ ಕಡಿಮೆ ಇಲ್ಲದಂತೆ; |

ತಿದ್ದುಪಡಿ ಮಾಡುವ ಈ ಅಧಿನಿಯಮದಲ್ಲಿ,-

(i) ಸಂಬಂಧಪಟ್ಟ ಪ್ರಾಧಿಕಾರಿಗಳು ಅಂಥ ವಿಸ್ತೀರ್ಣಗಳನ್ನು ನಿರ್ಧರಿಸದಾಗಲೆಲ್ಲ ಪುನರ್ ವಶಕ್ಕೆ ಪಡೆಯದ ಭೂಮಿಗಳನ್ನು ಸರ್ಕಾರದಲ್ಲಿ ನಿಹಿತಗೊಳಿಸುವ ಅಧಿಸೂಚನೆಗಳನ್ನು ಹೊರಡಿಸಲು ಜಿಲ್ಲೆಯ ಜಿಲ್ಲಾಧಿಕಾರಿಯವರಿಗೆ ಅಧಿಕಾರ ನೀಡಲು;

(ii) 2(ಎ), (29) ಮತ್ತು 14(3)ನೇ ಪ್ರಕರಣದ ಮೇರೆಗೆ ಪುನರ್ ವಶಕ್ಕೆ ಪಡೆಯಲಾಗುವುದಿಲ್ಲವೆಂದು ಭಾವಿಸಿದ ಭೂಮಿಗಳಿಗೆ ಸಂಬಂಧಿಸಿದಂತೆ ತನಿಖೆ ಮಾಡಲು ಮತ್ತು ಅಂಥ ಭೂಮಿಗಳನ್ನು ಗುರುತಿಸಲು ಅಸಿಸ್ಟೆಂಟ್ ಕಮಿಷನರ್‌ರವರನ್ನು ಸಮುಚಿತ ಪ್ರಾಧಿಕಾರಿಯನ್ನಾಗಿ ನೇಮಿಸಲು;

(iii) ಯಾವ ನಿವೇಶನದಲ್ಲಿ ವಾಸದ ಮನೆಯನ್ನು ನಿರ್ಮಿಸಲಾಗಿದೆಯೋ ಆ ನಿವೇಶನಕ್ಕೆ ಗೇಣಿದಾರನು ಸಂದಾಯ ಮಾಡಬೇಕಾದ ಬೆಲೆಯನ್ನು ಇಪ್ಪತ್ತು ಪಟ್ಟು ಗೇಣಿಯಿಂದ ಹತ್ತು ಪಟ್ಟು ಗೇಣಿಗೆ ಇಳಿಸಲು;

(iv) ಸರ್ಕಾರದ ನೀರಾವರಿ ಯೋಜನೆಗಳ ಮೇರೆಗೆ ಮುಂಬರುವ ದಿನಗಳಲ್ಲಿ ನೀರಾವರಿಗೊಳಪಡುವ ಹಿಡುವಳಿಗಳಿಗೆ ಗರಿಷ್ಠ ಮಿತಿಯನ್ನು ಅನ್ವಯಿಸುವುದಕ್ಕಾಗಿ ಅವಕಾಶ ಕಲ್ಪಿಸಲು;

(v) ಕೆಲವು ನ್ಯಾಯಿಕೇತರ ಅಧಿಕಾರಗಳನ್ನು ಮುನ್ಸಿಫ್ ನ್ಯಾಯಾಲಯಗಳಿಂದ ಬೇರ್ಪಡಿಸಿ ಅವುಗಳನ್ನು ಕಂದಾಯ ಅಧಿಕಾರಿಗಳಲ್ಲಿ ನಿಹಿತಗೊಳಿಸಲು;

(vi) "ತಹಶೀಲ್ದಾರ್" ಎಂಬ ಪದ ಅರ್ಥ ವಿವರಣೆಯಲ್ಲಿ "ವಿಶೇಷ ತಹಶೀಲ್ದಾರ್"ನನ್ನು ಸೇರಿಸುವುದಕ್ಕಾಗಿ ಅವಕಾಶ ಕಲ್ಪಿಸಲು;

(vii) ತಹಶೀಲ್ದಾರ್ ಅಥವಾ ಅಸಿಸ್ಟೆಂಟ್ ಕಮಿಷನರ್‌ರವರ ನಡವಳಿಗಳನ್ನು ರಿಜಿನಲ್ ಕಮಿಷನ್‌ರರವರು ಪುನರ್ ಅವಲೋಕನ ಮಾಡುವುದಕ್ಕೆ ಅವಕಾಶ ಕಲ್ಪಿಸಲು;

(viii) ಈಗಿರುವ ಅನುಸೂಚಿಯ ಬದಲಿಗೆ ಹೊಸ ಅನುಸೂಚಿ-1ನ್ನು ಸೇರಿಸುವುದಕ್ಕೆ

- ಮತ್ತು ಈ ಅಧಿನಿಯಮವನ್ನು ತೀವ್ರವಾಗಿ ಅನುಷ್ಠಾನಗೊಳಿಸಲು ಇತರ ಆನುಷಂಗಿಕ ತಿದ್ದುಪಡಿಗಳನ್ನು ಮಾಡುವುದಕ್ಕೆ ಸಹ ಅವಕಾಶ ಕಲ್ಪಿಸಲಾಗಿದೆ.

(ಇದನ್ನು ಕಡತ ಸಂಖ್ಯೆ: ಎಲ್‌ಎಡಬ್ಲ್ಯೂ 55 ಎಲ್‌ಜಿಎನ್ 72 ರಲ್ಲಿರುವ ಮೈಸೂರು ಭೂ ಸುಧಾರಣೆಗಳ (ತಿದ್ದುಪಡಿ) ವಿಧೇಯಕ, 1972 ರಿಂದ ಪಡೆಯಲಾಗಿದೆ)

**XI**

**1974ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 26.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961 (1962ರ ಕರ್ನಾಟಕ ಅಧಿನಿಯಮ 10)ರ 48ಎ ಪ್ರಕರಣವು, 45ನೇ ಪ್ರಕರಣದ ಮೇರೆಗೆ ಅಧಿಭೋಗದಾರನಾಗಿ ನೋಂದಾಯಿಸಿಕೊಳ್ಳಲು ಹಕ್ಕುಳ್ಳ ಪ್ರತಿಯೊಬ್ಬ ವ್ಯಕ್ತಿಯು 1974ರ ಮಾರ್ಚ್, 1 ರಿಂದ ಆರು ತಿಂಗಳ ಒಳಗಾಗಿ ನ್ಯಾಯಾಧೀಕರಣಕ್ಕೆ ಅರ್ಜಿ ಸಲ್ಲಿಸಬಹುದು. ಈ ಕಾಲಪರಿಮಿತಿಯು 1974ರ ಆಗಸ್ಟ್ 31ರಂದು ಮುಕ್ತಾಯವಾಗುತ್ತದೆ. ಈ ಕಾಲಮಿತಿಯನ್ನು ವಿಸ್ತರಿಸುವಂತೆ ಕೋರಿ ಗ್ರಾಮೀಣ ಜನತೆಯಿಂದ ಅತ್ಯಧಿಕ ಬೇಡಿಕೆ ಬಂದಿರುವುದರಿಂದ ಈ ಕಾಲಮಿತಿಯ ಅವಧಿಯನ್ನು 1974ರ ಡಿಸೆಂಬರ್ 31ರ ರವರೆಗೆ ವಿಸ್ತರಿಸಲು ಪ್ರಸ್ತಾವಿಸಲಾಗಿದೆ.

1974ರ ಮೇ 29ರಂದು ಅಧ್ಯಾದೇಶವನ್ನು ಹೊರಡಿಸುವುದಕ್ಕೆ ಮುಂಚೆ ಇದ್ದಂತೆ ಸದರಿ ಅಧಿನಿಯಮದ 66ನೇ ಪ್ರಕರಣದ ಮೇರೆಗೆ ಹಿಡುಗಳಿಗಳ ಘೋಷಣೆಗಳನ್ನು ಸಲ್ಲಿಸಲು 1974ರ ಮೇ, 30 ವರೆಗೆ ಅನುಮತಿ ನೀಡಲಾಗಿತ್ತು ಮತ್ತು ಎ, ಬಿ, ಸಿ ಮತ್ತು ಡಿ ವರ್ಗದ ಭೂಮಿಗಳಿಗೆ ಸಂಬಂಧಿಸಿದಂತೆ ಘೋಷಣೆಗಳನ್ನು ಸಲ್ಲಿಸಬೇಕಾಗಿತ್ತು.

ಮತ್ತಷ್ಟು ಪರಿಶೀಲನೆ ಮಾಡಿದಾಗ ಎ, ಬಿ, ಸಿ ಮತ್ತು ಡಿ ವರ್ಗೀಕರಣಕ್ಕೂ ಘೋಷಣೆಗಳನ್ನು ಸಲ್ಲಿಸುವುದುಕ್ಕೂ ಸಂಬಂಧ ಕಲ್ಪಿಸುವುದು ಅನಗತ್ಯವೆಂದು ಪರಿಗಣಿಸಲಾಗಿತ್ತು ಮತ್ತು 1974ರ ಮಾರ್ಚ್, 1 ರಿಂದ ಕೊಟ್ಟಿರುವ ತೊಂಬತ್ತು ದಿನಗಳ ಕಾಲಮಿತಿಯನ್ನು ಘೋಷಣೆ ಮಾಡುವವರು ತಮ್ಮ ಘೋಷಣೆಗಳನ್ನು ಸಲ್ಲಿಸಲು ಸಾಧ್ಯವಾಗುವಂತೆ ಮತ್ತೆ ತೊಂಬತ್ತು ದಿನಗಳ ಅವಧಿಯವರೆಗೆ ವಿಸ್ತರಿಸುವುದು ಅಗತ್ಯವಾಗಿದೆ.

ತದನುಸಾರವಾಗಿ, 1974ರ ಮೇ, 30 ರಿಂದ 90 ದಿನಗಳಿಗೆ ವಿಸ್ತರಿಸಿದ ಕಾಲದೊಳಗೆ ನೀರಾವರಿವುಳ್ಳ, ಮಳೆ ಆಧಾರಿತ ಮತ್ತು ಖುಷ್ಕಿ ಭೂಮಿಗಳಿಗೆ ಸಂಬಂಧಿಸಿದಂತೆ ಘೋಷಣೆಯನ್ನು ಸಲ್ಲಿಸುವುದಕ್ಕಾಗಿ ಅವಕಾಶವನ್ನು ಕಲ್ಪಿಸಿರುವ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧ್ಯಾದೇಶ, 1974 (1974ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 3) 1974ರ ಮೇ, 29 ರಂದು ಹೊರಡಿಸಲಾಗಿತ್ತು. ಈ ಕಾಲ ಮಿತಿಯನ್ನು 1974ರ ಅಕ್ಟೋಬರ್, 31 ರವರೆಗೆ ಮತ್ತಷ್ಟು ವಿಸ್ತರಿಸಲು ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1974ರ ಆಗಸ್ಟ್, 26ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-2ಎ ಯಲ್ಲಿ, ಪುಟ ಸಂ. 4ರಲ್ಲಿ, ಸಂಖ್ಯೆ. 2694ರಲ್ಲಿ ಪ್ರಕಟಿಸಲಾಗಿದೆ)

**XII**

**1974ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 31.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮದ 133ನೇ ಪ್ರಕರಣವು ಸಿವಿಲ್ ನ್ಯಾಯಾಲಯಗಳು ಸದರಿ ಅಧಿನಿಯಮದ ಮೇರೆಗೆ ತೀರ್ಮಾನಿಸಬೇಕಾದ ವಿವಾದಾಂಶಗಳನ್ನು ಒಳಗೊಂಡಿರುವ ದಾವೆಗಳಿಗೆ ತಡೆಯಾಜ್ಞೆ ನೀಡಬೇಕೆಂಬುದಕ್ಕೆ ಮತ್ತು ಅಂಥ ವಿವಾದಾಂಶಗಳನ್ನು ತೀರ್ಮಾನಕ್ಕಾಗಿ ನ್ಯಾಯಾಧೀಕರಣಕ್ಕೆ ಕಳುಹಿಸಬೇಕೆಂಬುದಕ್ಕೆ ಸುಸ್ಪಷ್ಟವಾಗಿ ಅವಕಾಶ ಕಲ್ಪಿಸಿದೆ.

133ನೇ ಪ್ರಕರಣದಲ್ಲಿ ಅದಕ್ಕೆ ಸುಸ್ಪಷ್ಟ ಅವಕಾಶ ಇದ್ದರೂ ಹಕ್ಕು ಪತ್ರದಲ್ಲಿರುವ ನಮೂದುಗಳನ್ನು ಗಮನಿಸಿದರೆ ಭೂಮಿಗೆ ಗೇಣಿದಾರರು ಇರಲಿಲ್ಲವೆಂದು ಕ್ಲೇಮು ಮಾಡಿರುವ ಭೂ ಮಾಲೀಕರು ನಿರ್ದಿಷ್ಟ ಪರಿಹಾರ ಅಧಿನಿಯಮದ ಮೇರೆಗೆ ದಾಖಲು ಮಾಡಿದ ದಾವೆಗಳಲ್ಲಿ ಗೇಣಿದಾರರ ವಿರುದ್ಧ ಸಿವಿಲ್ ನ್ಯಾಯಾಲಯಗಳು ನಿರ್ಬಂಧಕಾಜ್ಞೆಗಳನ್ನು ನೀಡಿವೆ. ಅಂಥ ದಾವೆಗಳಲ್ಲಿ ಸಂಬಂಧಪಟ್ಟ ದಿನಾಂಕದಂದು ವಾಸ್ತವಿಕವಾಗಿ ಸ್ವಾಧೀನದಲ್ಲಿರುವುದೇ ಮಾನದಂಡವಾಗುತ್ತದೆ ಹೊರತು ಭೂಮಿಯ ಮೇಲೆ ಹೊಂದಿರುವಂಥ ಕಾನೂನು ಸಮ್ಮತ ಸ್ವಾಮ್ಯ ಅಲ್ಲವೆಂದು ನ್ಯಾಯಾಲಯಗಳು ಅಭಿಪ್ರಾಯಪಟ್ಟಿವೆ. ಅಂಥ ದಾವೆಗಳಲ್ಲಿ ಹೊರಡಿಸಿರುವ ನಿರ್ಬಂಧಕಾಜ್ಞೆಗಳ ಪರಿಣಾಮವಾಗಿ ಸ್ವಾಧೀನತೆ ತಪ್ಪಿಸದಂತೆ ಗೇಣಿದಾರರ ರಕ್ಷಣೆಗೆ ಭೂ ಸುಧಾರಣಾ ಅಧಿನಿಯಮದಲ್ಲಿ ಮತ್ತಷ್ಟು ಅವಕಾಶ ಕಲ್ಪಿಸುವುದು ಅಪೇಕ್ಷಣೀಯ ಎಂದು ಪರಿಗಣಿಸಲಾಗಿತ್ತು. ತದನುಸಾರವಾಗಿ, ಈ ಅಧ್ಯಾದೇಶವನ್ನು (1974ರ ಸಂಖ್ಯೆ 6) 1974ರ ಆಗಸ್ಟ್, 3 ರಂದು ಹೊರಡಿಸಲಾಗಿದೆ.

ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1973ರ 91ನೇ ಪ್ರಕರಣದ ಉದ್ದೇಶವನ್ನು ಸ್ಪಷ್ಟಪಡಿಸುವ ಸಲುವಾಗಿ ತಿದ್ದುಪಡಿ ಮಾಡಬೇಕೆಂದು ಸಹ ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1974ರ ಆಗಸ್ಟ್, 26ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ–**IV** 2 ಎ ಯಲ್ಲಿ, ಪುಟ ಸಂಖ್ಯೆ. 5 ರಲ್ಲಿ ಸಂಖ್ಯೆ 2ರಲ್ಲಿ ಪ್ರಕಟಿಸಲಾಗಿದೆ)

**XIII**

**1976ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 18.–** ನ್ಯಾಯಾಧಿಕರಣಗಳ ಸ್ಥಾಪನೆಗೆ ಅವಕಾಶ ಕಲ್ಪಿಸಿರುವ 48ನೇ ಪ್ರಕರಣವು ಕೆಲಸದ ಪ್ರಮಾಣವು ಅತ್ಯಧಿಕವಾಗಿರುವ ತಾಲ್ಲೂಕುಗಳಲ್ಲಿ ಸಹ ಹೆಚ್ಚುವರಿ ನ್ಯಾಯಾಧೀಕರಣಗಳನ್ನು ಸ್ಥಾಪಿಸಲು ಅವಕಾಶ ಕಲ್ಪಿಸಿರಲಿಲ್ಲ. ಅಲ್ಲದೆ, ಶಾಸಕರು ನ್ಯಾಯಾಧೀಕರಣದ ಸದಸ್ಯನಾಗಿರುವುದು ಕಡ್ಡಾಯ ಎಂದು ಈ ಪ್ರಕರಣವು ಉಪಬಂಧ ಕಲ್ಪಿಸಿದೆ.

ಗೇಣಿದಾರನ ಅರ್ಜಿಯು ತ್ವರಿತವಾಗಿ ವಿಲೇ ಆಗುವುದನ್ನು ಸುನಿಶ್ಚಿತಪಡಿಸಿಕೊಳ್ಳುವ ಸಲುವಾಗಿ ಎಲ್ಲೆಲ್ಲಿ ಅಗತ್ಯ ಇದೆಯೋ ಅಲ್ಲೇಲ್ಲ ಖಚಿತಪಡಿಸಲು ಅಗತ್ಯವಿರುವ ಕಡೆಯಲ್ಲಿ ಹೆಚ್ಚುವರಿ ನ್ಯಾರ್ಯಧಿಕರಣಗಳನ್ನು ಸ್ಥಾಪಿಸುವುದು ವಿಹಿತವೆಂದು ಭಾವಿಸಲಾಯಿತು. ಶಾಸಕರು ಹೆಚ್ಚುವರಿ ನ್ಯಾಯಾಧೀಕರಣದ ಸದಸ್ಯನಾಗಿ ಇರುವುದು ಕಾರ್ಯಸಾಧ್ಯವಲ್ಲವೆಂಬುದನ್ನು ಸಹ ಪರಿಗಣಿಸಲಾಯಿತು. ಆದ್ದರಿಂದ, ಹೆಚ್ಚುವರಿ ನ್ಯಾಯಾಧೀಕರಣಗಳನ್ನು ಸ್ಥಾಪಿಸುವುದಕ್ಕೆ ಮತ್ತು ಶಾಸಕರು ಅವುಗಳಲ್ಲಿ ಸದಸ್ಯರಾಗಿ ಇರುವುದು ಕಡ್ಡಾಯ ಅಲ್ಲ ಎಂಬುದಕ್ಕೆ ಉಪಬಂಧ ಕಲ್ಪಿಸಲು 48ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯಕ ಎಂದು ಪರಿಗಣಿಸಲಾಗಿದೆ.

ರಾಜ್ಯದ ಕೆಲವು ಪ್ರದೇಶಗಳಲ್ಲಿ ವಿವಿಧ ಕಾರಣಗಳಿಗಾಗಿ ಎಲ್ಲ ಗೇಣಿದಾರರು ನೋಂದಣಿಗೆ ಅರ್ಜಿ ಸಲ್ಲಿಸದಿರುವುದನ್ನು ಗಮನಿಸಿ, ಅಂಥ ಅರ್ಜಿಗಳನ್ನು ಸಲ್ಲಿಸಲು ಸಾಧ್ಯವಾಗುವಂತೆ ಕಾಲಾವಕಾಶವನ್ನು 1976ರ ಜೂನ್, 30ರ ವರೆಗೆ ವಿಸ್ತರಿಸಬಹುದೆಂದು ಮತ್ತು ವಿಳಂಬಕ್ಕೆ ಸಾಕಷ್ಟು ಕಾರಣವನ್ನು ತೋರಿಸಿದರೆ ಅರ್ಜಿಗಳನ್ನು ಅಂಗೀಕರಿಸಬಹುದೆಂದು ಮತ್ತು 48ಎ ಪ್ರಕರಣವನ್ನು ಈ ಉದ್ದೇಶಕ್ಕಾಗಿ ತಿದ್ದುಪಡಿ ಮಾಡಬಹುದೆಂದು ಅಭಿಪ್ರಾಯಪಡಲಾಗಿದೆ.

ವಿಧವೆಯರಿಗೆ, ಅಪ್ರಾಪ್ತ ವಯಸ್ಕರಿಗೆ ಮತ್ತು ಅಂಗವಿಕಲರಿಗೆ ಪರಿಹಾರಧನವನ್ನು, 51ನೇ ಪ್ರಕರಣದ ಮೇರೆಗೆ ಇಡಿಗಂಟಿನಲ್ಲಿ ಸಹ ಸಂದಾಯ ಮಾಡಬೇಕಾಗಿತ್ತು. ಪರಿಹಾರದ ಮೊತ್ತವನ್ನು ಅವರುಗಳಿಗೆ ಇಡಿ ಗಂಟಿನಲ್ಲಿ ಒಂದೇ ಸಲ ಸಂದಾಯ ಮಾಡಬಹುದೆಂದು ಪರಿಗಣಿಸಲಾಗಿತ್ತು. ಆದ್ದರಿಂದ 51ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾಪಿಸಲಾಗಿದೆ.

ವಿಧವೆಯರು, ಮೊದಲಾದವರಿಗೆ ಒಂದೇ ಸಲ ಇಡಿಗಂಟಿನಲ್ಲಿ ಸಂದಾಯ ಮಾಡಬೇಕಾಗುತ್ತದೆಯಾದ್ದರಿಂದ, ಅಧಿಭೋಗದಾರನಾಗಿ ನೋಂದಾಯಿತನಾಗಬೇಕಾದ ಗೇಣಿದಾರನು ಸಂದಾಯ ಮಾಡಬೇಕಾದ ಪ್ರೀಮಿಯಮ್‌ನ್ನು ಇಡಿಗಂಟಿನಲ್ಲಿ ಒಂದೇ ಸಲ ಸಂದಾಯ ಮಾಡಬೇಕಾಗುತ್ತದೆ ಮತ್ತು ಈ ಉದ್ದೇಶಕ್ಕಾಗಿ 53ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ. ಗೇಣಿದಾರನು ಅದನ್ನು ಸಂದಾಯ ಮಾಡಲು ರಾಜ್ಯ ಅಭಿವೃದ್ಧಿ ಬ್ಯಾಂಕು ಅಥವಾ ಕ್ರೆಡಿಟ್ ಏಜೆನ್ಸಿಯು ನೆರವು ನೀಡುವುದಕ್ಕೆ ವ್ಯವಸ್ಥೆ ಮಾಡಲು, ನಿಯಮಗಳನ್ನು ರಚಿಸುವುದಕ್ಕೆ ಮತ್ತು ಆ ಬಗ್ಗೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುವುದಕ್ಕೂ ಪ್ರಸ್ತಾವಿಸಲಾಗಿದೆ.

1961ರಲ್ಲಿ ಅಧಿಕ ಭೂ ವಿಸ್ತೀರ್ಣದ ಭೂಮಿಗಳನ್ನು ಹೊಂದಿರುವ ಆದರೆ, 1974ರ ಮಾರ್ಚ್ 1ಕ್ಕೆ ಮುಂಚೆಯೇ ತನ್ನ ಎಲ್ಲ ಭೂಮಿಗಳನ್ನು ವಿಲೇವಾರಿ ಮಾಡಿರುವ ಅಥವಾ 1974ರ ಮಾರ್ಚ್ 1 ರಲ್ಲಿದ್ದಂತೆ ಹತ್ತು ಎಕರೆಗಿಂತ ಕಡಿಮೆ ನೀರಾವರಿ ಭೂಮಿಯಷ್ಟಕ್ಕೆ ಅಥವಾ ಅದಕ್ಕೆ ತತ್ಸಮಾನವಾದುದಷ್ಟಕ್ಕೆ ಹಿಡುವಳಿಗಳನ್ನು ಕಡಿಮೆ ಮಾಡಿಕೊಂಡಿರುವ ಹಾಗೂ 66ನೇ ಪ್ರಕರಣದ ಮೇರೆಗೆ ಘೋಷಣೆಯನ್ನು ಸಲ್ಲಿಸದಿರುವ ವ್ಯಕ್ತಿಯ ರಕ್ಷಣೆಗಾಗಿ 1961ರ ನವೆಂಬರ್, 18 ರಂದು ಅಥವಾ ಆ ತರುವಾಯ ಹತ್ತು ಎಕರೆಗಳ ನೀರಾವರಿ ಭೂಮಿಯನ್ನು ಅಥವಾ ಮಳೆಯಾಧಾರಿತ 20 ಎಕರೆಗಳ ತರಿ ಭೂಮಿಯನ್ನು ಅಥವಾ 40 ಎಕರೆಗಳ ಖುಷ್ಕಿ ಭೂಮಿಯನ್ನು ಹೊಂದಿರುವ ಎಲ್ಲ ವ್ಯಕ್ತಿಗಳೂ 1961ರ ನವೆಂಬರ್ 18 ರಿಂದ 1974ರ ಮಾರ್ಚ್ 1ರ ನಡುವಣ ಅವಧಿಯಲ್ಲಿ ತಾವು ಹೊಂದಿದ ಹಿಡುವಳಿಗಳನ್ನು ಮತ್ತು ತಾವು ಮಾಡಿರುವ ಭೂ ವರ್ಗಾವಣೆಗಳನ್ನು ತೋರಿಸುವ ಘೋಷಣೆಗಳನ್ನು ದಾಖಲು ಮಾಡುವುದನ್ನು ಕಡ್ಡಾಯ ಮಾಡುವ ಸಲುವಾಗಿ 66ನೇ ಪ್ರಕರಣದಲ್ಲಿ ಹೊಸ ಉಪಪ್ರಕರಣ (4)ಅನ್ನು ಸೇರಿಸಲಾಗುತ್ತಿದೆ.

ಭೂ ಸುಧಾರಣೆಗಳ ಅಧಿನಿಯಮದ 66ನೇ ಪ್ರಕರಣದ ತಿದ್ದುಪಡಿ ಮಾಡಿದ (4)ನೇ ಉಪ ಪ್ರಕರಣದ ಮೇರೆಗೆ ಘೋಷಣೆ ಸಲ್ಲಿಸಲು ಇದ್ದಂತೆ ಮೂಲ ಕಾಲಪರಿಮಿತಿಯ ಅವಧಿಯು 1975ರ ಡಿಸೆಂಬರ್, 9 ರಂದು ಮುಕ್ತಾಯಗೊಂಡಿದ್ದು ಅದನ್ನು ತೊಂಬತ್ತು ದಿನಗಳ ಇನ್ನು ಹೆಚ್ಚಿನ ಅವಧಿಗೆ ವಿಸ್ತರಿಸಲಾಗಿತ್ತು. 1971ರ ನವೆಂಬರ್ 18ರ ತರುವಾಯದ ಎಲ್ಲ ವ್ಯವಹಾರಗಳನ್ನು ಪತ್ತೆಹಚ್ಚಲು ಆಗುತ್ತಿಲ್ಲವೆಂದು ಭೂ ಹಿಡುವಳಿದಾರರು ವ್ಯಕ್ತಪಡಿಸಿದ ಕೆಲವು ತೊಂದರೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಕಾಲಮಿತಿಯನ್ನು ವಿಸ್ತರಣೆ ಮಾಡುವುದು ಅವಶ್ಯವೆಂದು ಭಾವಿಸಲಾಗಿದೆ.

ಸರ್ಕಾರವು ಪಡೆದ ಸಾಲಗಳ ಮೇಲಿನ ಚಾಲ್ತಿ ಬಡ್ಡಿಯ ದರವನ್ನು ಗಮನದಲ್ಲಿರಿಸಿ ಭೂಮಿಯನ್ನು ಗೇಣಿಗೆ ಕೊಟ್ಟಿರುವ ಭೂ ಮಾಲೀಕರಿಗೆ ಸಂದಾಯ ಮಾಡಬೇಕಾದ ಬಡ್ಡಿ ದರವನ್ನು ಮತ್ತು ಸರ್ಕಾರದಲ್ಲಿ ನಿಹಿತವಾಗುವ ಹೆಚ್ಚುವರಿ ಭೂಮಿಯ ಅನುಭೋಗ ದರದ ಕಂತುಗಳ ಮೇಲೆ ಹೆಚ್ಚುವರಿ ಭೂಮಿಯ ಹಂಚಿಕೆದಾರರು ಸಂದಾಯಮಾಡಬಹುದಾದ ದರವನ್ನು 51ನೇ. 73ನೇ ಮತ್ತು 78ನೇ ಪ್ರಕರಣಗಳನ್ನು ತಿದ್ದುಪಡಿ ಮಾಡುವ ಮೂಲಕ ಶೇಕಡಾ 4½ ಯಿಂದ ಶೇಕಡಾ 5½ ರವರೆಗೆ ಬದಲಾವಣೆ ಮಾಡಲಾಗುತ್ತಿದೆ.

64 (4)ನೇ ಪ್ರಕರಣದ ಮೇರೆಗೆ ಘೋಷಣೆಯನ್ನು ಸಲ್ಲಿಸಲು ವಿಫಲನಾಗಿರುವುದಕ್ಕಾಗಿ ಅಥವಾ ಸುಳ್ಳು ಅಥವಾ ತಪ್ಪು ಘೋಷಣೆಯನ್ನು ಸಲ್ಲಿಸಿರುವುದಕ್ಕಾಗಿ ಆರು ತಿಂಗಳಿಗಿಂತ ಕಡಿಮೆ ಇಲ್ಲದ ಆದರೆ, ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಕಾರಾವಾಸದ ಶಿಕ್ಷೆಗೆ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆ ಶಿಕ್ಷೆಗೆ ಹೆಚ್ಚಿಸಲು 125ನೇ ಪ್ರಕರಣದ 8ನೇ ಖಂಡವನ್ನು ತಿದ್ದುಪಡಿ ಮಾಡಲಾಗುತ್ತಿದೆ.

**"ನ್ಯಾಯಾಲಯ"** ಪದವು ಅನಾವಶ್ಯಕವಾಗಿರುವುದರಿಂದ ಆ ಪದವನ್ನು ಬಿಟ್ಟುಬಿಡಲು 132ನೇ ಪ್ರಕರಣವನ್ನು ತಿದ್ದುಪಡಿ ಮಾಡಲಾಗಿದೆ.

ತುರ್ತಿನ ಹಿನ್ನೆಲೆಯಲ್ಲಿ ಮೇಲ್ಕಂಡ ತಿದ್ದುಪಡಿಗಳನ್ನು ಅಧ್ಯಾದೇಶಗಳನ್ನು ಹೊರಡಿಸುವ ಮೂಲಕ ಜಾರಿಗೆ ತರಬೇಕಾಯಿತು.

ಈ ವಿಧೇಯಕವನ್ನು ಈ ಅಧ್ಯಾದೇಶಗಳ ಬದಲಿಗೆ ತರಲಾಗಿದೆ.

(1976ರ ಜನವರಿ, 31ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ **IV**–2ಎ ಯಲ್ಲಿ, ಪುಟ ಸಂಖ್ಯೆ. 6 ರಲ್ಲಿ ಸಂಖ್ಯೆ 630 ರಲ್ಲಿ ಪ್ರಕಟಿಸಲಾಗಿದೆ)

**XIV**

**1976ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 27.–** 48ಎ ಪ್ರಕರಣದ ಮೇರೆಗೆ ರಚಿತವಾದ ನ್ಯಾಯಾಧೀಕರಣಕ್ಕೆ ಯಾವ ಭೂಮಿಗೆ ಸಂಬಂಧಿಸಿದಂತೆ ಅರ್ಜಿಯನ್ನು ಸಲ್ಲಿಸಲಾಗಿತ್ತು ಆ ಭೂಮಿಗೆ ಸಂಬಂಧಿಸಿದಂತೆ ತಾತ್ಕಾಲಿಕ ನಿರ್ಬಂಧಕಾಜ್ಞೆ ರೂಪದಲ್ಲಿ ವಾದಕಾಲೀನ ಆದೇಶಗಳನ್ನು ಹೊರಡಿಸಲು ಅಥವಾ ರಿಸಿವರ್‌ಗಳನ್ನು ನೇಮಕ ಮಾಡುವ ಅಧಿಕಾರಗಳನ್ನು 48ನೇ ಪ್ರಕರಣದ ಮೇರೆಗೆ ರಚಿತವಾದ ನ್ಯಾಯಾಧೀಕರಣದಲ್ಲಿ ನಿಹಿತಗೊಳಿಸುವ ಭೂ ಸುಧಾರಣೆಗಳ ಅಧಿನಿಯಮದಲ್ಲಿ ನಿರ್ದಿಷ್ಟ ಉಪಬಂಧಗಳು ಇಲ್ಲದಿರುವುದರಿಂದ, ಸಿವಿಲ್ ನ್ಯಾಯಾಲಯಗಳು ಈ ಅಧಿಕಾರಗಳನ್ನು ಚಲಾಯಿಸುವುದನ್ನು ಮುಂದುವರೆಸಿಕೊಂಡು ಬಂದಿವೆ ಮತ್ತು ನ್ಯಾಯಾಧಿಕರಣದ ಮುಂದೆ ಯಾವ ವಿಷಯಗಳ ಬಗ್ಗೆ ವಾದ ಪ್ರತಿವಾದ ಆಗುತ್ತಿದೆಯೋ ಅದನ್ನು ಪರಿಗಣನೆಗೆ ತೆಗೆದುಕೊಳ್ಳದೆಯೇ ಸಿವಿಲ್ ನ್ಯಾಯಾಲಯಗಳು ಹೊರಡಿಸಿದ ಆದೇಶಗಳಿಂದಾಗಿ ಗೊಂದಲ ಉಂಟಾಗಿತ್ತು. ಈ ಎರಡಕ್ಕು ಇರುವ ಈ ಒಂದೇ ಬಗೆಯ ಅಧಿಕಾರ ವ್ಯಾಪ್ತಿಯನ್ನು ತೆಗೆದುಹಾಕಲು, ನ್ಯಾಯಾಧೀಕರಣಗಳಿಗೆ ಇದ್ದಂಥ, 49ಎ ಪ್ರಕರಣದ ಮೇರೆಗೆ ಗೇಣಿದಾರನು ಸಲ್ಲಿಸಿರುವ ಅರ್ಜಿಯಲ್ಲಿರುವ ವಸ್ತು ವಿಷಯವು ಯಾವ ಭೂಮಿಗೆ ಸಂಬಂಧಪಟ್ಟಿದೆಯೋ ಆ ಭೂಮಿಗೆ ಸಂಬಂಧಪಟ್ಟಂತೆ ತಾತ್ಕಾಲಿಕ ನಿರ್ಬಂಧಕಾಜ್ಞೆ ರೂಪದಲ್ಲಿ ವಾದಕಾಲೀನ ಆದೇಶಗಳನ್ನು ಹೊರಡಿಸುವ ಅಥವಾ ರಿಸಿವರ್‌ನನ್ನು ನೇಮಕ ಮಾಡುವ ಅಧಿಕಾರವನ್ನು ತೆಗೆದುಹಾಕಬೇಕಾಗಿತ್ತು. ನ್ಯಾಯಾಲಯಗಳು ಯಾವಾಗಲೂ ಪರಿಗಣನೆಗೆ ತೆಗೆದುಕೊಳ್ಳದೆ ನೀಡಿದ ಆದೇಶಗಳ ಕಾರಣದಿಂದಾಗಿ ಗೊಂದಲ ಉಂಟಾಗಿದೆ. ಈ ಸಮಾನಾಂತರ ಅಧಿಕಾರ ವ್ಯಾಪ್ತಿಯನ್ನು ತೆಗೆದುಹಾಕಲು ನ್ಯಾಯಾಧೀಕರಣಗಳು ತಾತ್ಕಾಲಿಕ ನಿರ್ಬಂಧಕಾಜ್ಞೆಯ ಸ್ವರೂಪದಲ್ಲಿ ವಾದಕಾಲೀನ ಆದೇಶಗಳನ್ನು ನೀಡುವ ಅಥವಾ ಗೇಣಿದಾರನು 48ಎ ಪ್ರಕರಣದ ಮೇರೆಗೆ ಯಾವ ಭೂಮಿಗೆ ಸಂಬಂಧಪಟ್ಟಂತೆ ಅರ್ಜಿಯನ್ನು ಸಲ್ಲಿಸಲಾಗಿದೆಯೋ ಆ ಭೂಮಿಯು ಕೃಷಿ ಭೂಮಿಯೇ ಅಥವಾ ಅಲ್ಲವೇ ಎಂಬುದನ್ನು ತೀರ್ಮಾನಿಸಲು ನ್ಯಾಯಾಧಿಕರಣಕ್ಕೆ ವಿಶಿಷ್ಟವಾದ ಅಧಿಕಾರ ನೀಡುವುದು ಅಗತ್ಯವೆಂದು ಪರಿಗಣಿಸಲಾಗಿತ್ತು. ಏಕೆಂದರೆ ಈ ವಿಷಯವನ್ನು ತೀರ್ಮಾನಿಸಲು ನ್ಯಾಯಾಧೀಕರಣಕ್ಕೆ ನಿರ್ದಿಷ್ಟ ಅಧಿಕಾರ ಇಲ್ಲದಿದ್ದುದರಿಂದ ನಿಯತ ಸಿವಿಲ್ ನ್ಯಾಯಾಲಯಗಳು ಭೂ ಸುಧಾರಣೆಗಳ ಅಧಿನಿಯಮದ ವ್ಯಾಪ್ತಿಯಲ್ಲಿ ಬರುವ ಅರ್ಜಿಗಳನ್ನು ಪುರಸ್ಕರಿಸಬಹುದೆಂಬ ಮತ್ತು ಯಾವುದೇ ಭೂಮಿಯು ಕೃಷಿ ಭೂಮಿಯೇ ಅಥವಾ ಅಲ್ಲವೇ ಎಂಬ ನಿರ್ಧಾರಕ್ಕೆ ಬರಬಹುದೆಂಬ ತೀರ್ಮಾನ ಆಗಿತ್ತು. ಯಾವ ವಿಷಯಗಳಿಗೆ ಸಂಬಂಧಿಸಿದಂತೆ ನ್ಯಾಯಾಧಿಕರಣಗಳಲ್ಲಿ ಈಗ ಅಧಿಕಾರಗಳನ್ನು ನಿಹಿತಗೊಳಿಸಲಾಗಿದೆಯೋ ಆ ಎಲ್ಲಾ ವಿಷಯಗಳನ್ನು ಸಿವಿಲ್ ನ್ಯಾಯಾಲಯಗಳು ನ್ಯಾಯಾಧಿಕರಣಗಳಿಗೆ ಕಳುಹಿಸಲು ಸಾಧ್ಯವಾಗುವಂತೆ ಮಾಡಲು 133ನೇ ಪ್ರಕರಣಕ್ಕೆ ಅನುಷಂಗಿಕ ತಿದ್ದುಪಡಿ ತರುವುದು ಸಹ ಅವಶ್ಯಕವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿರುವುದರಿಂದ ಈ ತಿದ್ದುಪಡಿಗಳನ್ನು 1975ರ ಅಧ್ಯಾದೇಶ ಸಂಖ್ಯೆ. 24ರ ಮೂಲಕ ಜಾರಿಗೆ ತರಲಾಗಿತ್ತು.

(1976ರ ವಿಧಾನಸಭೆಯ ವಿಧೇಯಕ ಸಂಖ್ಯೆ 17 ರಿಂದ ಪಡೆಯಲಾಗಿದೆ)

XV

**1976ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 44.–** ಹೆಚ್ಚುವರಿ ಭೂಮಿಗಳ ನಿರ್ಧರಣೆಗೆ ಸಂಬಂಧಿಸಿದ ಕೆಲಸ ತ್ವರಿತವಾಗಿ ಆಗಬೇಕಾಗಿದೆ, ಹಾಗೆ ಮಾಡಿದರೆ ಭೂ ರಹಿತರಿಗೆ ಆದಷ್ಟು ಬೇಗನೆ ಹಂಚಿಕೆ ಮಾಡಲು ಹೆಚ್ಚುವರಿ ಭೂಮಿಯು ಲಭ್ಯವಾಗುತ್ತದೆ. ಈಗ ಈ ಕೆಲಸವನ್ನು ಅಧಿಕೃತ ಅಧಿಕಾರಿಯಾದ ತಹಶೀಲ್ದಾರರಿಗೆ ವಹಿಸಲಾಗಿದೆ. ಈ ಕಾರ್ಯದಲ್ಲಿ ಅಧಿಕಾರರೇತರರನ್ನು ಸೇರಿಸಿಕೊಂಡರೆ ಇನ್ನಷ್ಟು ತ್ವರಿತವಾಗಿ ಪ್ರಗತಿ ಆಗಬಹುದೆಂದು ಭಾವಿಸಲಾಗಿದೆ. ಆದ್ದರಿಂದ, ಈ ಅಧಿನಿಯಮದ 48ನೇ ಪ್ರಕರಣದ ಮೇರೆಗೆ ಈಗಾಗಲೇ ರಚಿತವಾಗಿರುವ ನ್ಯಾಯಾಧಿಕರಣಕ್ಕೆ ಈ ಕಾರ್ಯವನ್ನು ವಹಿಸಿಕೊಡಲು ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ

(1976ರ ಏಪ್ರಿಲ್, 7ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–2ಎ ಯಲ್ಲಿ, ಪುಟ ಸಂಖ್ಯೆ. 4 ರಲ್ಲಿ ಸಂಖ್ಯೆ 1857ರಲ್ಲಿ ಪ್ರಕಟಿಸಲಾಗಿದೆ.

XVI

**1976ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 67.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮದ 48ಎ ಪ್ರಕರಣದ ಮೇರೆಗೆ ಸಲ್ಲಿಸಿದ ಅರ್ಜಿಗಳ ಸಂಬಂಧದಲ್ಲಿ ನ್ಯಾಯಾಧಿಕರಣಗಳು ವಿಳಂಬವನ್ನು ಮನ್ನಾ ಮಾಡುವುದಕ್ಕಾಗಿ ಇದ್ದ ಕಾಲಮಿತಿಯು 1976ರ ಜೂನ್ 30 ರಂದು ಮುಕ್ತಾಯಗೊಂಡಿದೆ. ಗೇಣಿದಾರರಲ್ಲಿ ಸಹಜವಾಗಿಯೇ ಜಾಗೃತಿ ಉಂಟಾಗಿರುವುದರ ಹಿನ್ನೆಲೆಯಲ್ಲಿ ನ್ಯಾಯಾಧಿಕರಣಗಳು ವಿಳಂಬವನ್ನು ಮನ್ನಾ ಮಾಡುವುದಕ್ಕೆ ಇದ್ದ ಕಾಲಮಿತಿಯನ್ನು, ಒಂದು ಅಧ್ಯಾದೇಶವನ್ನು ಹೊರಡಿಸುವ ಮೂಲಕ 1976 ಜುಲೈ 1ರಿಂದ 1976ರ ಡಿಸೆಂಬರ್ ಅಂತ್ಯದವರೆಗೆ ಮತ್ತೆ ಆರು ತಿಂಗಳುಗಳವರೆಗೆ ವಿಸ್ತರಣೆ ಮಾಡಿ, 48ಎ ಪ್ರಕರಣದ ಮೇರೆಗೆ ಅರ್ಜಿಗಳನ್ನು ಸಲ್ಲಿಸಲು ಅವರಿಗೆ ಮತ್ತಷ್ಟು ಅವಕಾಶವನ್ನು ನೀಡುವುದು ಅವಶ್ಯವೆಂದು ಪರಿಗಣಿಸಲಾಗಿತ್ತು.

ಆ ಅಧ್ಯಾದೇಶದ ಬದಲಿಗೆ ಈ ವಿದೇಯಕ.

(1976ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 10 ರಿಂದ ಇದನ್ನು ಪಡೆಯಲಾಗಿದೆ)

XVII

**1977ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 12.–** ನ್ಯಾಯಾಧೀಕರಣ ವಿಳಂಬವನ್ನು ಮನ್ನಾ ಮಾಡಲು ಮತ್ತು 48ಎ ಪ್ರಕರಣದ ಮೇರೆಗೆ ಗೇಣಿದಾರರು 1976ರ ಡಿಸೆಂಬರ್ 31ರ ವರೆಗೆ ಸಲ್ಲಿಸಿದ ಅರ್ಜಿಗಳನ್ನು ಅಂಗೀಕರಿಸಲು ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮಕ್ಕೆ ತಿದ್ದುಪಡಿ ಮಾಡಿ ನ್ಯಾಯಾಧಿಕರಣಗಳಿಗೆ ಅಧಿಕಾರವನ್ನು ನೀಡಲಾಯಿತ್ತು.

1976 ಜುಲೈ 1ರಿಂದ 1976ರ ಡಿಸೆಂಬರ್ 31ರ ವರಗೆ ವಿಸ್ತರಿಸಿದ ಅವಧಿಯಲ್ಲಿ ತಿಂಗಳಿಗೆ ಸರಾಸರಿ ಆರು ಸಾವಿರ ಅರ್ಜಿಗಳಂತೆ ಐದು ತಿಂಗಳುಗಳ ಅವಧಿಯಲ್ಲಿ ಸುಮಾರು 30,271 ಅರ್ಜಿಗಳನ್ನು ಸ್ವೀಕರಿಸಿರುವುದು ಕಂಡು ಬರುತ್ತದೆ. ಕಂದಾಯ ಅಧಿಕಾರಿಗಳು ಕೈಗೊಂಡ ವ್ಯಾಪಕ ಪ್ರಚಾರದಿಂದ ಮತ್ತು ವಿಶೇಷ ಆಂದೋಲನಗಳಿಂದ ಗೇಣಿದಾರರಲ್ಲಿ ಈಗ ಉಂಟಾದ ಜಾಗೃತಿಯ ಹಿನ್ನೆಲೆಯಲ್ಲಿ ಗೊತ್ತಿಲ್ಲದೆಯೋ ಅಥವಾ ಇತರ ಕಾರಣಗಳಿಂದಾಗಿಯಾಗಿಯೋ ಅಧಿಭೋಗದ ಹಕ್ಕುಗಳನ್ನು ಸ್ಥಿರೀಕರಿಸುವುದಕ್ಕಾಗಿ ತಮ್ಮ ಅರ್ಜಿಗಳನ್ನು ಇದುವರೆಗೂ ಸಲ್ಲಿಸದಿರುವ ಗೇಣಿದಾರರಿಗೆ ಇನ್ನು ಆರು ತಿಂಗಳುಗಳ ಕಾಲಮಿತಿಯನ್ನು ವಿಸ್ತರಿಸಿ ಒಂದು ಅವಕಾಶವನ್ನು ಅವರಿಗೆ ನೀಡುವುದು ಅಪೇಕ್ಷಣೀಯ ಎಂದು ಪರಿಗಣಿಸಲಾಗಿದೆ.

1977ರ ಜೂನ್ 30ರ ವರೆಗೆ ಕಾಲಮಿತಿಯನ್ನು ವಿಸ್ತರಿಸುವುದು ವಿಹಿತವೆಂದು ಭಾವಿಸಿದ್ದರಿಂದ ಮತ್ತು ರಾಜ್ಯ ವಿಧಾನ ಮಂಡಲದ ಉಭಯ ಸದನಗಳು ಅಧಿವೇಶನದಲ್ಲಿ ಇಲ್ಲದಿರುವುದರಿಂದ ಮತ್ತು ವಿಷಯವು ತುರ್ತು ಸ್ವರೂಪದ್ದಾಗಿರುವುದರಿಂದ 1976ರ ಅಧ್ಯಾದೇಶ ಸಂಖ್ಯೆ 38ನ್ನು ಹೊರಡಿಸಲಾಗಿದೆ.

ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮದ 53(1)ನೇ ಪ್ರಕರಣದ ಮೇರೆಗೆ ಇಡಿಗಂಟಿನಲ್ಲಿ ಒಂದೇ ಸಲ ಪ್ರೀಮಿಯಮ್‌ನ್ನು ಗೇಣಿದಾರರು ಸಂದಾಯ ಮಾಡಬೇಕಾಗಿತ್ತು ಮತ್ತು 53(1)(ಎ) ಪ್ರಕರಣದ ಮೇರೆಗೆ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು/ ತಾಲ್ಲೂಕು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕು ಇಡಿಗಂಟಿನಲ್ಲಿ ಒಂದೇ ಸಲ ಪ್ರೀಮಿಯಮ್ ಮೊತ್ತವನ್ನು ಗೇಣಿದಾರರು ಪಾವತಿ ಮಾಡಲು ಅಂಥ ಗೇಣಿದಾರರಿಗೆ ಹಣಕಾಸಿನ ನೆರವನ್ನು ನೀಡಬೇಕಾಗಿತ್ತು. ಈ ಯೋಜನೆಯು, 1976ರ ಕೊನೆಯ ಮೂರು ತಿಂಗಳ ಅವಧಿಯಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿತು. ಆದಾಗ್ಯೂ ಈ ಹಂತದಲ್ಲಿ ಈ ಯೋಜನೆಯಲ್ಲಿ ಮತ್ತಷ್ಟು ಪ್ರಗತಿಯಾಗುವುದಕ್ಕೆ ತಡೆಯೊಡ್ಡುವ ಒಂದು ಗಂಭೀರ ಅಡಚಣೆ ಎದುರಾಯಿತು. ಅದೇನೆಂದರೆ, ಭಾರತೀಯ ರಿಸರ್ವ್ ಬ್ಯಾಂಕು, ಒಂದು ವರ್ಷದಲ್ಲಿ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕ್ ನೀಡುವ ಒಟ್ಟು ಹಣಕಾಸು ನೆರವಿನ ಶೇಕಡಾ 10ರಷ್ಟನ್ನು ಅಂಥ ಉದ್ದೇಶಗಳಿಗಾಗಿ ಹಣಕಾಸಿನ ನೆರವನ್ನು ನೀಡುವುದಕ್ಕೆ ಮಿತಿಯನ್ನು ವಿಧಿಸಿತ್ತು. 1976ರ ಡಿಸೆಂಬರ್, ಹೊತ್ತಿಗಾಗಲೇ ಕರ್ನಾಟಕದಲ್ಲಿನ ರಾಜ್ಯದ ಭೂ ಅಭಿವೃದ್ಧಿ ಬ್ಯಾಂಕ್, ಈ ಶೇಕಡಾ 10ರ ಮಿತಿಯನ್ನು ಮೀರಿತ್ತು. ಆದರೆ, ಭೂ ಸುಧಾರಣೆಗಳ ಅಧಿನಿಯಮಕ್ಕೆ ಕೆಲವು ತಿದ್ದುಪಡಿಗಳನ್ನು ತಂದಿದ್ದಾರೆ, ಭೂ ಮಾಲೀಕರಿಗೆ ಸರ್ಕಾರವು ಸಂವಾದಿಯಾಗಿ ಎಷ್ಟನ್ನು ಸಂದಾಯ ಮಾಡಬೇಕಾಗುತ್ತಿತ್ತೋ ಅಷ್ಟನ್ನು ಮಾತ್ರವೇ ಒಂದು ಬಾರಿ ಸಂದಾಯ ಮಾಡಬೇಕೆಂದು ಗೇಣಿದಾರರನ್ನು ಕೇಳುವುದಕ್ಕೆ ಸಾಧ್ಯವಾಗುತ್ತದೆಂದು ಹೀಗಾಗಿ ಹೆಚ್ಚಿನ ಬಡ್ಡಿಯ ಭಾರದಿಂದ ಗೇಣಿದಾರರನ್ನು ತಪ್ಪಿಸಿದಂತಾಗುತ್ತದೆಂದು ಭಾರತೀಯ ರಿಸರ್ವ್ ಬ್ಯಾಂಕು 1977ರ ಫೆಬ್ರವರಿ, 3ನೇ ವಾರದಲ್ಲಿ ಈ ಶೇಕಡಾ 10ರ ಮಿತಿಯನ್ನು ಸಡಿಲಗೊಳಿಸಲು ಒಪ್ಪಿಕೊಂಡಿತ್ತು. ಭಾರತೀಯ ರಿಸರ್ವ್ ಬ್ಯಾಂಕಿನ ಈ ಸಲಹೆಯು ಅತ್ಯಂತ ಸೂಕ್ತ ಎಂಬುದನ್ನು ಮನಗಂಡು ಸರ್ಕಾರವು ಅದನ್ನು ಒಪ್ಪಿಕೊಂಡಿತ್ತು. ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳ/ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳ ಮುಖಾಂತರ ಗೇಣಿದಾರರಿಗೆ ಹಣಕಾಸಿನ ನೆರವನ್ನು ನೀಡುವ ಯೋಜನೆಯು ನಿಧಾನಗತಿಯಲ್ಲಿ ಸಾಗಿಲ್ಲವೆಂದು ಖಚಿತಪಡಿಸಿಕೊಳ್ಳುವ ಸಲುವಾಗಿ ಅವರವರ ಭೂಮಿಗಳ ಮೇಲೆ ಅಧಿಭೋಗದ ಹಕ್ಕುಗಳನ್ನು ಪಡೆಯಲು ಎಲ್ಲಾ ಅರ್ಹ ಗೇಣಿದಾರರಿಗೆ ನೆರವು ನೀಡುವ ಸಲುವಾಗಿ ಭಾರತೀಯ ರಿಸರ್ವ್ ಬ್ಯಾಂಕು ನಿರೂಪಿಸಿದ ತತ್ವಗಳಿಗನುಸಾರವಾಗಿ ಭೂ ಸುಧಾರಣೆಗಳ ಅಧಿನಿಯಮಕ್ಕೆ ಇನ್ನು ಹೆಚ್ಚಿನ ತಿದ್ದುಪಡಿಗಳನ್ನು ಮಾಡಲು ಅಧ್ಯಾದೇಶವನ್ನು ಹೊರಡಿಸಲಾಯಿತು. ಹೀಗಾಗಿ, ಸರ್ಕಾರವು, ಗೇಣಿಗೆ ನೀಡಿದ ಭೂಮಿಗಳಿಂದ ಗೇಣಿದಾರರಿಗೆ ಆದಾಯದಲ್ಲಿ ಆದ ನಷ್ಟಕ್ಕೆ ಅವರಿಗೆ ಪರಿಹಾರ ನೀಡಲು ಈ ಸಂಸ್ಥೆಗಳಿಗೆ ವರ್ಷವರ್ಷವೂ ನಿರಂತರವಾಗಿ ಈ ಅಧಿನಿಯಮದ ಮೇರೆಗೆ ಸರ್ಕಾರವು ಹಣ ಒದಗಿಸುವುದು ಅನಿವಾರ್ಯವಾಯಿತು. ಹೊರಡಿಸಲಾದ ತಿದ್ದುಪಡಿ ಅಧ್ಯಾದೇಶದಲ್ಲಿ ಅಂಥ ಸಂಸ್ಥೆಗಳಿಗೆ ವಿಶೇಷ ಉಪಬಂಧವನ್ನು ಸಹ ಕಲ್ಪಿಸಬೇಕಾಗಿತ್ತು.

ಆದ್ದರಿಂದ, ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧ್ಯಾದೇಶ, 1977ನ್ನು ಸಹ ಹೊರಡಿಸಲಾಯಿತು. ಆ ಅಧ್ಯಾದೇಶದ ಬದಲಿಗೆ ಈ ವಿಧೇಯಕ.

(1977ರ ಮಾರ್ಚ್, 26ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–2ಎ ಯಲ್ಲಿ, ಪುಟ ಸಂಖ್ಯೆ. 5ರಲ್ಲಿ ಸಂಖ್ಯೆ 234 ರಲ್ಲಿ ಪ್ರಕಟಿಸಲಾಗಿದೆ)

XVIII

**1977ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 23.–** ಭೂ ಸುಧಾರಣೆಗಳ ಅಧಿನಿಯಮದ ಕೆಲವು ಉಪಬಂಧಗಳ ಬಗ್ಗೆ ಸ್ಪಷ್ಟೀಕರಣ ನೀಡುವ ಸಲುವಾಗಿ ಮತ್ತು ಅವುಗಳ ತ್ವರಿತ ಅನುಷ್ಠಾನದ ಉದ್ದೇಶಕ್ಕಾಗಿ ಅಧಿನಿಯಮದ ಕೆಲವು ಉಪಬಂಧಗಳಿಗೆ ಇತರ ತಿದ್ದುಪಡಿಗಳ ಜೊತೆಗೆ ಈ ಮುಂದಿನ ತಿದ್ದುಪಡಿಗಳನ್ನು ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

(1) ಅಧಿಭೋಗದಾರನಾಗಿ ನೋಂದಾಯಿಸಿಕೊಳ್ಳುವುದಕ್ಕಾಗಿ ಆತನು ಸಲ್ಲಿಸಿರುವ ಅರ್ಜಿಯನ್ನು ನ್ಯಾಯಾಧಿಕರಣವು ವಿಲೆ ಮಾಡುವವರೆಗೆ ಗೇಣಿದಾರನಿಂದ ಯಾವುದೇ ಗೇಣಿಯನ್ನು ವಸೂಲು ಮಾಡದಿರುವುದು.

(2) ಹೆಚ್ಚುವರಿ ಭೂಮಿಯನ್ನು 77ನೇ ಪ್ರಕರಣದ ಮೇರೆಗೆ ವಿಲೆ ಮಾಡುವುದಕ್ಕೂ ಮೊದಲು ಅನಧಿಕೃತ ಅನುಭೋಗದಾರನನ್ನು ಒಕ್ಕಲೆಬ್ಬಿಸುವುದು.

(3) ನ್ಯಾಯಾಧಿಕರಣದ ಯಾರೇ ಸದಸ್ಯನು ಮೂರು ನಿರಂತರ ಸಭೆಗಳಿಗೆ ಖುದ್ದು ಗೈರುಹಾಜರಾದರೆ ಅವನು ಸದಸ್ಯನಾಗಿರುವುದು ನಿಂತುಹೋಗುವುದಕ್ಕೆ ಉಪಬಂಧ ಕಲ್ಪಿಸುವುದು.

(4) ಹಿಂದಿನ ನಡವಳಿಗಳನ್ನು ಪುನರ್‌ರಚಿತ ನ್ಯಾಯಾಧಿಕರಣವು ಮುಂದುವರೆಸುವುದಕ್ಕಾಗಿ ಉಪಬಂಧ ಕಲ್ಪಿಸುವುದು.

(5) ಕ್ಲೇಮಿನಲ್ಲಿ ಎಷ್ಟನ್ನು ಒಪ್ಪಿಕೊಳ್ಳಲಾಗಿದೆಯೋ ಅಷ್ಟಕ್ಕೆ ಆದೇಶಗಳನ್ನು ಹೊರಡಿಸಲು ಮತ್ತು ಎಷ್ಟಕ್ಕೆ ತಕರಾರು ಮಾಡಲಾಗಿದೆಯೋ ಅಷ್ಟನ್ನು ಪ್ರತ್ಯೇಕವಾಗಿ ಮುಂದುವರೆಸಲು ನ್ಯಾಯಾಧಿಕರಣಕ್ಕೆ ಅಧಿಕಾರ ಕೊಡುವುದು.

(6) ಗೇಣಿದಾರನು ಎಷ್ಟು ಕಂತುಗಳಲ್ಲಿ ಪ್ರೀಮಿಯಂನ್ನು ಸಂದಾಯ ಮಾಡಬೇಕೋ ಅಷ್ಟು ಕಂತುಗಳ ಸಂಖ್ಯೆಯು ಕ್ರೆಡಿಟ್ ಏಜೆನ್ಸಿಯಿಂದ ಅವನು ಸಾಲವನ್ನು ಎಷ್ಟು ಕಂತುಗಳಲ್ಲಿ ಪಡೆದಿದ್ದಾನೋ ಅಷ್ಟೇ ಇರತಕ್ಕದ್ದು ಎಂದು ಉಪಬಂಧ ಕಲ್ಪಿಸುವುದು.

(7) ಸರ್ಕಾರಕ್ಕೆ ಕೂಡಲೆ ಸ್ವಾಧೀನವನ್ನು ವಹಿಸಿಕೊಡದಿರುವ ವ್ಯಕ್ತಿಯಿಂದ ಹೆಚ್ಚುವರಿ ಭೂಮಿಯ ಬಳಕೆಗಾಗಿ ಮತ್ತು ಅಧಿಭೋಗಕ್ಕಾಗಿ ಪರಿಹಾರವನ್ನು ವಸೂಲಿ ಮಾಡುವುದು.

(8) ರಚಿಸಲಾಗುತ್ತಿರುವ ನಿಯಮಗಳಲ್ಲಿ ಹೆಚ್ಚುವರಿ ಭೂಮಿಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಮೀಸಲಿರಿಸಿದ ತರುವಾಯ ಇನ್ನೂ ಉಳಿದಿರುವ ಹೆಚ್ಚುವರಿ ಭೂಮಿಗಳ ವಿತರಣೆಗೆ ಸಂಬಂಧಿಸಿದಂತೆ ಅವಕಾಶ ಕಲ್ಪಿಸಲು ಅಧಿಕಾರ ನೀಡುವುದು.

(9) 83ನೇ ಪ್ರಕರಣದ ಮೇರೆಗೆ ನಿಯಮಿಸಿದ ಪ್ರಾಧಿಕಾರವು ಹೊರಡಿಸಿದ ಆದೇಶಗಳ ವಿರುದ್ಧ ಅಪೀಲು ಸಲ್ಲಿಸಲು ಉಪಬಂಧ ಕಲ್ಪಿಸುವುದು.

(10) ಪ್ರಾಸಂಗಿಕ ಮತ್ತು ಇತರ ಅನುಷಂಗಿಕ ತಿದ್ದುಪಡಿಗಳಿಗೆ ಉಪಬಂಧ ಕಲ್ಪಿಸುವುದು.

ಆದ್ದರಿಂದ ಈ ವಿಧೇಯಕ.

(1977ರ ಜುಲೈ, 19ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–2ಎ ಯಲ್ಲಿ, ಪುಟ ಸಂಖ್ಯೆ. 8ರಲ್ಲಿ ಸಂಖ್ಯೆ 549ರಲ್ಲಿ ಪ್ರಕಟಿಸಲಾಗಿದೆ)

XIX

**1979ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 1.–** 1974 ರ ಅಧಿನಿಯಮ ಸಂಖ್ಯೆ 1 ಕ್ಕೆ ಅನುಮತಿ ನೀಡುವಾಗ ಭಾರತ ಸರ್ಕಾರವು ನೀಡಿರುವ ಸಲಹೆಗಳನ್ನು ಜಾರಿಗೆ ತರುವುದು ಮತ್ತು ಈ ಅಧಿನಿಯಮವನ್ನು ಅನುಷ್ಠಾನಗೊಳಿಸುವಲ್ಲಿ ಕಂಡುಬರುವ ಕೆಲವು ತೊಂದರೆಗಳನ್ನು ನಿವಾರಿಸುವುದು ಈ ವಿಧೇಯಕದಲ್ಲಿ ಪ್ರಸ್ತಾವಿಸಿದ ತಿದ್ದುಪಡಿಗಳು, ಮುಖ್ಯ ಉದ್ದೇಶ, ಅಂಥ ಕೆಲವು ಪ್ರಮುಖ ತಿದ್ದುಪಡಿಗಳು ಇಂತಿವೆ:–

(1) ಕೋಕಾವನ್ನು ಒಂದು ಪ್ಲಾಂಟೇಷನ್ ಬೆಳೆ ಎಂಬುದಾಗಿ ಪರಿಗಣಿಸುವುದು;

(2) 5ನೇ ಪ್ರಕರಣದ ಉಪಬಂಧಗಳಿಗೆ ತದ್ವಿರುದ್ಧವಾಗಿ 1974ರ ಮಾರ್ಚ್ 1 ರವರೆಗೆ ಸೃಜಿಸಿದ ಗೇಣಿಗಳ ಆಧಾರದ ಮೇಲೆ ಭೂಮಿಗಳನ್ನು ಸಾಗುವಳಿ ಮಾಡುತ್ತಿರುವ ವ್ಯಕ್ತಿಗಳನ್ನು "ಗೇಣಿದಾರ" ಎಂದು ಘೋಷಿಸಲು ಪ್ರಸ್ತಾವಿಸಲಾಗಿದೆ;

(3) ಸೇವೆಯಲ್ಲಿರುವಾಗಲೇ ಮೃತಪಟ್ಟ ಸೈನಿಕರ ಕೆಲವು ಅವಲಂಬಿತರಿಗೆ, ತಮ್ಮ ಗೇಣಿದಾರರಿಂದ ಪುನಃವಶಕ್ಕೆ ಪಡೆದ ಭೂಮಿಯನ್ನು ಪರಭಾರೆ ಮಾಡಲು ಅನುಮತಿಸಲು ಪ್ರಸ್ತಾವಿಸಲಾಗಿದೆ;

(4) ಕೃಷಿ ಕಾರ್ಮಿಕರ ವಾಸದ ಮನೆಗಳ ಮಾಲೀಕತ್ವವನ್ನು ಅವರಿಗೆ ನೀಡಲು ಉಪಬಂಧವನ್ನು ಕಲ್ಪಿಸಲಾಗುತ್ತಿದೆ;

(5) ನ್ಯಾಯಾಧಿಕರಣದ ಮೂರಕ್ಕಿಂತ ಹೆಚ್ಚು ನಿರಂತರ ಸಭೆಗಳಿಗೆ ಸ್ವತಃ ನಿರಂತರವಾಗಿ ಗೈರುಹಾಜರಾಗುವ ನ್ಯಾಯಾಧಿಕರಣದ ಸದಸ್ಯರನ್ನು ತೆಗೆದುಹಾಕಬೇಕೆಂದು ಪ್ರಸ್ತಾವಿಸಲಾಗಿದೆ ಮತ್ತು ಅಗತ್ಯವಿರುವಲ್ಲೆಲ್ಲ ಒಂದು ನ್ಯಾಯಾಧಿಕರಣದಿಂದ ಮತ್ತೊಂದು ನ್ಯಾಯಾಧಿಕರಣಕ್ಕೆ ಪ್ರಕರಣಗಳನ್ನು ವರ್ಗಾವಣೆ ಮಾಡಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಲಾಗುತ್ತಿದೆ;

(6) ವಿಳಂಬಕ್ಕೆ ಸಾಕಷ್ಟು ಕಾರಣವನ್ನು ತೋರಿಸದೆ 31–12–1974ರ ತರುವಾಯ ಅಧಿಭೋಗದಾರರಾಗಿ ನೋಂದಾಯಿತರಾಗಲು ತಮ್ಮ ಅರ್ಜಿಗಳನ್ನು ಸಲ್ಲಿಸಿದ ಗೇಣಿದಾರರು ನೋಂದಣಿಯಾಗುವುದನ್ನು ಉಚ್ಚ ನ್ಯಾಯಾಲಯವು ಇತ್ತೀಚೆಗೆ ತಳ್ಳಿ ಹಾಕಿದೆ. ಎಲ್ಲ ಅಂಥ ಅರ್ಜಿಗಳನ್ನು ಸಿಂಧುವಾದವುಗಳನ್ನಾಗಿ ಮಾಡಲು ಪ್ರಸ್ತಾವಿಸಲಾಗಿದೆ. ಘೋಷಣೆಗಳನ್ನು ಸಲ್ಲಿಸುವ ಅವಧಿಯನ್ನು ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಮೂರು ತಿಂಗಳುಗಳು ಮುಕ್ತಾಯವಾಗುವವರೆಗೆ ವಿಸ್ತರಿಸಲಾಗುತ್ತಿದೆ;

7) ಯಾರ ವಾರ್ಷಿಕ ಆದಾಯವು 2,400 ರೂಪಾಯಿಗಳಿಗಿಂತ ಹೆಚ್ಚಿಲ್ಲವೋ ಆ ಭೂ ಮಾಲೀಕರಿಗೆ ಒಂದೇ ಇಡಿಗಂಟಿನಲ್ಲಿ ಪರಿಹಾರದ ಹಣವನ್ನು ಸಂದಾಯ ಮಾಡುವುದಕ್ಕೆ ಉಪಬಂಧ ಕಲ್ಪಿಸಲು ಮತ್ತು ಒಂದೇ ಇಡಿಗಂಟಿನಲ್ಲಾಗಲಿ ಅಥವಾ ಅನ್ಯೂಇಟಿ ರೂಪದಲ್ಲಾಗಲಿ ಪರಿಹಾರದ ಮೊತ್ತವನ್ನು ಸ್ವೀಕರಿಸಲು ವಿಧವೆಯರಿಗೆ ಆಯ್ಕೆ ಅವಕಾಶವನ್ನು ಕಲ್ಪಿಸಲು ಉದ್ದೇಶಿಸಲಾಗಿದೆ. ಧಾರ್ಮಿಕ ಮತ್ತು ಧರ್ಮಾದಾಯ ಸಂಸ್ಥೆಯ ಸಂದರ್ಭದಲ್ಲಿ ಅನ್ಯೂಇಟಿಯ ಬದಲಾಗಿ ಸಂದಾಯ ಮಾಡಬಹುದಾದ ಮೊಬಲಗನ್ನು 61 ತಿಂಗಳುಗಳಿಗಿಂತ ಕಡಿಮೆ ಇಲ್ಲದ ಅವಧಿಗೆ ಶೆಡ್ಯೂಲ್ಡ್ ಬ್ಯಾಂಕಿನಲ್ಲಿ ನಿಶ್ಚಿತ ಠೇವಣಿಯಲ್ಲಿ ಠೇವಣಿ ಇಟ್ಟಿದ್ದರೆ ಎಷ್ಟು ಬಡ್ಡಿಯು ಪ್ರಾಪ್ತವಾಗುತಿತ್ತು ಅಷ್ಟು ಬಡ್ಡಿಯನ್ನು ಪ್ರತಿ ವರ್ಷವೂ ನೀಡಲು ಉದ್ದೇಶಿಸಲಾಗಿದೆ;

8) ಭಾರತೀಯ ರಿಸರ್ವ್ ಬ್ಯಾಂಕಿನ ಅಪೇಕ್ಷೆಯಂತೆ ಭೂ ಮಾಲೀಕರಿಗೆ ಪರಿಹಾರವನ್ನು ವರ್ಗಾವಣೀಯವಲ್ಲದ ಬಾಂಡ್‌ಗಳ ರೂಪದಲ್ಲಿ ನೀಡಲು ಉದ್ದೇಶಿಸಲಾಗಿದೆ;

9) ಹೆಚ್ಚುವರಿ ಭೂಮಿಗಳನ್ನು ವಿತರಣೆ ಮಾಡಲು ಜಿಲ್ಲಾಧಿಕಾರಿಗೆ ಅಥವಾ ಸರ್ಕಾರವು ಅಧಿಕೃತಗೊಳಿಸಿದ ಕೆಲವು ಇತರ ಅಧಿಕಾರಿಗಳಿಗೆ ಅಧಿಕಾರ ನೀಡಲು ಉದ್ದೇಶಿಸಲಾಗಿದೆ;

10) ಸದರಿ ಆದೇಶವನ್ನು, ಮೋಸದಿಂದ, ವಾಸ್ತವಾಂಶಗಳನ್ನು ತಪ್ಪು ನಿರೂಪಣೆ ಮಾಡಿ ಅಥವಾ ಬಚ್ಚಿಟ್ಟು ಅಥವಾ ಸುಳ್ಳು, ತಪ್ಪು ಅಥವಾ ಅಪೂರ್ಣ ಘೋಷಣೆಗಳನ್ನು ಒದಗಿಸಿ ಪಡೆದುಕೊಳ್ಳಲಾಗಿದೆಯೆಂದು ನ್ಯಾಯಾಧಿಕರಣಕ್ಕೆ ಮನದಟ್ಟಾದರೆ ಅದು ನ್ಯಾಯಾಧೀಕರಣವು 67ನೇ ಪ್ರಕರಣದ ಮೇರೆಗೆ ಹೊರಡಿಸಿದ ಯಾವುವೇ ಆದೇಶಗಳನ್ನು ಪುನರ್ ಪರಿಶೀಲನೆಗೆ ತೆಗೆದುಕೊಳ್ಳುವ ಅಧಿಕಾರವನ್ನು ನ್ಯಾಯಾಧೀಕರಣಕ್ಕೆ ನೀಡಲಾಗುತ್ತಿದೆ.

11) ಅಧಿನಿಯಮದ ಉಪಬಂಧಗಳನ್ನು ಇನಾಮುಗಳು ಅಥವಾ ಇತರ ಪರಭಾರೆ ಮಾಡಿದ ಭೂಮಿಗಳಲ್ಲಿ ಭೂ ಹಿಡುವಳಿಗಳನ್ನು ಹೊಂದಿರುವ ಎಲ್ಲ ಗೇಣಿದಾರರಿಗೆ ಮತ್ತು ಭೂ ಮಾಲೀಕರಿಗೆ ಅನ್ವಯವಾಗುವಂತೆ ಮಾಡಲಾಗುತ್ತಿದೆ.

12) ಈಗಿರುವ ಅನುಸೂಚಿ–1 ರ ಅನುಸಾರ, ಸರ್ಕಾರವು ಭೂಮಿಗಳನ್ನು ವರ್ಗೀಕರಣ ಮಾಡುವ ಉದ್ದೇಶಕ್ಕಾಗಿ ಎಲ್ಲ ಭೂಮಿಗಳಿಗೆ, ಸರ್ಕಾರದ ಕಾಲುವೆಗಳಿಂದ ಮತ್ತು ಸರ್ಕಾರದ ಕೆರೆಗಳಿಂದ ನೀರಾವರಿ ಸೌಲಭ್ಯಗಳ ಬಗೆಯನ್ನು ನಿರ್ದಿಷ್ಟಪಡಿಸಿ ಅಧಿಸೂಚನೆಯನ್ನು ಹೊರಡಿಸಬೇಕಾಗುತ್ತದೆ. ಅಂಥ ಅಧಿಸೂಚನೆಯನ್ನು ಸರ್ಕಾರವು ಹೊರಡಿಸುವ ಅಗತ್ಯತೆಯನ್ನು ತೆಗೆದುಹಾಕಲು ಉದ್ದೇಶಿಸಲಾಗಿದೆ.

ಕೆಲವು ಇತರ ಅನುಷಂಗಿಕ ಮತ್ತು ಸಣ್ಣಪುಟ್ಟ ತಿದ್ದುಪಡಿಗಳನ್ನು ಮಾಡಲು ಈ ಅವಕಾಶವನ್ನು ಬಳಸಿಕೊಳ್ಳಲಾಗಿದೆ.

ಆದ್ದರಿಂದ ಈ ವಿಧೇಯಕ.

(1978ರ ವಿಧಾನಸಭೆ ವಿಧೇಯಕ ಸಂಖ್ಯೆ 27 ರಿಂದ ಪಡೆಯಲಾಗಿದೆ)

**XX**

**1980ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ. 2.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ ಸಂಖ್ಯೆ 10) 55ನೇ ಪ್ರಕರಣದ ಮೇರೆಗೆ ಅಧಿಭೋಗದಾರನಾಗಿ ನೋಂದಾಯಿಸಿಕೊಳ್ಳಲು ಹಕ್ಕುಳ್ಳ ವ್ಯಕ್ತಿಯು, ಅಧಿಭೋಗದಾರನಾಗಿ ನೋಂದಣಿ ಪ್ರಮಾಣಪತ್ರವನ್ನು ಪಡೆಯುವ ಸಲುವಾಗಿ ಸಂದಾಯ ಮಾಡಬೇಕಾದ ಮೊಬಲಗನ್ನು ಪೂರ್ಣವಾಗಿ ಅಥವಾ ಅದರ ಪ್ರಥಮ ಕಂತನ್ನು ಸಂದಾಯ ಮಾಡಬೇಕಾಗಿತ್ತು. ಎರಡು ಯೂನಿಟ್‌ಗಳನ್ನು ಮೀರದ ಭೂ ವಿಸ್ತೀರ್ಣದ ಅಧಿಭೋಗದಾರರಾಗಿ ನೋಂದಾಯಿಸಿಕೊಳ್ಳಲು ಹಕ್ಕುಳ್ಳ ಸಣ್ಣ ಗೇಣಿದಾರರು, ಪ್ರಾರಂಭಿಕವಾಗಿ ಒಂದು ನೂರು ರೂಪಾಯಿಗಳ ಮೊತ್ತವನ್ನು ಸಂದಾಯ ಮಾಡಿದ ಮೇಲೆ ಅಧಿಭೋಗದಾರರಾಗಿ ಸ್ವತಃ ನೋಂದಾಯಿಸಿಕೊಳ್ಳಲು ಅವರಿಗೆ ಅನುಮತಿ ನೀಡುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಇದು ಅವರ ಭೂಮಿಯ ಅಭಿವೃದ್ಧಿಗಾಗಿ ಮತ್ತು ಕೃಷಿ ಕಾರ್ಯಾಚರಣೆಗಳಿಗಾಗಿ ಹಣಕಾಸು ನೆರವನ್ನು ಪಡೆಯಲು ಅವರಿಗೆ ಅನುಕೂಲ ಕಲ್ಪಿಸುತ್ತದೆ.

ಸಣ್ಣ ಗೇಣಿದಾರರಿಗೆ ಕೂಡಲೇ ಪ್ರಯೋಜನವನ್ನು ವಿಸ್ತರಿಸುವ ಸಲುವಾಗಿ ಅಧ್ಯಾದೇಶವನ್ನು ಹೊರಡಿಸಲಾಗಿತ್ತು. ಆ ಅಧ್ಯಾದೇಶದ ಬದಲಿಗೆ ಪ್ರಸ್ತುತ ವಿಧೇಯಕವನ್ನು ತರಲು ಉದ್ದೇಶಿಸಲಾಗಿದೆ.

(1980ರ ಫೆಬ್ರವರಿ, 27ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–2ಎ ಯಲ್ಲಿ , ಪುಟ ಸಂ. 3 ರಲ್ಲಿ ಕ್ರಸಂ. 138ರಲ್ಲಿ ಪ್ರಕಟಿಸಲಾಗಿದೆ)

**XXI**

**1982ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ. 3.–** 5ನೇ ಪ್ರಕರಣದ (2)ನೇ ಉಪ–ಪ್ರಕರಣವನ್ನು, 1974ರ ಮಾರ್ಚ್ 1 ಕ್ಕಿಂತ ಮುಂಚೆ ಸೃಜಿಸಿದ ಗೇಣಿದಾರಿಕೆಗೆ ವಿನಾಯಿತಿ ನೀಡಲು ತಿದ್ದುಪಡಿ ಮಾಡಲಾಗಿದೆ. ಆದರೆ ಸೈನಿಕನು ಅಥವಾ ನಾವಿಕನು ಮುಂದುವರಿಸಿದ ಗೇಣಿದಾರಿಕೆಗೆ 5(1)ನೇ ಪ್ರಕರಣದ ಉಪಬಂಧಗಳು ಅನ್ವಯವಾಗದಂತೆ ಸಹ ವಿನಾಯಿತಿ ನೀಡಲಾಗುತ್ತಿದೆ.

1978ರ ಡಿಸೆಂಬರ್ 31 ರಂದು ಭೂ ಮಾಲೀಕರು ಎಷ್ಟು ಹಣ ಪಡೆಯಬೇಕಗಿತ್ತೋ, ಭೂ ಮಾಲೀಕರಿಗೆ "ಸಂದಾಯ ಮಾಡಬಹುದಾದ ಮೊಬಲಗಿನ" ಪ್ರಮಾಣವನ್ನು ಅಷ್ಟಕ್ಕೆ ಸೀಮಿತಗೊಳಿಸುವುದೇ, 1979ರ ಜನವರಿ 1 ರಂದು ಜಾರಿಗೆ ಬರುವಂತೆ 8ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡವನ್ನು ಬದಲಿಗೆ ತಂದಿರುವುದರ ಉದ್ದೇಶ.

ನ್ಯಾಯಾಧಿಕರಣಗಳು ತಮ್ಮ ಆದೇಶಗಳಲ್ಲಿ ಲಿಪಿಕ ಅಥವಾ ಲೆಕ್ಕಾಚಾರದ ತಪ್ಪುಗಳನ್ನು ಸರಿಪಡಿಸಲು ಸಾಧ್ಯವಾಗುವಂತೆ ಮಾಡಲು 48ಎ ಪ್ರಕರಣದ (6)ನೇ ಉಪ ಪ್ರಕರಣಕ್ಕೆ ಪರಂತುಕವನ್ನು ಸೇರಿಸಲಾಗಿದೆ.

ಹೊಲಮನೆಗಳ ಹತ್ತಿರ ವಾಸಿಸುವ ನಿವಾಸಿಗಳು ದಾಖಲು ಮಾಡುವ ಅರ್ಜಿಗಳು ವಿಲೆಯಾಗುವವರೆಗೆ ಅವರನ್ನು ಒಕ್ಕಲೆಬ್ಬಿಸುವುದನ್ನು ತಡೆಯುವ ಸಲುವಾಗಿ ಮಧ್ಯಂತರ ಆದೇಶಗಳನ್ನು ಹೊರಡಿಸಲು ನ್ಯಾಯಾಧಿಕರಣಗಳಿಗೆ ಅಧಿಕಾರ ನೀಡುವ ಸಲುವಾಗಿ 48ಸಿ ಪ್ರಕರಣವನ್ನು ತಿದ್ದುಪಡಿ ಮಾಡಲಾಗಿದೆ.

ಅಪ್ರಾಪ್ತರು, ವಿಧವೆಯರು, ಸಣ್ಣ ಹಿಡುವಳಿದಾರರು, ಮುಂತಾದವರಿಗೆ ಕೊಡುವ ಇಡಿಗಂಟಿನ ಪ್ರಮಾಣವನ್ನು 50,000/– ರೂಪಾಯಿಗಳಿಗೆ ಮಿತಿಗೊಳಿಸುವ ಸಲುವಾಗಿ 51ನೇ ಪ್ರಕರಣಕ್ಕೆ ತಿದ್ದುಪಡಿ ತರಲು ಉದ್ದೇಶಿಸಲಾಗಿದೆ. ಸಂದಾಯ ಮಾಡಬಹುದಾದ ಮೊಬಲಗನ್ನು ನಿರ್ಧರಣೆ ಮಾಡುವ ಕಾಲದಲ್ಲಿ ಅಪ್ರಾಪ್ತರನ್ನು ಅಥವಾ ನಿಯಮಿಸಿದ ದೈಹಿಕ ಅಥವಾ ಮಾನಸಿಕ ವಿಕಲತೆಗೆ ಒಳಗಾಗದಂಥ ವ್ಯಕ್ತಿಗಳನ್ನು ಸಹ ಇಡಿಗಂಟು ಸಂದಾಯಕ್ಕೆ ಅರ್ಹರನ್ನಾಗಿ ಮಾಡಲಾಗಿದೆ.

ಭೂ ಮಾಲೀಕರ ಸ್ಥಾನಮಾನಕ್ಕೆ ಅನುಗುಣವಾಗಿ ಮಾಜಿ ಗೇಣಿದಾರರ ಇಡಿಗಂಟಿನಲ್ಲಿ ಮತ್ತು ಕಂತುಗಳಲ್ಲಿ ಪ್ರೀಮಿಯಂ ಹಣವನ್ನು ಸಂದಾಯ ಮಾಡುವುದಕ್ಕೆ ಸಂಬಂಧಿಸಿದ ಈಗಿರುವ ತಾರತಮ್ಯವನ್ನು 53ನೇ ಪ್ರಕರಣವನ್ನು ತಿದ್ದುಪಡಿ ಮಾಡುವ ಮೂಲಕ ತೆಗೆದುಹಾಕಲಾಗಿದೆ. ಅಲ್ಲದೆ, ಕರ್ನಾಟಕ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು ಮುಂಗಡವಾಗಿ ನೀಡಿದ್ದ ಹಣಕ್ಕೆ ಸಂಬಂಧಿಸಿದ ಕಂತುಗಳ ಮೇಲಿನ ಬಡ್ಡಿಯನ್ನು ಗೇಣಿದಾರರು ಸಂದಾಯ ಮಾಡಬೇಕಾಗಿಲ್ಲ.

ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆಗಳಿಗೆ ಅನ್ಯೂಇಟಿಯನ್ನು ಸಂದಾಯ ಮಾಡುವುದಕ್ಕಾಗಿ ನಿಧಿಯನ್ನು ಸೃಜಿಸಲು 53ಎ ಪ್ರಕರಣವನ್ನು ಸೇರಿಸಲಾಗಿದೆ.

ಭೂ ನ್ಯಾಯಾಧೀಕರಣಗಳ ತೀರ್ಪುಗಳು ಕೈ ಸೇರಿದ ಕೂಡಲೇ 100/–ರೂಪಾಯಿಗಳ ಮೊತ್ತವನ್ನು ಅಥವಾ ಯಾವುದೇ ಪ್ರೀಮಿಯಂ ಮೊಬಲಗನ್ನು ಅಥವಾ ಅದರ ಮೊದಲನೇ ಕಂತನ್ನು ಪ್ರಥಮತಃ ಪಾವತಿ ಮಾಡದೆಯೇ, ಅಧಿಭೋಗದ ಹಕ್ಕುಗಳ ಪ್ರಮಾಣಪತ್ರಗಳನ್ನು ಮಾಜಿ–ಗೇಣಿದಾರರು ಪಡೆಯಲು ಸಾಧ್ಯವಾಗುವಂತೆ ಮಾಡುವ ಸಲುವಾಗಿ 55ನೇ ಪ್ರಕರಣವನ್ನು ತಿದ್ದುಪಡಿ ಮಾಡಲಾಗಿದೆ.

ಘೋಷಿತ ಜಮೀನಿನ ಭಾಗಗಳು ಮತ್ತೊಂದು ತಾಲ್ಲೂಕಿನಲ್ಲಿದ್ದರೆ ಆ ಬಗೆಗಿನ ಘೋಷಣೆಗಳನ್ನು ವಿಲೇವಾರಿ ಮಾಡಲು ತಾಲ್ಲೂಕಿನ ನ್ಯಾಯಾಧಿಕರಣಕ್ಕೆ ಸಾಧ್ಯತೆ ಮಾಡಿಕೊಡುವುದೇ 67ನೇ ಪ್ರಕರಣದ ತಿದ್ದುಪಡಿಯ ಉದ್ದೇಶ.

77ನೇ ಪ್ರಕರಣದ ಮೇರೆಗೆ ಹೆಚ್ಚುವರಿ ಭೂಮಿಯ ಮಂಜೂರಾತಿ ಯಾರಿಗೆ ಆಗಿದೆಯೋ ಅಂಥವರು ಖರೀದಿ ಬೆಲೆಯನ್ನು ಸಂದಾಯ ಮಾಡುವುದಕ್ಕಾಗಿ ಕರ್ನಾಟಕ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕಿನಿಂದ ಸಾಲಗಳನ್ನು ಪಡೆಯಲು ಸಾಧ್ಯವಾಗುವಂತೆ ಮಾಡುವುದೇ 78ನೇ ಪ್ರಕರಣದ ತಿದ್ದುಪಡಿಯ ಉದ್ದೇಶ.

1979ರ ಫೆಬ್ರವರಿ 26 ರಂದು ನೀಡಿದ ತನ್ನ ತೀರ್ಪಿನಲ್ಲಿ ಉಚ್ಚ ನ್ಯಾಯಾಲಯವು ತಳೆದಿರುವ ಅಭಿಪ್ರಾಯದಿಂದಾಗಿ 80ನೇ ಪ್ರಕರಣದಲ್ಲಿ ಹೇಳಿರುವ ವರ್ಗಾವಣೆಗಳನ್ನು ಅಸಿಂಧುಗೊಳಿಸುವುದಕ್ಕಾಗಿ 80ನೇ ಮತ್ತು 83ನೇ ಪ್ರಕರಣಕ್ಕೆ ತಿದ್ದುಪಡಿಯನ್ನು ತರುವುದು ಅವಶ್ಯವಾಗಿದೆ.

ಗೇಣಿಗೆ ನೀಡಿರುವ ಭೂಮಿಗಳಿಗೆ ಸಂಬಂಧಿಸಿದಂತೆ ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆಗಳಿಗೆ ಅನ್ಯೂಇಟಿಯನ್ನು ಸಂದಾಯ ಮಾಡುವುದಕ್ಕಾಗಿ 106ನೇ ಪ್ರಕರಣಕ್ಕೆ ತಿದ್ದುಪಡಿ ತರಲಾಗಿದೆ, 1978ರ ಡಿಸೆಂಬರ್, 31 ರಂದು ಇದ್ದ ಸ್ಥಿತಿಯನ್ನು ಮುಂದುವರೆಸಲಾಗಿದೆ.

ವಿಶ್ವವಿದ್ಯಾನಿಲಯಗಳಿಗೆ ಸಂಯೋಜನೆಗೊಂಡಿರುವ ಸಂಶೋಧನಾ ಸಂಸ್ಥೆಗಳು ಸಂಶೋಧನೆಯ ಉದ್ದೇಶಗಳಿಗಾಗಿ ಭೂಮಿಯನ್ನು ಧಾರಣ ಮಾಡಲು ಸಾಧ್ಯತೆ ಮಾಡಿಕೊಡುವ ಸಲುವಾಗಿ 107ನೇ ಪ್ರಕರಣಕ್ಕೆ ತಿದ್ದುಪಡಿ ತರಲಾಗಿದೆ.

107(1)(V)ನೇ ಪ್ರಕರಣದಲ್ಲಿ ಹೇಳಿರುವ ಅಶ್ವತಳಿ ಸಂವರ್ಧನೆ ಕ್ಷೇತ್ರಗಳಿಗೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ಸಹ ಅವಕಾಶ ಕಲ್ಪಿಸಲಾಗಿದೆ.

ಇತರ ತಿದ್ದುಪಡಿಗಳು ಪ್ರಾಸಂಗಿಕ ಮತ್ತು ಅನುಷಂಗಿಕ.

ಆದ್ದರಿಂದ ಈ ವಿಧೇಯಕ.

(1981ರ ಮಾರ್ಚ್, 3ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ **IV**–2ಎ ಯಲ್ಲಿ, ಪುಟ ಸಂ. 8 ರಲ್ಲಿ ಕ್ರಮ ಸಂಖ್ಯೆ 98ರಲ್ಲಿ ಪ್ರಕಟಿಸಲಾಗಿದೆ)

**XXII**

**1983ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 1.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ 38ನೇ ಪ್ರಕರಣದ ಮೇರೆಗೆ ಕೃಷಿ ಕಾರ್ಮಿಕರು, ತಾವು ವಾಸಿಸುತ್ತಿರುವ ಮನೆಗಳ ಮಾಲೀಕರಾಗಿ ನೋಂದಾಯಿಸಿಕೊಳ್ಳಲು 1969ರ ಡಿಸೆಂಬರ್ 31ರಂದು ಅಥವಾ ಅದಕ್ಕೂ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸಬೇಕಾಗಿತ್ತು. ಈ ಅವಧಿಯನ್ನು ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1981 (1982ರ ಕರ್ನಾಟಕ ಅಧಿನಿಯಮ ಸಂಖ್ಯೆ 3)ರ ಮೂಲಕ 1981ರ ಡಿಸೆಂಬರ್ 31 ರವರೆಗೆ ವಿಸ್ತರಿಸಲಾಗಿತ್ತು. ಈಗ 1982ರ ಅಧಿನಿಯಮ ಸಂಖ್ಯೆ 3ಕ್ಕೆ ರಾಷ್ಟ್ರಪತಿಯವರು 1982ರ ಮಾರ್ಚ್ 1 ರಂದು ಸಮ್ಮತಿಯನ್ನು ಕೊಟ್ಟಿರುವುದರಿಂದಾಗಿ ವಿಸ್ತರಿಸಲಾಗಿದ್ದ ಆ ಅವಧಿಯ ಪ್ರಯೋಜನವನ್ನು ಪಡೆದುಕೊಳ್ಳಲು ಅನೇಕರಿಗೆ ಸಾಧ್ಯವಾಗಲಿಲ್ಲ. ಈ ಸನ್ನಿವೇಶವನ್ನು ಮತ್ತು ಸಾರ್ವಜನಿಕರಿಂದ ಬಂದ ಬೇಡಿಕೆಯನ್ನು ಗಮನದಲ್ಲಿಟ್ಟುಕೊಂಡು 1983ರ ಮಾರ್ಚ್ 31ರ ವರೆಗೆ ಅವಧಿಯನ್ನು ವಿಸ್ತರಿಸಲು ಉದ್ದೇಶಿಸಲಾಗಿದೆ.

ಸುಳ್ಳು ಘೋಷಣೆ, ತಪ್ಪು ಘೋಷಣೆ ಅಥವಾ ಅಪೂರ್ಣ ಘೋಷಣೆ ಮುಂತಾದವುಗಳನ್ನು ದಾಖಲ್ಮಾಡಿ 67ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗಿನ ಆದೇಶವನ್ನು ಪಡೆದಿದ್ದರೆ ಆ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಎರಡು ವರ್ಷಗಳ ಅವಧಿಯೊಳಗೆ ಅಥವಾ 1981ರ ಡಿಸೆಂಬರ್ 31ರ ಒಳಗೆ ಇದರಲ್ಲಿ ಯಾವುದು ನಂತರವೋ ಆ ಅವಧಿಯ ಒಳಗಾಗಿ ನ್ಯಾಯಾಧಿಕರಣವು 122ಎ ಪ್ರಕರಣದ ಮೇರೆಗಿನ ತನ್ನ ಪುನರಾವಲೋಕನ ಅಧಿಕಾರವನ್ನು ಚಲಾಯಿಸಬೇಕಾಗಿತ್ತು.

1983ರ ಮಾರ್ಚ್ 31ರ ವರೆಗೆ ಅವಧಿಯನ್ನು ವಿಸ್ತರಿಸುವುದು ಅವಶ್ಯವೆಂದು ಪರಿಗಣಿಸಲಾಯಿತು. ಅದರಂತೆ ಅಧ್ಯಾದೇಶವನ್ನು ಹೊರಡಿಸಲಾಯಿತು.

ಆ ಅಧ್ಯಾದೇಶದ ಬದಲಿಗೆ ಈ ವಿಧೇಯಕ.

(1982ರ ನವೆಂಬರ್, 24ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-2ಎ ಯಲ್ಲಿ, ಪುಟ ಸಂ. 3ರಲ್ಲಿ ಕ್ರಮ ಸಂಖ್ಯೆ 816ರಲ್ಲಿ ಪ್ರಕಟಿಸಲಾಗಿದೆ.

**XXIII**

**1985ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 35.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮದಲ್ಲಿ ಈಗಿರುವ ಉಪಬಂಧಗಳಿಗನುಸಾರವಾಗಿ, ಮಾಜಿ ಭೂ–ಮಾಲೀಕರಿಗೆ ಪರಿಹಾರವನ್ನು ಭಾಗಶಃ ನಗದಾಗಿ ಮತ್ತು (ಭೂಮಿಗಳ ವಿಸ್ತೀರ್ಣವನ್ನು ಹೆಚ್ಚಿಸಿಕೊಂಡಾಗ) ಭಾಗಶಃ ಬಾಂಡುಗಳಲ್ಲಿ ಮತ್ತು (ಹೆಚ್ಚುವರಿ ಭೂಮಿಗಳಿಗೆ ಸಂಬಂಧಿಸಿದಂತೆ) ಸಂಪೂರ್ಣವಾಗಿ ಬಾಂಡುಗಳ ರೂಪದಲ್ಲಿ ಸಂದಾಯ ಮಾಡಲಾಗುತ್ತಿದೆ. ಬಾಂಡುಗಳು ವರ್ಗಾವಣೆ ಮಾಡಲಾಗದಂತೆ ಮತ್ತು ಹಸ್ತಾಂತರಣ ಮಾಡಲಾಗದಂಥ ಸ್ವರೂಪದವುಗಳಾಗಿರಬೇಕೆಂದು ಅವುಗಳಿಗೆ, ವಾರ್ಷಿಕ ಶೇಕಡಾ $5^1/_2$ ಯಷ್ಟು ಬಡ್ಡಿಯನ್ನು ನೀಡಬೇಕೆಂದು ಮತ್ತು ಅವುಗಳು 20 ವರ್ಷಗಳನ್ನು ಮೀರದ ಅವಧಿಯಲ್ಲಿ ವಾಯಿದೆ ಮುಗಿಯುವಂಥವು ಆಗಿರಬೇಕೆಂದು ಉದ್ದೇಶಿಸಲಾಗಿದೆ.

ಬಾಂಡ್‌ಗಳ ರೂಪದಲ್ಲಿ ಹಣ ಸಂದಾಯ ಮಾಡುವುದು ಅದರ ಸ್ವೀಕರ್ತರಿಗೆ ಬಹಳಷ್ಟು ಅನಾನುಕೂಲ ಆಗುತ್ತದೆ ಎಂದು ಬಹಳಷ್ಟು ಮನವಿಗಳು ಬಂದಿವೆ. ಈ ಸಂಗತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು, ಈಗ ಬಾಂಡುಗಳ ಬದಲಾಗಿ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಹಣ ಸಂದಾಯ ಮಾಡಲು ಉದ್ದೇಶಿಸಲಾಗಿದೆ. ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಹಣ ಸಂದಾಯ ಮಾಡುವುದರಿಂದ ಅವುಗಳ ಸ್ವೀಕರ್ತರಾದ ಮಾಜಿ ಭೂ–ಮಾಲೀಕರಿಗೆ ತೃಪ್ತಿಯಾಗುವುದಾಗಿ ನಿರೀಕ್ಷಿಸಲಾಗಿದೆ.

ಈ ಮುಂಚೆಯೇ ಮೋಸ, ತಪ್ಪು ನಿರೂಪಣೆ, ಮುಂತಾದವುಗಳಿಂದ ಯಾವ ಯಾವ ಪ್ರಕರಣಗಳಲ್ಲಿ ಹೆಚ್ಚುವರಿ ಭೂಮಿಗಳ ನಿರ್ಧರಣೆ ಆಗಿದೆಯೋ ಅಂಥ ಪ್ರಕರಣವನ್ನು ಪುನರಾವಲೋಕನ ಮಾಡುವುದಕ್ಕಾಗಿ 1961 ರ ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮದ 122ಎ ಪ್ರಕರಣವು ಅವಕಾಶ ಕಲ್ಪಿಸಿದೆ. ಅಂಥ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಎರಡು ವರ್ಷಗಳ ಒಳಗಾಗಿ ಅಥವಾ 1981ರ ಡಿಸೆಂಬರ್ 31ರ ಒಳಗಾಗಿ, ಇದರಲ್ಲಿ ಯಾವುದು ನಂತರದ್ದೋ ಆವರೆಗೆ ಕಾಲಮಿತಿಯನ್ನು ನಿಗದಿಪಡಿಸಲಾಗಿತ್ತು. ಆದರೆ 1981ರ ಡಿಸೆಂಬರ್ 31ರ ರವರೆಗೆ ಕಾಲಮಿತಿಯನ್ನು ವಿಸ್ತರಿಸಿದ, 1982ರ ಅಧಿನಿಯಮ ಸಂಖ್ಯೆ 3ಕ್ಕೆ 1982ರ ಮಾರ್ಚ್ 1ರ ರಂದು ಎಂದರೆ, ನಿಗದಿಪಡಿಸಿದ ಕಾಲ ಮಿತಿಯು ಕೊನೆಗೊಂಡಾದ ಮೇಲೆ ಭಾರತದ ರಾಷ್ಟ್ರಪತಿಯವರು ಅದಕ್ಕೆ ಸಮ್ಮತಿಯನ್ನು ಕೊಟ್ಟಿದ್ದರಿಂದ, ಉದ್ದೇಶ ಈಡೇರಲಿಲ್ಲ.

1982ರ ಜನವರಿ 22 ರಂದು ಮತ್ತು 23 ರಂದು ಜರುಗಿದ ಡಿವಿಜನಲ್ ಕಮಿಶನರ್‌ಗಳ, ಜಿಲ್ಲಾಧಿಕಾರಿಗಳ ಮತ್ತು ವಿಶೇಷ ಜಿಲ್ಲಾಧಿಕಾರಿಗಳ ರಾಜ್ಯಮಟ್ಟದ ಸಮಾವೇಶದಲ್ಲಿ ಕಾಲಮಿತಿಯನ್ನು ವಿಸ್ತರಿಸಲು ತೀರ್ಮಾನ ತೆಗೆದುಕೊಳ್ಳಲಾಗಿತ್ತು. ಅದರಂತೆ, ಸರ್ಕಾರವು 1983ರ ಅಧಿನಿಯಮ ಸಂಖ್ಯೆ 3ರ ಮೂಲಕ ಕಾಲಮಿತಿಯನ್ನು 1983ರ ಮಾರ್ಚ್ 31ರ ರವರೆಗೆ ವಿಸ್ತರಿಸುವ ಸಲುವಾಗಿ 122ಎ ಪ್ರಕರಣಕ್ಕೆ ಮತ್ತಷ್ಟು ತಿದ್ದುಪಡಿ ಮಾಡಿದೆ.

ಹೆಚ್ಚುವರಿ ಭೂಮಿಗಳಿಗೆ ಸಂಬಂಧಿಸಿದಂತೆ ಪುನರಾವಲೋಕನ ಆಗಬೇಕಾದ ಪ್ರಕರಣಗಳು ಈಗಲು ಸಾಕಷ್ಟು ಸಂಖ್ಯೆಯಲ್ಲಿರುವುದರಿಂದ ಕರ್ನಾಟಕ ಭೂ-ಸುಧಾರಣೆಗಳ ಅಧಿನಿಯಮ, 1961ರ 122ಎ ಪ್ರಕರಣವನ್ನು ತಿದ್ದುಪಡಿ ಮಾಡಿ, 1984ರ ಜೂನ್ 30ರ ರವರೆಗೆ ಮತ್ತೊಂದು ಅವಧಿಗೆ ಕಾಲಮಿತಿಯನ್ನು ವಿಸ್ತರಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1984ರ ಫೆಬ್ರವರಿ, 9ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-2ಎ ಯಲ್ಲಿ, ಪುಟ ಸಂ. 45ರಲ್ಲಿ ಕ್ರಮ ಸಂಖ್ಯೆ 111 ರಲ್ಲಿ ಪ್ರಕಟಿಸಲಾಗಿದೆ)

## XXIV

**1986ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 19.–** 1961ರ ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮದಲ್ಲಿ, ಭೂ ಸುಧಾರಣೆಗಳ ನ್ಯಾಯಾಧಿಕರಣವು ಹೊರಡಿಸಿದ ಆದೇಶದ ವಿರುದ್ಧ ಅಪೀಲನ್ನು ಸಲ್ಲಿಸುವುದಕ್ಕಾಗಿ ಅವಕಾಶ ಕಲ್ಪಿಸಿರಲಿಲ್ಲ.

ಕರ್ನಾಟಕ ಉಚ್ಚ ನ್ಯಾಯಲಯವು ರಿಟ್ ಅರ್ಜಿ ಸಂಖ್ಯೆ. 28441/1981ರಲ್ಲಿ, ನ್ಯಾಯಾಧಿಕರಣದಿಂದ ಪ್ರಕರಣಗಳ ವಿಲೇವಾರಿಯು ತೃಪ್ತಿಕರವಾಗಿ ಆಗುತ್ತಿಲ್ಲ ಎಂದು ಮತ್ತು ವಿವಾದಗಳನ್ನು ಸರಿಯಾಗಿ ನ್ಯಾಯ ನಿರ್ಣಯ ಮಾಡುವುದಕ್ಕೆ ಅನುಕೂಲ ಮಾಡಿಕೊಡುವ ಸಲುವಾಗಿ ಅಪೀಲನ್ನು ಸಲ್ಲಿಸುವುದಕ್ಕೆ ಅಧಿನಿಯಮದಲ್ಲಿ ಅವಕಾಶ ಕಲ್ಪಿಸುವುದು ಅಪೇಕ್ಷಣೀಯ ಎಂದು ಅಭಿಪ್ರಾಯಪಟ್ಟಿದೆ.

ಆದುದರಿಂದ, ಭೂ ಸುಧಾರಣೆಗಳ ನ್ಯಾಯಾಧಿರಣದ ತೀರ್ಪಿನ ವಿರುದ್ಧ ಅಪೀಲು ಸಲ್ಲಿಸುವುದು ಸಾಧ್ಯವಾಗುವಂತೆ ಮಾಡಲು ಅಪೀಲು ಪ್ರಾಧಿಕಾರದ ರಚನೆಗೆ ಅವಕಾಶ ಕಲ್ಪಿಸಲು ಉದ್ದೇಶಿಸಲಾಗಿದೆ.

10 ಎಕರೆಗಳಿಗೆ ಸಮನಾದ ಅಥವಾ ಅದಕ್ಕಿಂತ ಕಡಿಮೆ ಇರುವ 'ಡಿ' ವರ್ಗದ ಭೂಮಿಯ, ಅಧಿಭೋಗದಾರನೆಂದು ನೋಂದಾಯಿತನಾದ ವ್ಯಕ್ತಿಯು 1984ರ ಅಕ್ಟೋಬರ್ 17 ರಂದು ಅಥವಾ ಆ ತರುವಾಯ ಸಂದಾಯ ಮಾಡಬೇಕಾದ ಪ್ರೀಮಿಯಂ ಕಂತನ್ನು ಮನ್ನಾ ಮಾಡಲು ಸಹ ಉದ್ದೇಶಿಸಲಾಗಿದೆ.

1985ರ ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧ್ಯಾದೇಶವನ್ನು (1985ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 18) ಸದರಿ ಉದ್ದೇಶಕ್ಕಾಗಿ ಹೊರಡಿಸಲಾಗಿತ್ತು.

ಆ ಅಧ್ಯಾದೇಶದ ಬದಲಿಗೆ ಈ ವಿಧೇಯಕ.

ಮೈಸೂರು (ವೈಯಕ್ತಿಕ ಮತ್ತು ಸಂಕೀರ್ಣ) ಇನಾಮುಗಳ ರದ್ದಿಯಾತಿ ಅಧಿನಿಯಮ, 1954, ಮೈಸೂರು (ಧಾರ್ಮಿಕ ಮತ್ತು ಧರ್ಮಾರ್ಥ) ಇನಾಮುಗಳ ರದ್ದಿಯಾತಿ ಅಧಿನಿಯಮ, 1955, ಕರ್ನಾಟಕ (ಸಂಡೂರು ಪ್ರದೇಶಗಳ) ಇನಾಮುಗಳ ರದ್ದಿಯಾತಿ ಅಧಿನಿಯಮ, 1976 ಮತ್ತು ಕೆಲವು ಇನಾಮುಗಳ ರದ್ದಿಯಾತಿ ಅಧಿನಿಯಮ, 1977ರ ಮೇರೆಗೆ ಭೂ ಸುಧಾರಣೆಗಳ ನ್ಯಾಯಾಧಿಕರಣವು ತೀರ್ಮಾನಿಸಿರುವ ಮೊಕದ್ದಮೆಗೆ ಅಪೀಲು ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯನ್ನು ವಿಸ್ತರಿಸುವ ಅವಕಾಶವನ್ನು ಸಹ ಇಲ್ಲಿ ಬಳಸಿಕೊಳ್ಳಲಾಗಿದೆ.

(1986ರ ಫೆಬ್ರವರಿ, 21ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-2ಎ ಯಲ್ಲಿ, ಪುಟ ಸಂ. 11ರಲ್ಲಿ, ಕ್ರಮಸಂಖ್ಯೆ 135 ರಲ್ಲಿ ಪ್ರಕಟಿಸಲಾಗಿದೆ)

## XXV

**1990ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 18.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ನ್ನು 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ತಿದ್ದುಪಡಿ ಮಾಡಿದ ತರುವಾಯ ಗೇಣಿದಾರಿಕೆಗೆ ಸಂಬಂಧಿಸಿದ ವ್ಯಾಜ್ಯಗಳು ಆದಷ್ಟು ಬೇಗನೇ ವಿಲೇವಾರಿಯಾಗುತ್ತವೆ ಎಂದು ನಿರೀಕ್ಷಿಸಲಾಗಿತ್ತು.

ಆದಾಗ್ಯೂ, ಈ ಅಧಿನಿಯಮವನ್ನು, 1986ರ ಅಧಿನಿಯಮ ಸಂಖ್ಯೆ 19ರ ಮೂಲಕ ಪುನಃ ತಿದ್ದುಪಡಿ ಮಾಡಲಾಗಿತ್ತು ಮತ್ತು ನ್ಯಾಯಾಂಗ ಇಲಾಖೆಯಿಂದ ಸಿವಿಲ್ ನ್ಯಾಯಾಧೀಶರಾಗಿರುವ ಒಬ್ಬರು ಮತ್ತು ಕಂದಾಯ ಇಲಾಖೆಯಿಂದ ಜಿಲ್ಲಾಧಿಕಾರಿ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಮತ್ತೊಬ್ಬರು ಹೀಗೆ ಈ ಇಬ್ಬರು ಸರ್ಕಾರಿ ಸದಸ್ಯರಿರುವ ಭೂ ಸುಧಾರಣೆಗಳ ಅಪೀಲು ಪ್ರಾಧಿಕಾರಕ್ಕೆ ಅಪೀಲು ಸಲ್ಲಿಸುವುದಕ್ಕೆ ಅವಕಾಶ ಕಲ್ಪಿಸಲಾಗಿತ್ತು.

1986ರ ತಿದ್ದುಪಡಿ ಅಧಿನಿಯಮ ಸಂಖ್ಯೆ 19ಕ್ಕೆ ಮುಂಚೆ ಭೂ ನ್ಯಾಯಾಧಿಕರಣಗಳ ಆದೇಶಗಳು ಅಂತಿಮವಾದವು ಆಗಿದ್ದವು ಮತ್ತು ಉಚ್ಚ ನ್ಯಾಯಾಲಯಕ್ಕೆ ಇರುವ ರಿಟ್ ಅಧಿಕಾರ ವ್ಯಾಪ್ತಿಯ ಪ್ರಕಾರವೇ ಉಚ್ಚನ್ಯಾಯಾಲಯದಲ್ಲಿ ಮಾತ್ರ ಅವುಗಳನ್ನು ಪ್ರಶ್ನಿಸಬಹುದಾಗಿತ್ತು.

ಆದಾಗ್ಯೂ, ಅಪೀಲು ಪ್ರಾಧಿಕಾರಗಳ ರಚನೆಯಿಂದ ಇಚ್ಛಿತ ಫಲಿತಾಂಶ ದೊರೆಯುತ್ತಿಲ್ಲವೆಂದು ಹಿಂದಿನ ಅನುಭವದಿಂದ ಕಂಡುಬಂದಿದೆ. ಈ ಪದ್ಧತಿಯು ಸಹ ಬಹುತೇಕ ಪ್ರಕರಣಗಳಲ್ಲಿ ಪ್ರಯೋಜನಕಾರಿಯಾದುದು ಎಂಬುದು ರುಜುವಾತಾಗಿರುವುದಿಲ್ಲ.

ಆದುದರಿಂದ, ಈ ಎಲ್ಲ ಸಂಗತಿಗಳನ್ನು ಪರಿಗಣನೆಗೆ ತೆಗೆದುಕೊಂಡ ತರುವಾಯ, ಸರ್ಕಾರವು ಭೂ ಸುಧಾರಣೆಗಳ ಅಪೀಲು ಪ್ರಾಧಿಕಾರಗಳನ್ನು ರದ್ದು ಮಾಡಲು ಮತ್ತು ನ್ಯಾಯಾಧಿಕರಣದ ತೀರ್ಮಾನವನ್ನು ಅಂತಿಮವಾದುದನ್ನಾಗಿಸಲು ನಿರ್ಧರಿಸಿದೆ.

ಆದ್ದರಿಂದ ಈ ವಿಧೇಯಕ.

(1990ರ ಜೂನ್, 28ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV-2ಎ ಯಲ್ಲಿ, ಪುಟ ಸಂ. 7 ರಲ್ಲಿ, ಕ್ರಮ ಸಂಖ್ಯೆ 420ರಲ್ಲಿ ಪ್ರಕಟಿಸಲಾಗಿದೆ)

XXVI

**1991ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ. 1.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ಕ್ಕೆ ತಿದ್ದುಪಡಿ ಕೋರಿ ಸಲ್ಲಿಸಿರುವ ಹಲವಾರು ಮನವಿಗಳನ್ನು ಸರ್ಕಾರವು ಪರಿಗಣಿಸಿ, ಸದರಿ ಅಧಿನಿಯಮದ ಕೆಲವು ಉಪಬಂಧಗಳನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಭಾವಿಸಿದೆ.

ಈ ವಿಧೇಯಕದ ಪ್ರಮುಖ ವೈಶಿಷ್ಟಗಳು ಈ ಮುಂದಿನಂತಿವೆ:–

(1) ಸೇವೆಯಲ್ಲಿರುವಾಗಲೇ ಸೈನಿಕನು ಮೃತಪಟ್ಟಾಗ, ಸೈನಿಕನ ಅವಲಂಬಿತರು ಭೂಮಿಯನ್ನು ಪುನಃ ವಶಕ್ಕೆ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

(2) ಸೈನಿಕರಿಗೆ ಸಂದಾಯವಾಗಬೇಕಾದ ಗೇಣಿಯನ್ನು ಹೆಚ್ಚಿಸಲಾಗಿದೆ.

(3) 10,000ರೂಪಾಯಿಗಳವರೆಗೆ ಆದಾಯವಿರುವ ವ್ಯಕ್ತಿಯನ್ನು "ಸಣ್ಣ ಹಿಡುವಳಿದಾರ" ಪದಾವಳಿಯ ಅರ್ಥವಿವರಣೆಗೆ ಸೇರಿಸಲು ಉದ್ದೇಶಿಸಲಾಗಿದೆ.

(4) "ಕೋಕಾ"ವನ್ನು ಪ್ಲಾಂಟೇಷನ್ ಬೆಳೆಗಳ ಅರ್ಥವಿವರಣೆಯಿಂದ ಬಿಟ್ಟುಬಿಡಲಾಗಿದೆ.

(5) 65ವರ್ಷ ವಯಸ್ಸಾದ ವ್ಯಕ್ತಿಗಳನ್ನು ಇಡಿಗಂಟಿನಲ್ಲಿ ಪರಿಹಾರವನ್ನು ಪಡೆಯಲು ಹಕ್ಕುಳ್ಳವರನ್ನಾಗಿ ಮಾಡಲಾಗಿದೆ.

(6) ಯಾವ ವ್ಯಕ್ತಿಯು 10 ಎಕರೆಗಳಿಗಿಂತ ಹೆಚ್ಚಿಲ್ಲದ "ಡಿ" ವರ್ಗದ ಭೂಮಿಯ ಹಿಡುವಳಿಯನ್ನು ಹೊಂದಿರುವ ಅದಿಭೋಗದಾರನೆಂದು ನೋಂದಾಯಿಸಿಕೊಂಡಿರುವನೋ ಆ ವ್ಯಕ್ತಿಗೆ, ಬಾಕಿ ಇರುವ ಮತ್ತು ಸಂದಾಯ ಮಾಡದೆ ಉಳಿದುಕೊಂಡಿರುವ ಕಂತುಗಳ ಪ್ರೀಮಿಯಂ ಅನ್ನು ಸಂದಾಯ ಮಾಡದಂತೆ ವಿನಾಯಿತಿ ನೀಡಲು ಉದ್ದೇಶಿಸಲಾಗಿದೆ.

(7) ಕೃಷಿ ಅಲ್ಲದ ಇತರೆ ಮೂಲಗಳಿಂದ ಪ್ರಾಪ್ತವಾಗುವ ಆದಾಯದ ಮೇಲಿನ 12,000/–ರೂಪಾಯಿಗಳ ಮಿತಿಯನ್ನು, ಅಂಥ ಆದಾಯವನ್ನು ಹೊಂದಿರುವ ವ್ಯಕ್ತಿಗಳು ಕೃಷಿ ಭೂಮಿಯನ್ನು ಆರ್ಜಿಸಲು ಅರ್ಹರನ್ನಾಗಿ ಮಾಡುವ ಸಲುವಾಗಿ 50,000/–ರೂಪಾಯಿಗಳಿಗೆ ಹೆಚ್ಚಿಸಲು ಉದ್ದೇಶಿಸಲಾಗಿದೆ.

(8) ಅಪೀಲು ಪ್ರಾಧಿಕಾರಗಳನ್ನು ರದ್ದುಮಾಡಿದ ಪರಿಣಾಮವಾಗಿ ಉಚ್ಚ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸುವುದಕ್ಕಾಗಿ ನಿಗದಿಪಡಿಸಿದ ಅವಧಿಯನ್ನು 90 ದಿವಸಗಳಿಂದ 120 ದಿವಸಗಳಿಗೆ ವಿಸ್ತರಿಸಲಾಗಿದೆ.

ಕೆಲವು ಪ್ರಾಸಂಗಿಕ ಮತ್ತು ಆನುಷಂಗಿಕ ತಿದ್ದುಪಡಿಗಳನ್ನು ಮಾಡಲು ಸಹ ಈ ಅವಕಾಶವನ್ನು ಬಳಸಿಕೊಳ್ಳಲಾಗಿದೆ.

ಆದ್ದರಿಂದ ಈ ವಿಧೇಯಕ.

(1990ರ ವಿಧಾನಸಭೆ ವಿಧೇಯಕ ಸಂಖ್ಯೆ. 28 ರಿಂದ ಪಡೆಯಲಾಗಿದೆ.)

XXVII

**1991ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ. 31.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ 79ಎ ಪ್ರಕರಣದ (1)ನೇ ಉಪ ಪ್ರಕರಣವನ್ನು, ಭೂ ಸ್ವಾಧೀನಕ್ಕೆ ಸಂಬಂಧಪಟ್ಟಂತೆ ಇರುವ ಆದಾಯದ ಮಿತಿಯನ್ನು ಐವತ್ತು ಸಾವಿರ ರೂಪಾಯಿಗಳಿಗೆ ಹೆಚ್ಚಿಸುವ ಸಲುವಾಗಿ 1991ರ ಕರ್ನಾಟಕ ಅಧಿನಿಯಮ ಸಂಖ್ಯೆ 1ರ ಮೂಲಕ ತಿದ್ದುಪಡಿ ಮಾಡಲಾಗಿತ್ತು (2)ನೇ ಉಪ ಪ್ರಕರಣಕ್ಕೆ ಸಹ ಆನುಷಂಗಿಕ ತಿದ್ದುಪಡಿಯನ್ನು ತರುವ ಅವಶ್ಯಕತೆ ಇದೆ.

ಸದರಿ ಅಧಿನಿಯಮದ 79ಎ, 79ಬಿ ಮತ್ತು 80ನೇ ಪ್ರಕರಣಗಳು ಕರ್ನಾಟಕ ಗೃಹ ಮಂಡಳಿಗೆ ಮತ್ತು ಕೆಲವು ಇತರ ಶಾಸನಬದ್ಧ ಪ್ರಾಧಿಕಾರಗಳಿಗೆ ಅನ್ವಯವಾಗದಂತೆ ವಿನಾಯಿತಿ ನೀಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಈ ಉದ್ದೇಶಕ್ಕಾಗಿ ಒಂದು ಅಧ್ಯಾದೇಶವನ್ನು ಹೊರಡಿಸಲಾಗಿತ್ತು.

ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧ್ಯಾದೇಶ, 1991ರ (1991ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 7ರ) ಬದಲಿಗೆ ಈ ವಿಧೇಯಕವನ್ನು ತರಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1991ರ ಆಗಸ್ಟ್, 28ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–2ಎ ಯಲ್ಲಿ, ಪುಟ ಸಂ. 175 ರಲ್ಲಿ, ಕ್ರಮ ಸಂಖ್ಯೆ 568 ರಲ್ಲಿ ಪ್ರಕಟಿಸಲಾಗಿದೆ)

XXVIII

**1992ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 9.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ 77ನೇ ಪ್ರಕರಣದ ಮೇರೆಗೆ ಹೆಚ್ಚುವರಿ ಭೂಮಿಯನ್ನು, ಅವುಗಳಲ್ಲಿ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ವ್ಯಕ್ತಿಗಳಿಗೆ ಶೇಕಡಾ ಐವತ್ತರಷ್ಟು ಭೂಮಿಯನ್ನು ಮೀಸಲಿಟ್ಟು ಮಂಜೂರಾತಿ ಮಾಡುವುದಕ್ಕೆ ಒಳಪಟ್ಟು ವಿಲೆವಾರಿ ಮಾಡಬೇಕಾಗಿತ್ತು. ಸದರಿ ಪ್ರವರ್ಗದ ವ್ಯಕ್ತಿಗಳಿಗೆ ಶೇಕಡಾ ಐವತ್ತರಷ್ಟು ಮೀಸಲಾತಿ ಸಾಕಾಗುವುದಿಲ್ಲವೆಂದು ಪರಿಗಣಿಸಲಾಗಿದೆ ಆದ್ದರಿಂದಾಗಿ, ಮೀಸಲಾತಿಯ ಶೇಕಡಾ ಪ್ರಮಾಣವನ್ನು ಶೇಕಡಾ ಎಪ್ಪತ್ತೈದಕ್ಕೆ ಹೆಚ್ಚಿಸಲು ಉದ್ದೇಶಿಸಲಾಗಿದೆ.

ಕೈಗಾರಿಕಾ ಅಭಿವೃದ್ಧಿಗೆ ಉತ್ತೇಜನ ನೀಡಲು ಮತ್ತು ಕೃಷಿಯೇತರ ಉದ್ದೇಶಗಳಿಗಾಗಿ ಶೈಕ್ಷಣಿಕ ಸಂಸ್ಥೆಗಳು ಭೂಮಿಯನ್ನು ಹೊಂದಲು ಸಾಧ್ಯವಾಗುವಂತೆ ಮಾಡುವ ಸಲುವಾಗಿ, 80ನೇ ಪ್ರಕರಣದ ಉಪಬಂಧಗಳು ಮಾತ್ರವೇ ಭೂಮಿಗೆ ಅನ್ವಯವಾಗದಂತೆ ವಿನಾಯಿತಿ ನೀಡಲು ಸದರಿ ಅಧಿನಿಯಮದ 109ನೇ ಪ್ರಕರಣವು ಸರ್ಕಾರಕ್ಕೆ ಅಧಿಕಾರವನ್ನು ನೀಡಿರುವುದರಿಂದ 79ಎ ಅಥವಾ 79ಬಿ ಪ್ರಕರಣಗಳ ಉಪಬಂಧಗಳು ಸಹ ಯಾವುದೇ ಭೂಮಿಗೆ ಅನ್ವಯವಾಗದಂತೆ ವಿನಾಯಿತಿ ನೀಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ನ್ಯಾಯಾಧಿಕರಣವು 67ನೇ ಪ್ರಕರಣದ ಮೇರೆಗೆ ಹೊರಡಿಸಿದ ತನ್ನ ಆದೇಶವನ್ನು ಅದರಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗಾಗಿ ಕೆಲವು ಸಂದರ್ಭಗಳಲ್ಲಿ 122ಎ ಪ್ರಕರಣದ ಮೇರೆಗೆ ಪುನರಾವಲೋಕನ ಮಾಡಬಹುದು. ನ್ಯಾಯದ ಹಿತದೃಷ್ಟಿಯಿಂದ ಸದರಿ ಅವಧಿಯನ್ನು 1995ರ ಡಿಸೆಂಬರ್ 31ರವರೆಗೆ ವಿಸ್ತರಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1992ರ ಮಾರ್ಚ್, 24ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–2ಎ ಯಲ್ಲಿ, ಪುಟ ಸಂ. 430 ರಲ್ಲಿ, ಕ್ರಮ ಸಂಖ್ಯೆ 169ರಲ್ಲಿ ಪ್ರಕಟಿಸಲಾಗಿದೆ.)

XXIX

**1995ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ. 31.–** ಕೆಲವು ಉದ್ದೇಶಗಳಿಗಾಗಿ ಕೃಷಿ ಭೂಮಿಯನ್ನು ಆರ್ಜಿಸವುದರ ಮೇಲೆ ವಿಧಿಸಿರುವ ನಿರ್ಬಂಧವು ಆರ್ಥಿಕ ಕ್ಷೇತ್ರದ ಕೆಲವು ವಲಯಗಳಲ್ಲಿ ಅದರಲ್ಲೂ ಮುಖ್ಯವಾಗಿ ಕೃಷಿ ಕೈಗಾರಿಕಾ ಸಂವರ್ಧನೆಗೆ ರಾಜ್ಯಕ್ಕೆ ಎಲ್ಲೆಲ್ಲಿ ಗಣನೀಯ ಅವಕಾಶವಿದೆಯೋ ಅಲ್ಲೆಲ್ಲ ಅಭಿವೃದ್ಧಿಯ ಸಾಧನೆಯ ಹಾದಿಯಲ್ಲಿ ತೊಡಕಾಗಿರುವುದರಿಂದ ರಾಜ್ಯದಲ್ಲಿ ಭೂಸುಧಾರಣೆಗಳ ಅಧಿನಿಯಮದ ಕಾರ್ಯಾಚರಣೆಯಲ್ಲಿ ಕೆಲವು ತೊಂದರೆಗಳು ಕಂಡು ಬಂದಿವೆ. ತ್ವರಿತವಾಗಿ ಅನುಷ್ಠಾನವಾಗಬೇಕಾಗಿರುವ ಕೈಗಾರಿಕೆಗಳು ಮತ್ತು ಇತರ ಆರ್ಥಿಕ ವಲಯಗಳು ತಮಗೆ ಬೇಕಾಗಿರುವ ಭೂಮಿಗಳನ್ನು ಪಡೆದುಕೊಳ್ಳಲು ಪರೋಕ್ಷ ವಿಧಾನಗಳಿಗೆ ಮೊರೆ ಹೋಗುತ್ತಿರುವುದು ಕಂಡು ಬಂದಿದ್ದು, ಇದು ಹಲವು ಸಂದರ್ಭಗಳಲ್ಲಿ ಭೂ ಸುಧಾರಣೆಗಳ ಕಾನೂನಿನ ನಿಜವಾದ ಉದ್ದೇಶವನ್ನು ವಿಫಲಗೊಳಿಸುವ ಪ್ರವೃತ್ತಿಯದಾಗಿದೆ. ದೇಶದಲ್ಲಿ ಆರ್ಥಿಕ ಉದಾರೀಕರಣದ ಹೊಸ ಅಲೆಯು, ಎದ್ದಿರುವುದರಿಂದ ಜಲಕೃಷಿ, ಪುಷ್ಪೋದ್ಯಮ, ತೋಟಗಾರಿಕೆ ಆಧಾರಿತ ಕೈಗಾರಿಕೆಗಳು ಅವುಗಳ ಸ್ಥಾಪನೆಗೆ ಮತ್ತು ವಿಸ್ತರಣೆಗೆ ಅಗತ್ಯವಿರುವ ಭೂಮಿಗಳನ್ನು ಪಡೆಯಲು ಮತ್ತು ರಾಜ್ಯದಲ್ಲಿ ಹೊರಗಿನಿಂದ ಬಂಡವಾಳವನ್ನು ಆಕರ್ಷಿಸುವುದಕ್ಕೆ ಹೇರಳ ಅವಕಾಶಗಳು ಇರುವಂಥ ವಸತಿ ಉದ್ಯಮವು ಸಹ ಅಗತ್ಯವಿರುವ ಭೂಮಿಗಳನ್ನು ಪಡೆಯಲು ಸಾಧ್ಯವಾಗುವಂತೆ ಮಾಡುವುದು ಅವಶ್ಯಕವೆಂದು ಭಾವಿಸಲಾಗಿದೆ.

ಸರ್ಕಾರದ ನಿಯಂತ್ರಣ ಅಗತ್ಯವೆಂದು ಸತತವಾಗಿ ಬರುತ್ತಿರುವ ಬೇಡಿಕೆಗೆ ಅವಕಾಶ ಮಾಡಿಕೊಟ್ಟಿರುವ ಈ ವಿಷಯಗಳ ಬಗ್ಗೆ ವ್ಯವಹರಿಸುವ ದೃಷ್ಟಿಯಿಂದ ಮತ್ತು ರಾಜ್ಯದ ಆರ್ಥಿಕ ಬೆಳವಣಿಗೆಗೆ ಚಾಲನೆ ನೀಡುವ ಮೂಲಕ ರಾಜ್ಯದ ಸಮಗ್ರ ಅಭಿವೃದ್ಧಿಯನ್ನು ಸಾಧಿಸಲು ಹಾಗೂ ಆ ನಿಟ್ಟಿನಲ್ಲಿ ಪ್ರಸ್ತುತ ಕಾನೂನಿನಲ್ಲಿರುವ ಲೋಪವನ್ನು ತೆಗೆದುಹಾಕಲು ಈ ವಿಧೇಯಕದಲ್ಲಿ ಪ್ರಸ್ತಾವಿಸಿದ ತಿದ್ದುಪಡಿಗಳನ್ನು ರೂಪಿಸಲಾಗಿದೆ.

ಕೆಲವು ಇತರ ಆನುಷಂಗಿಕ ಮತ್ತು ಪ್ರಾಸಂಗಿಕ ಬದಲಾವಣೆಗಳನ್ನು ಮಾಡಲು ಸಹ ಈ ಅವಕಾಶವನ್ನು ಬಳಸಿಕೊಳ್ಳಲಾಗಿದೆ.

ಆದ್ದರಿಂದ ಈ ವಿಧೇಯಕ.

(1995ರ ವಿಧಾನಸಭೆ ವಿಧೇಯಕ ಸಂಖ್ಯೆ 31 ರಿಂದ ಇದನ್ನು ಪಡೆಯಲಾಗಿದೆ.)

XXX

**1996ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ. 8.–** ಜಲಕೃಷಿ, ಪುಷ್ಪೋದ್ಯಮ, ತೋಟಗಾರಿಕೆ ಆಧಾರಿತ ಕೈಗಾರಿಕೆಗಳು ಅವುಗಳ ಸ್ಥಾಪನೆಗೆ ಮತ್ತು ವಿಸ್ತರಣೆಗೆ ಅಗತ್ಯವಿರುವ ಭೂಮಿಗಳನ್ನು ಪಡೆಯಲು ಮತ್ತು ಈ ರಾಜ್ಯದಲ್ಲಿ ಹೊರಗಿನಿಂದ ಬಂಡವಾಳವನ್ನು ಆಕರ್ಷಿಸುವುದಕ್ಕೆ ಹೇರಳ ಅವಕಾಶಗಳು ಇರುವಂಥ ವಸತಿ ಉದ್ಯಮವು ಸಹ ಅಗತ್ಯವಿರುವ ಭೂಮಿಗಳನ್ನು ಪಡೆಯಲು ಸಾಧ್ಯವಾಗುವಂತೆ ಮಾಡುವುದಕ್ಕಾಗಿ ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ ಪ್ರಕರಣ 109ನ್ನು ತಿದ್ದುಪಡಿ ಮಾಡಲು 1995ರ ಕರ್ನಾಟಕ ಅಧಿನಿಯಮ ಸಂಖ್ಯೆ 31ನ್ನು ತರಲಾಗಿತ್ತು. 109ನೇ ಪ್ರಕರಣದ (1ಎ) ಉಪ ಪ್ರಕರಣದ ಮೇರೆಗೆ ಭೂಮಿಗೆ ನೀಡುವ ವಿನಾಯತಿಯು ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ ಉಪಬಂಧಗಳಿಗೊಳಪಟ್ಟಿತ್ತೆಂದು ಮತ್ತು ವಿನಾಯಿತಿ ನೀಡುವುದನ್ನು ಸದರಿ ಅಧಿನಿಯಮದ 63, 79ಎ, 79ಬಿ ಅಥವಾ 80ನೇ ಪ್ರಕರಣದಲ್ಲಿ ಹೇಳಿರುವುದರಷ್ಟಕ್ಕೆ ಸೀಮಿತಗೊಳಿಸಲಾಗಿದೆ ಎಂದು ಸ್ಪಷ್ಟೀಕರಣ ನೀಡುವ ದೃಷ್ಟಿಯಿಂದ ಸದರಿ ಉಪ ಪ್ರಕರಣಕ್ಕೆ ತಿದ್ದುಪಡಿ ಮಾಡಿ, 1995ರ ಕರ್ನಾಟಕ ಅಧ್ಯಾದೇಶ ಸಂಖ್ಯೆ. 8ನ್ನು ಹೊರಡಿಸಲಾಗಿತ್ತು. 1995ರ ಅಧ್ಯಾದೇಶ ಸಂಖ್ಯೆ. 8, 1996ರ ಫೆಬ್ರವರಿ 8ಕ್ಕೆ ಅವಧಿ ಮುಗಿಯಲಿದ್ದುದರಿಂದ 1996ರ ಕರ್ನಾಟಕ ಅಧ್ಯಾದೇಶ ಸಂಖ್ಯೆ. 1ನ್ನು ಹೊರಡಿಸಲಾಗಿತ್ತು. ಆ ಅಧ್ಯಾದೇಶದ ಬದಲಿಗೆ ಈ ವಿಧೇಯಕ.

ಆದ್ದರಿಂದ ಈ ವಿಧೇಯಕ.

(1996ರ ಕರ್ನಾಟಕ ವಿಧಾನಸಭೆ ವಿಧೇಯಕ ಸಂಖ್ಯೆ 1 ರಿಂದ ಇದನ್ನು ಪಡೆಯಲಾಗಿದೆ.)

XXXI

**1998ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 23.–** ವ್ಯಕ್ತಿಯು ಈ ಮುಂದಿನ ಷರತ್ತುಗಳನ್ನು ಈಡೇರಿಸಿದರೆ ಎಂದರೆ,–

(i) ಆ ವ್ಯಕ್ತಿಯು, 44ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವಂಥ ಒಂದು ಯೂನಿಟ್‍ನ್ನು ಮೀರದ ಯಾವುದೇ ಭೂಮಿಯ ಸ್ವಾಧೀನತೆಯನ್ನು, 1974ರ ಮಾರ್ಚ್ ಮೊದಲನೇ ದಿವಸಕ್ಕೆ ಮುಂಚೆ ನಿಕಟಪೂರ್ವದಲ್ಲಿ ವಾಸ್ತವವಾಗಿ, ಸ್ವಾಧೀನ ಹೊಂದಿದ್ದರೆ ಅಥವಾ ಅಂಥ ಭೂಮಿಯನ್ನು ಸಾಗುವಳಿ ಮಾಡುತ್ತಿದ್ದರೆ; ಮತ್ತು

(ii) ಆ ವ್ಯಕ್ತಿಯು, 45ನೇ ಅಥವಾ 49ನೇ ಪ್ರಕರಣದ ಮೇರೆಗೆ ಅಂಥ ಭೂಮಿಯ ಅಧಿಭೋಗದಾರನಾಗಿ ನೋಂದಾಯಿಸಲು ಹಕ್ಕುಳ್ಳವನಾಗಿದ್ದರೆ, 48ಎ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಅದರಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗಾಗಿ ಅಂಥ ಭೂಮಿಯ ಸಂಬಂಧವಾಗಿ ಅಧಿಭೋಗದಾರನ ಹಕ್ಕುಗಳ ನೋಂದಣಿಗಾಗಿ ಅರ್ಜಿ ಸಲ್ಲಿಸಲು ವಿಫಲನಾಗಿದ್ದರೆ;

(iii) ಆ ವ್ಯಕ್ತಿಯು, ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1997ರ ಪ್ರಾರಂಭದ ದಿನಾಂಕದಂದು ಅಂಥ ಭೂಮಿಯ ವಾಸ್ತವಿಕ ಸ್ವಾಧೀನತೆಯಲ್ಲಿರುವುದನ್ನು ಮತ್ತು ಸಾಗುವಳಿ ಮಾಡುವುದನ್ನು ಮುಂದುವರೆಸಿದ್ದರೆ

– 44ನೇ ಪ್ರಕರಣದ ಮೇರೆಗೆ ಸರ್ಕಾರದಲ್ಲಿ ನಿಹಿತವಾದ ಭೂಮಿಯನ್ನು ಮಂಜೂರಾತಿಗಾಗಿ ಉಪಬಂಧವನ್ನು ಕಲ್ಪಿಸಲು ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿಧಾನಸಭೆ ವಿಧೇಯಕ ಸಂಖ್ಯೆ 1997ರ 27ರಿಂದ ಇದನ್ನು ಪಡೆಯಲಾಗಿದೆ)

**XXXII**

**1998ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 34.–** ಈ ಮುಂದಿನವುಗಳಿಗೆ ಉಪಬಂಧಗಳನ್ನು ಕಲ್ಪಿಸಲು ಎಂದರೆ,–

(i) ಈ ಅಧಿನಿಯಮದ ಮೇರೆಗೆ ಯಾವ ಭೂಮಿಗೆ ಅಧಿಭೋಗದ ಹಕ್ಕುಗಳನ್ನು ನೀಡಲಾಗಿದೆಯೋ ಆ ಭೂಮಿಯ ವರ್ಗಾವಣೆಗೆ 15 ವರ್ಷಗಳ ಅವಧಿಯನ್ನು 55ನೇ ಪ್ರಕರಣದ ಮೇರೆಗೆ ಪ್ರಮಾಣಪತ್ರವನ್ನು ನೀಡಿದ ದಿನಾಂಕದಿಂದ ಲೆಕ್ಕಹಾಕುವುದರ ಬದಲಾಗಿ 48ಎ ಪ್ರಕರಣದ ಮೇರೆಗೆ ನ್ಯಾಯಾಧೀಕರಣವು ನೀಡಿದ ಅಂತಿಮ ಆದೇಶದ ದಿನಾಂಕದಿಂದ ಲೆಕ್ಕಹಾಕುವುದಕ್ಕಾಗಿ;

(ii) ವಿಶೇಷ ಜಿಲ್ಲಾಧಿಕಾರಿಯು ಮಾತ್ರವಲ್ಲದೆ ರಾಜ್ಯ ಸರ್ಕಾರವು ಅಧಿಕೃತಗೊಳಿಸಿದ ಯಾರೇ ಇತರ ಅಧಿಕಾರಿಯು ಈ ಪ್ರಕರಣದ ಮೇರೆಗೆ ಭೂಮಿಯನ್ನು ಮಂಜೂರು ಮಾಡುವುದಕ್ಕಾಗಿ;

(iii) ಭೂ ಮಂಜೂರಾತಿಯ ಪ್ರಕ್ರಿಯೆಯನ್ನು ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1997ರ ಪ್ರಾರಂಭದ ದಿನಾಂಕದಿಂದ ಒಂದು ವರ್ಷದೊಳಗಾಗಿ ಪೂರ್ಣಗೊಳಿಸುವುದಕ್ಕಾಗಿ;

(iv) ಅಂಥ ವ್ಯಕ್ತಿಯು ಈಗಾಗಲೇ ಹೊಂದಿರುವ ಭೂಮಿಯ ಜೊತೆಗೆ ಯಾವ ಭೂಮಿಯನ್ನು ಮಂಜೂರು ಮಾಡಬೇಕೋ ಆ ಭೂಮಿಯು ಡಿ ದರ್ಜೆಯ 2 ಹೆಕ್ಟೇರುಗಳನ್ನು ಅಥವಾ ಅದಕ್ಕೆ ತತ್ಸಮಾನವಾದ ಭೂಮಿಯನ್ನು ಮೀರತಕ್ಕದ್ದಲ್ಲ ಎಂಬುದಕ್ಕೆ ಮತ್ತು ಕೋಷ್ಠಕದಲ್ಲಿ ನಿರ್ದಿಷ್ಟಪಡಿಸಿದ ಪ್ರದೇಶದ ಎಲ್ಲೆಗಳೊಳಗೆ ಬರುವ ಯಾವುದೇ ಭೂಮಿಯನ್ನು ಮಂಜೂರು ಮಾಡತಕ್ಕದ್ದಲ್ಲ ಎಂಬುದಕ್ಕೆ ಉಪಬಂಧ ಕಲ್ಪಿಸುವುದಕ್ಕಾಗಿ

– ಕರ್ನಾಟಕ ಭೂ ಸುಧಾರಣಾ ಅಧಿನಿಯಮವನ್ನು ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿಧಾನಸಭಾ ವಿಧೇಯಕ ಸಂಖ್ಯೆ 1998 ರ 12 ರಿಂದ ಪಡೆಯಲಾಗಿದೆ)

**XXXIII**

**2001 ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 22.–** ಈ ಕೆಳಕಂಡ ಉಪಬಂಧಗಳನ್ನು ಕಲ್ಪಿಸಲು ಎಂದರೆ,–

(i) ಗೇಣಿದಾರನನ್ನು/ಳನ್ನು, ಅವನ ಅಥವಾ ಅವಳ ಜೀವಂತ ಪತ್ನಿ/ಪತಿ ಸಮೇತ ಜಂಟಿ ಅಧಿಭೋಗದಾರರನ್ನಾಗಿ ನೋಂದಾಯಿಸಲು ಉಪಬಂಧ ಕಲ್ಪಿಸುವುದಕ್ಕಾಗಿ;

(ii) ಅಧಿನಿಯಮದ 77ಎ ಪ್ರಕರಣದ ಮೇರೆಗೆ ಭೂ ಮಂಜೂರಾತಿಗಾಗಿ ಇರುವ ಕಾಲಮಿತಿಯನ್ನು ತೆಗೆದುಹಾಕುವುದಕ್ಕಾಗಿ, ಉಪಬಂಧ ಕಲ್ಪಿಸುವುದಕ್ಕಾಗಿ

– ಕರ್ನಾಟಕ ಭೂ ಸುದಾರಣೆಗಳ ಅಧಿನಿಯಮ, 1961 (1962ರ ಕರ್ನಾಟಕ ಅಧಿನಿಯಮ ಸಂಖ್ಯೆ 1) ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿಧಾನಸಭಾ ವಿಧೇಯಕ ಸಂಖ್ಯೆ 2001ರ 12ರಿಂದ ಇದನ್ನು ಪಡೆಯಲಾಗಿದೆ)

**XXXIV**

**2003 ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 20.–** ಈ ಮುಂದಿನವುಗಳಿಗೆ ಎಂದರೆ,–

(i) ರಸ್ತೆ ಸಾರಿಗೆ ಸಂಸ್ಥೆ ಅಧಿನಿಯಮ, 1950ರ (1950ರ ಕೇಂದ್ರ ಅಧಿನಿಯಮ ಸಂಖ್ಯೆ LXVI) ಮೇರೆಗೆ ರಚಿಸಿದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಹೆಸರಿನಲ್ಲಿ, ಕಂಪನಿಗಳ ಅಧಿನಿಯಮ, 1956ರ ಮೇರೆಗೆ ರಚಿಸಿದ ಕರ್ನಾಟಕ ವಿದ್ಯುಚ್ಛಕ್ತಿ ಪ್ರಸರಣ ನಿಗಮದ ಹೆಸರಿನಲ್ಲಿ ಇರುವ ಕೃಷಿ ಸ್ವತ್ತಿನ ಯಾವುದೇ ಭೂಮಿಯನ್ನು ಅಥವಾ ಅದರಲ್ಲಿರುವ ಹಿತಾಸಕ್ತಿಯನ್ನು ಮಾರಾಟದ, ದಾನದ ಅಥವಾ ಅಡಮಾನದ ಮೂಲಕ ಆರ್ಜಿಸುವುದಕ್ಕಾಗಿ;

(ii) ಯಾವುದೇ ಪ್ರದೇಶದಲ್ಲಿ, 109ನೇ ಪ್ರಕರಣದ ಮೇರೆಗೆ ವಿವರಿಸಬೇಕಾದ ಎಲ್ಲೆಗಳೊಳಗೆ ಇರುವ ಯಾವುದೇ ಭೂಮಿಗೆ ಆ ಪ್ರಕರಣದಲ್ಲಿ ಹೇಳಿರುವಂಥವೇ ನಿರ್ಬಂಧಗಳಿಗೆ ಒಳಪಟ್ಟು ಮತ್ತು ಅದೇ ರೀತಿಯಲ್ಲಿ 63, 79ಎ, 79ಬಿ ಅಥವಾ 80ನೇ ಪ್ರಕರಣಗಳು ಅನ್ವಯವಾಗದಂತೆ 109ನೇ ಪ್ರಕರಣದ ಮೇರೆಗೆ ವಿನಾಯಿತಿಯನ್ನು ಜಿಲ್ಲಾಧಿಕಾರಿಯವರು ಮಂಜೂರು ಮಾಡುವುದಕ್ಕಾಗಿ

– ಉಪಬಂಧ ಕಲ್ಪಿಸುವುದು ಅವಶ್ಯಕ ಎಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿಧಾನಪರಿಷತ್ತು ವಿಧೇಯಕ ಸಂಖ್ಯೆ: 2001ರ 13)

[ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ–IIರ ಲ್ಲಿರುವ ನಮೂದು 18]

**XXXV**

**2003ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 34.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ 77ನೇ ಪ್ರಕರಣದ (1)ನೇ ಉಪ ಪ್ರಕರಣವು,–

(ಎ) ಭೂ ರಹಿತ ವ್ಯಕ್ತಿಗಳ ಯಾರ ಒಟ್ಟು ವಾರ್ಷಿಕ ಆದಾಯವು ನಾಲ್ಕು ಸಾವಿರದ ಎಂಟುನೂರು ರೂಪಾಯಿಗಳನ್ನು ಮೀರುವುದಿಲ್ಲವೋ ಅಂಥ ಭೂ ರಹಿತ ವ್ಯಕ್ತಿಗಳಿಗೆ ಮತ್ತು ಮಾಜಿ ಸೈನಿಕ ಸಿಬ್ಬಂದಿಯ ಯಾರ ವಾರ್ಷಿಕ ಆದಾಯವು ಹನ್ನೆರಡು ಸಾವಿರ ರೂಪಾಯಿಗಳನ್ನು ಮಿರುವುದಿಲ್ಲವೋ ಆ ಮಾಜಿ ಸೈನಿಕ ಸಿಬ್ಬಂದಿಗಳಿಗೆ [(iv) ನೇ ಖಂಡ)];

(ಬಿ) ಅದೇ ಪಂಚಾಯಿತಿ ವ್ಯಾಪ್ತಿಯಲ್ಲಿರುವ ಗ್ರಾಮದಲ್ಲಿ ವಾಸಿಸುತ್ತಿರುವ ಮತ್ತು ಯಾರ ಒಟ್ಟು ವಾರ್ಷಿಕ ಆದಾಯವು ಎರಡು ಸಾವಿರ ರೂಪಾಯಿಗಳನ್ನು ಮೀರುವುದಿಲ್ಲವೋ ಆ ಇತರ ವ್ಯಕ್ತಿಗಳಿಗೆ [(iv) ನೇ ಖಂಡ)]

– ಹೆಚ್ಚುವರಿ ಭೂಮಿಯನ್ನು ಮಂಜೂರು ಮಾಡಲು ಉಪಬಂಧ ಕಲ್ಪಿಸುತ್ತದೆ.

ಅದೇ ಪಂಚಾಯಿತಿ ಪ್ರದೇಶದ ಗ್ರಾಮಗಳಲ್ಲಿ ವಾಸಿಸುತ್ತಿರುವ ಮತ್ತು ಭೂ ರಹಿತ ವ್ಯಕ್ತಿಗಳ ಯಾರ ಒಟ್ಟು ವಾರ್ಷಿಕ ಆದಾಯವು ಇಪ್ಪತ್ತು ಸಾವಿರ ರೂಪಾಯಿಗಳನ್ನು ಮೀರುವುದಿಲ್ಲವೋ ಅಂಥ ಭೂ ರಹಿತ ವ್ಯಕ್ತಿಗಳಿಗೆ ಅಥವಾ ಇತರ ವ್ಯಕ್ತಿಗಳಿಗೆ ಹಾಗೂ ಮಾಜಿ ಸೈನಿಕ ಸಿಬ್ಬಂದಿಯ ಯಾರ ವಾರ್ಷಿಕ ಒಟ್ಟು ಆದಾಯವು ಇಪ್ಪತ್ತೆರಡು ಸಾವಿರ ರೂಪಾಯಿಗಳನ್ನು ಮೀರುವುದಿಲ್ಲವೋ ಅಂಥ ಮಾಜಿ ಸೈನಿಕ ಸಿಬ್ಬಂದಿಗೆ ಭೂಮಿಯನ್ನು ಮಂಜೂರು ಮಾಡಲು ಮತ್ತು ಕಾನೂನನ್ನು ತಿದ್ದುಪಡಿ ಮಾಡಲು ಒಂದೇ ಖಂಡದಲ್ಲಿ ಉಪಬಂಧ ಕಲ್ಪಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿಧಾನಸಭಾ ವಿಧೇಯಕ ಸಂಖ್ಯೆ: 2003ರ 14)

[ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ–III ರಲ್ಲಿರುವ ನಮೂದು 18]

**XXXVI**

**2004ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 18.–** ಅರ್ಧ ಹೆಕ್ಟೇರ್ ವಿಸ್ತೀರ್ಣವನ್ನು ಮೀರದ ಭೂಮಿಗೆ ಸದರಿ ಪ್ರಕರಣದ ಮೇರೆಗೆ ವಿನಾಯಿತಿಯನ್ನು ಮಂಜೂರು ಮಾಡಲು ಜಿಲ್ಲಾಧಿಕಾರಿಗೆ ಅಧಿಕಾರ ನೀಡುವುದಕ್ಕಾಗಿ ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ 109ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

[ವಿಧಾನಪರಿಷತ್ ವಿಧೇಯಕ ಸಂಖ್ಯೆ: 2004ರ 9]

[ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ–III ರಲ್ಲಿರುವ ನಮೂದು 18]

**XXXVII**

**2005ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 7.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ 109ನೇ ಪ್ರಕರಣದ (1ಎ) ಉಪ ಪ್ರಕರಣಕ್ಕೆ ಪರಂತುಕವನ್ನು ಸೇರಿಸುವ ಮೂಲಕ, ಅರ್ಧ ಹೆಕ್ಟೇರ್ ವಿಸ್ತೀರ್ಣವನ್ನು ಮೀರದ ಭೂಮಿಗೆ ವಿನಾಯತಿಯನ್ನು ಮಂಜೂರು ಮಾಡಲು ರಾಜ್ಯ ಸರ್ಕಾರಕ್ಕೆ ಇರುವ ಅಧಿಕಾರಗಳನ್ನು ಚಲಾಯಿಸಲು ಜಿಲ್ಲಾಧಿಕಾರಿಗೆ ಅಧಿಕಾರವನ್ನು ನೀಡಲಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮತ್ತು ಬೆಂಗಳೂರು ನಗರ ಜಿಲ್ಲೆಯೊಳಗಿರುವ ಪ್ರದೇಶಗಳಿಗೆ ಸಂಬಂಧಿಸಿದಂತೆ ಸದರಿ ಅಧಿಕಾರವನ್ನು ರಾಜ್ಯ ಸರ್ಕಾರದಲ್ಲಿಯೇ ಉಳಿಸಿಕೊಳ್ಳುವುದು ಅವಶ್ಯಕವೆಂದು ಈಗ ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

[ವಿಧಾನಸಭಾ ವಿಧೇಯಕ ಸಂಖ್ಯೆ: 2005ರ 3]

[ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ–III ರಲ್ಲಿರುವ ನಮೂದು 18]

**XXXVIII**

**2005ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 7.–** ಜಿಲ್ಲಾಧಿಕಾರಿಯು ಅಥವಾ 77ಎ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಅಧಿಕೃತನಾದ ಅಧಿಕಾರಿಯು ಮಾಡಿದ ಆದೇಶದ ವಿರುದ್ಧ ರೆವಿನ್ಯೂ ಅಪೀಲು ನ್ಯಾಯಾಧಿಕರಣಕ್ಕೆ ಅಪೀಲು ಸಲ್ಲಿಸಲು ಅಧಿನಿಯಮದ 118ನೇ ಪ್ರಕರಣದ (2)ನೇ ಉಪ ಪ್ರಕರಣವನ್ನು ಸೂಕ್ತವಾಗಿ ತಿದ್ದುಪಡಿ ಮಾಡುವ ಮೂಲಕ, ಉಪಬಂಧ ಕಲ್ಪಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

[ವಿಧಾನಸಭಾ ವಿಧೇಯಕ ಸಂಖ್ಯೆ: 2005ರ 8]

**XXXIX**

**2007ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 17.–** ಸರ್ಕಾರದ ಆದೇಶ ಸಂಖ್ಯೆ. ಆರ್‌ಡಿ 9 ಬಿಎಮ್‌ಎಮ್ 2003, ದಿನಾಂಕ 8–9–2005ರಲ್ಲಿ, ಬೆಂಗಳೂರು, ಮೈಸೂರು, ಗುಲ್ಬರ್ಗ ಮತ್ತು ಬೆಳಗಾವಿಗಳಲ್ಲಿ ರೀಜಿನಲ್ ಕಮಿಷನರುಗಳ ಹುದ್ದೆಗಳನ್ನು ಸಹಾಯಕ ಸಿಬ್ಬಂದಿ ಸಹಿತ ಸೃಜಿಸಲಾಗಿದೆ.

ಸಂಬಂಧಪಟ್ಟ ಅಧಿನಿಯಮಗಳಿಗೆ ಅವಶ್ಯಕ ತಿದ್ದುಪಡಿಗಳನ್ನು ಮಾಡಿ ರೀಜಿನಲ್ ಕಮಿಷನರಿಗೆ ಶಾಸನಬದ್ಧ ಅಧಿಕಾರಗಳನ್ನು ನೀಡಬೇಕಾಗಿದೆ.

ವಿಷಯವು ತುರ್ತು ಸ್ವರೂಪದಾದ್ದರಿಂದ ಮತ್ತು ಕರ್ನಾಟಕ ವಿಧಾನಮಂಡಲವು ಅಧಿವೇಶನದಲ್ಲಿ ಇಲ್ಲದಿರುವುದರಿಂದ, ಮೇಲ್ಕಂಡ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಮತ್ತು ಕೆಲವು ಇತರೆ ಕಾನೂನುಗಳು (ತಿದ್ದುಪಡಿ) ಅಧ್ಯಾದೇಶ 2006 (ಕರ್ನಾಟಕ ಅಧ್ಯಾದೇಶ ಸಂಖ್ಯೆ 2006ರ 5) ಅನ್ನು ಹೊರಡಿಸಲಾಗಿತ್ತು.

ಆದ್ದರಿಂದ ಈ ವಿಧೇಯಕ.

[ವಿಧಾನಸಭಾ ವಿಧೇಯಕ ಸಂಖ್ಯೆ: 2007ರ 7]

[ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ–II ರಲ್ಲಿರುವ ನಮೂದು 5 ಮತ್ತು 18]

XL

**2010ರ ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 35.**–ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ(1962ರ ಕರ್ನಾಟಕ ಅಧಿನಿಯಮ 10) 61ನೇ ಪ್ರಕರಣದ (2)ನೇ ಉಪ ಪ್ರಕರಣವು, ಭೂಮಿಯ ಅಭಿವೃದ್ಧಿಗಾಗಿ ಅಥವಾ ಕೃಷಿ ಪದ್ಧತಿಗಳಲ್ಲಿ ಸುಧಾರಣೆ ತರುವ ಸಲುವಾಗಿ ಭೂಮಿಯಲ್ಲಿ ತನಗಿರುವ ಹಿತಾಸಕ್ತಿಯನ್ನು ಅಡಮಾನ ಮಾಡಿ ಅಥವಾ ತನಗಿರುವ ಆ ಹಿತಾಸಕ್ತಿಯ ಮೇಲೆ ಹೊಣೆಯನ್ನು ಸೃಜಿಸಿ ಸಾಲವನ್ನು ಪಡೆಯಲು ಅಧಿಭೋಗದಾರನಿಗೆ ಅವಕಾಶ ಕಲ್ಪಿಸಿದೆ. ತಮ್ಮ ಮಕ್ಕಳ ಉನ್ನತ ವ್ಯಾಸಂಗಕ್ಕಾಗಿ ತಮ್ಮ ಭೂಮಿಗಳನ್ನು ಅಡಮಾನ ಮಾಡುವ ಮೂಲಕ ಸಾಲವನ್ನು ಪಡೆಯಲು ಮಾಲೀಕನಿಗೆ ಸಾಧ್ಯವಾಗುವಂತೆ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

[ವಿಧಾನಸಭಾ ವಿಧೇಯಕ ಸಂಖ್ಯೆ 2010ರ 14 ಕಡತ ಸಂಖ್ಯೆ 39 ಶಾಸನ 2009]

[ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ–II ರಲ್ಲಿರುವ ನಮೂದು 18]

**1962ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 10**

(1962ನೇ ಮಾರ್ಚ್ ಹದಿನೈದನೆಯ ದಿನಾಂಕದಂದು [1][ಕರ್ನಾಟಕ ರಾಜ್ಯಪತ್ರ][1]ದಲ್ಲಿ ಮೊದಲು ಪ್ರಕಟಿತವಾಗಿದೆ)

**[1][ಕರ್ನಾಟಕ][1] ಭೂ ಸುಧಾರಣೆಗಳ ಅಧಿನಿಯಮ, 1961**

(1962ರ ಮಾರ್ಚ್ ಐದನೇ ದಿನಾಂಕದಂದು ರಾಷ್ಟ್ರಪತಿಯವರ ಅನುಮತಿ ಪಡೆದಿದೆ)

(ಕರ್ನಾಟಕ ಅಧಿನಿಯಮಗಳು 1965ರ 14, 1966ರ 38, 1967ರ 1 ಮತ್ತು 5, 1968ರ 11, 1970ರ 6, 1972ರ 4, 1973ರ 2, 1974ರ 1, 26 ಮತ್ತು 31, 1976ರ 18, 27, 44 ಮತ್ತು 67, 1977ರ 12 ಮತ್ತು 23, 1979ರ 1, 1980ರ 2, 1982ರ 3, 1983ರ 1, 1985ರ 35, 1986ರ 19, 1990ರ 18, 1991ರ 1 ಮತ್ತು 31, 1992ರ 9, 1995ರ 31, 1996ರ 8, 1998ರ 23, 34, 2001ರ 22, 2003ರ 20, 2003ರ 34, 2004ರ 18, 2005ರ 7, 2005ರ 17, 2007ರ 17 ಮತ್ತು 2010ರ 35 ರಿಂದ ತಿದ್ದುಪಡಿಯಾಗಿರುವಂತೆ)

**[1][ಕರ್ನಾಟಕ ರಾಜ್ಯ][1]ದಲ್ಲಿ ಭೂ ಸುಧಾರಣೆಗಳಿಗೆ ಸಂಬಂಧಪಟ್ಟಂತೆ ಏಕರೂಪದ ಕಾನೂನನ್ನು ಅಧಿನಿಯಮಿಸುವ ಅಧಿನಿಯಮ.**

[1][ಕರ್ನಾಟಕ ರಾಜ್ಯ][1]ದಲ್ಲಿ ಭೂ ಸಂಬಂಧಗಳಿಗೆ, ಗೇಣಿದಾರರಿಗೆ ಒಡೆತನವನ್ನು ಪ್ರದಾನ ಮಾಡುವುದಕ್ಕೆ, ಭೂ ಹಿಡುವಳಿಯ ಗರಿಷ್ಠ ಮಿತಿಗೆ ಸಂಬಂಧಿಸಿದಂತೆ ಮತ್ತು ಇದರಲ್ಲಿ ಇನ್ನು ಮುಂದೆ ಕಂಡುಬರುವ ಕೆಲವು ಇತರ ವಿಷಯಗಳಿಗೆ ಏಕರೂಪದ ಕಾನೂನನ್ನು ಅಧಿನಿಯಮಿಸುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಹನ್ನೆರಡನೇ ವರ್ಷದಲ್ಲಿ, [1][ಕರ್ನಾಟಕ ರಾಜ್ಯ][1] ವಿಧಾನಮಂಡಲದಿಂದ ಈ ಮುಂದೆ ಹೇಳಿದಂತೆ ಅಧಿನಿಯಮಿಸಲಾಗಿದೆ:–

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

## ಅಧ್ಯಾಯ – I

## ಪ್ರಾರಂಭಿಕ

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು [1][ಕರ್ನಾಟಕ][1] ಭೂಸುಧಾರಣೆಗಳ ಅಧಿನಿಯಮ, 1961 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1]ಕ್ಕೆ ವ್ಯಾಪ್ತವಾಗತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

(3) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಗೊತ್ತುಪಡಿಸಬಹುದಾದಂಥ [1][ದಿನಾಂಕ][1]ದಂದು ಇದು ಜಾರಿಗೆ ಬರತಕ್ಕದ್ದು.

1. ಅಧಿನಿಯಮವು 2.10.1965 ರಿಂದ ಅಧಿಸೂಚನೆಯ ಮೂಲಕ ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವನ್ನು ಈ ಅಧಿನಿಯಮದ ಕೊನೆಯಲ್ಲಿ ಕೊಡಲಾಗಿದೆ.

**2. ಪರಿಭಾಷೆಗಳು.**– (ಎ) ಈ ಅಧಿನಿಯಮದಲ್ಲಿ ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿರದಿದ್ದರೆ,–

[1][(1) 'ಕೃಷಿ'ಯು,–

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(ಎ) ಜಲ ಕೃಷಿಯನ್ನು;][1]

1. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ 20.10.1995 ರಿಂದ ಜಾರಿಗೆ ಬರುವಂತೆ ಖಾಬು (ಎ) ಯನ್ನು ಸೇರಿಸಲಾಗಿದೆ.

[1][(ಎಎ)][1] ತೋಟಗಾರಿಕೆಯನ್ನು;

1. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ 20.10.1995 ರಿಂದ ಜಾರಿಗೆ ಬರುವಂತೆ ಮರು ಸಂಖ್ಯೆ ನೀಡಲಾಗಿದೆ.

(ಬಿ) ಬೆಳೆಗಳನ್ನು, ಹುಲ್ಲನ್ನು ಅಥವಾ ತೋಟದ ಉತ್ಪನ್ನವನ್ನು ಬೆಳೆಸುವುದನ್ನು;

(ಸಿ) ಹೈನುಗಾರಿಕೆಯನ್ನು;

(ಡಿ) ಕೋಳಿಸಾಕಣೆಯನ್ನು;

(ಇ) ಜಾನುವಾರು ಸಂವರ್ಧನೆಯನ್ನು;

(ಎಫ್) ಮೇಯಿಸುವುದನ್ನು

– ಒಳಗೊಳ್ಳುತ್ತದೆ. ಆದರೆ ಮರ ಕಡಿಯುವುದನ್ನು ಮಾತ್ರ ಒಳಗೊಳ್ಳುವುದಿಲ್ಲ;][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) "ಕೃಷಿ ಕಾರ್ಮಿಕ" ಎಂದರೆ ಭೂಮಿಯಲ್ಲಿ ದೈಹಿಕ ದುಡಿಮೆ ಮಾಡುವುದನ್ನೇ ತನ್ನ ಜೀವನೋಪಾಯದ ಪ್ರಧಾನ ಸಾಧನವನ್ನಾಗಿ ಮಾಡಿಕೊಂಡಿರುವ ವ್ಯಕ್ತಿ [1][ಮತ್ತು ಕೃಷಿ ಸಲಕರಣೆಗಳನ್ನು ಸಿದ್ಧಗೊಳಿಸುವುದನ್ನೇ ತನ್ನ ಜೀವನೋಪಾಯದ ಪ್ರಧಾನ ಸಾಧನವನ್ನಾಗಿ ಮಾಡಿಕೊಂಡಿರುವ ಕುಶಲ ಕರ್ಮಿಯನ್ನು ಒಳಗೊಳ್ಳುತ್ತದೆ;][1]

1. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ 06.03.1982 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) "ಕೃಷಿಕ" ಎಂದರೆ ಭೂಮಿಯನ್ನು ಸ್ವತಃ ಸಾಗುವಳಿ ಮಾಡುವ ವ್ಯಕ್ತಿ;

[1][(4) "ತಿದ್ದುಪಡಿ ಅಧಿನಿಯಮ" ಎಂದರೆ [2][ಕರ್ನಾಟಕ][2] ಭೂಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1973][1];

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

[1][(4ಎ) x x x][1]

1. 1986ರ ಅಧಿನಿಯಮ ಸಂಖ್ಯೆ 19ರ ಮೂಲಕ 06.12.1985 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಮತ್ತು 1990ರ ಅಧಿನಿಯಮ ಸಂಖ್ಯೆ 18ರ ಮೂಲಕ 8.10.1990 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(5) "ಗೊತ್ತುಪಡಿಸಿದ ದಿನ" ಎಂದರೆ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಗೊತ್ತುಪಡಿಸಿದ ದಿನಾಂಕ;

[1][(5ಎ) **"ಅಸಿಸ್ಟೆಂಟ್ ಕಮೀಷನರ್"** ಎಂದರೆ 1964ರ ಕರ್ನಾಟಕ ಭೂ ಕಂದಾಯ ಅಧಿನಿಯಮದ ಮೇರೆಗೆ ನೇಮಕಗೊಂಡ ಅಸಿಸ್ಟೆಂಟ್ ಕಮೀಷನರ್ ಮತ್ತು ಈ ಅಧಿನಿಯಮದ ಮೇರೆಗೆ ಅಸಿಸ್ಟೆಂಟ್ ಕಮೀಷನರರ ಎಲ್ಲಾ ಅಧಿಕಾರಗಳನ್ನು ಅಥವಾ ಯಾವುದೇ ಅಧಿಕಾರವನ್ನು ಚಲಾಯಿಸಲು ರಾಜ್ಯ ಸರ್ಕಾರವು ನೇಮಿಸಿದ ಭೂ ಸುಧಾರಣೆಗಳ ಸ್ಪೆಷಲ್ ಅಸಿಸ್ಟೆಂಟ್ ಕಮೀಷನರ್‌ನನ್ನು ಮತ್ತು ಭೂ ಸುಧಾರಣೆಗಳ ಅಡಿಷನಲ್ ಸ್ಪೆಷಲ್ ಅಸಿಸ್ಟೆಂಟ್ ಕಮೀಷನರ್‌ನನ್ನು ಒಳಗೊಳ್ಳುತ್ತದೆ][1].

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಸಲಾಗಿದೆ.

[1][(6) x x x ][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(7) "ಗರಿಷ್ಠ ಮಿತಿ ವಿಸ್ತೀರ್ಣ" ಎಂದರೆ 63ನೇ ಪ್ರಕರಣದ ಮೇರೆಗೆ ಯಾವ ಭೂಮಿಯನ್ನು ಹೊಂದಿರಲು ವ್ಯಕ್ತಿಗೆ ಅಥವಾ ಕುಟುಂಬಕ್ಕೆ ಹಕ್ಕಿದೆಯೋ ಆ ಭೂಮಿಯ ವಿಸ್ತೀರ್ಣ][1];

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(8) "ಸಹಕಾರ ಸಂಘ" ಎಂದರೆ [1][ಕರ್ನಾಟಕ][1] ಸಹಕಾರ ಸಂಘಗಳ ಅಧಿನಿಯಮ, 1959ರಲ್ಲಿ ಪರಿಭಾಷಿಸಿದಂತೆ ಇರುವ ಸಹಕಾರ ಸಂಘ;

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

(9) "ಸಹಕಾರಿ ಬೇಸಾಯ ಕ್ಷೇತ್ರ" ಎಂದರೆ 91ನೇ ಪ್ರಕರಣದಲ್ಲಿ ಉಪಬಂಧಿಸಿದಂತೆ ನೋಂದಾಯಿಸಲಾದ ಸಹಕಾರ ಬೇಸಾಯ ಕ್ಷೇತ್ರ;

[1][(9ಎ) "ನ್ಯಾಯಾಲಯ" ಎಂದರೆ ಭೂಮಿಯು ಯಾವ ಮುನ್ಸೀಫರ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯ ಸ್ಥಳೀಯ ಪರಿಮಿತಿಯೊಳಗೆ ಇದೆಯೋ ಆ ಮುನ್ಸೀಫರ ನ್ಯಾಯಾಲಯ][1];

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.1.1970 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(10) "ಸಾಗುವಳಿ ಮಾಡುವುದು" ಎಂದರೆ ಅದರ ವ್ಯಾಕರಣ ವ್ಯತ್ಯಾಸಗಳು ಮತ್ತು ಸಜಾತೀಯ ಪದ ಪ್ರಯೋಗಗಳೊಂದಿಗೆ, ಕೃಷಿ ಉತ್ಪನ್ನವನ್ನು ಬೆಳೆಸುವ ಅಥವಾ ಅಭಿವೃದ್ಧಿಗೊಳಿಸುವ ಉದ್ದೇಶಕ್ಕಾಗಿ ದೈಹಿಕ ಶ್ರಮದ ಅಥವಾ ಜಾನುವಾರುಗಳ ಅಥವಾ ಯಂತ್ರಗಳ ಮೂಲಕ ಭೂಮಿಯನ್ನು ಉಳುವುದು ಅಥವಾ ಸಿದ್ಧಪಡಿಸುವುದು ಅಥವಾ ಅದರಲ್ಲಿ ಕೃಷಿಯ ಯಾವುದಾದರೂ ಕೆಲಸವನ್ನು ಮಾಡುವುದು ಮತ್ತು **"ಸಾಗುವಳಿ ಮಾಡದ"** ಎಂಬ ಪದ ಪ್ರಯೋಗವನ್ನು ತತ್ಸಂವಾದಿಯಾಗಿ ಅರ್ಥೈಸತಕ್ಕದ್ದು;

**ವಿವರಣೆ:–** ಯಾವುದೇ ಭೂಮಿಯ ಹುಲ್ಲನ್ನು ಕೊಯ್ಯುವುದಕ್ಕಾಗಿ ಅಥವಾ ಹಣ್ಣುಗಳನ್ನು ಅಥವಾ ಇತರ ಉತ್ಪನ್ನಗಳನ್ನು ಸಂಗ್ರಹಿಸುವುದಕ್ಕಾಗಿ ಕರಾರು ಮಾಡಿಕೊಳ್ಳುವ ವ್ಯಕ್ತಿಯನ್ನು, ಆ ಕಾರಣ ಮಾತ್ರದಿಂದಲೇ ಅಂಥ ಭೂಮಿಯನ್ನು ಸಾಗುವಳಿ ಮಾಡುವವನೆಂದು ಭಾವಿಸತಕ್ಕದ್ದಲ್ಲ;

(11) **"ಸ್ವತಃ ಸಾಗುವಳಿ ಮಾಡುವುದು"** ಎಂದರೆ,–

(i) ಸ್ವಂತ ದುಡಿಮೆಯಿಂದ; ಅಥವಾ

(ii) ತನ್ನ ಕುಟುಂಬದ ಯಾರಾದರೊಬ್ಬರ ದುಡಿಮೆಯಿಂದ; ಅಥವಾ

(iii) ತನ್ನ ಅಥವಾ ತನ್ನ ಕುಟುಂಬದ ಯಾರಾದರೊಬ್ಬರ ಖುದ್ದು ಮೇಲ್ವಿಚಾರಣೆಯಲ್ಲಿ, ನಗದು ಅಥವಾ ವಸ್ತು ರೂಪದಲ್ಲಿ ಕೊಡಬಹುದಾದ ಮಜೂರಿಗಳ ಮೇಲೆ, ಆದರೆ ಬೆಳೆ ಪಾಲಿನ ಮೇಲಲ್ಲದೆ, ಕೂಲಿಗಾರರ ಅಥವಾ ನೌಕರನ ಮೂಲಕ

– ತಾನೇ ಸ್ವತಃ ಭೂಮಿಯನ್ನು ಸಾಗುವಳಿ ಮಾಡುವುದು;

[1][**ವಿವರಣೆ I. –** ಶೈಕ್ಷಣಿಕ, ಧಾರ್ಮಿಕ ಅಥವಾ ಧರ್ಮಾರ್ಥ ಉದ್ದೇಶಕ್ಕಾಗಿ ರಚಿತವಾದ ಮತ್ತು ಸ್ವತ್ತನ್ನು ಧಾರಣ ಮಾಡಲು ಸಾಮರ್ಥ್ಯವುಳ್ಳ ಸಾರ್ವಜನಿಕ ಸ್ವರೂಪದ ಶೈಕ್ಷಣಿಕ, ಧಾರ್ಮಿಕ ಅಥವಾ ಧರ್ಮಾರ್ಥ ಸಂಸ್ಥೆಯ ಅಥವಾ ಸಂಘದ ಅಥವಾ ನ್ಯಾಸದ ಸಂದರ್ಭದಲ್ಲಿ, ಭೂಮಿಯನ್ನು ಅಂಥ ಸಂಸ್ಥೆಯ ಅಥವಾ ಸಂಘದ ಅಥವಾ ನ್ಯಾಸದ ನೌಕರನ ಅಥವಾ ಏಜೆಂಟನ ಖುದ್ದು ಮೇಲ್ವಿಚಾರಣೆಯಲ್ಲಿ ಕೂಲಿಗಾರನು ಅಥವಾ ನೌಕರರು ಸಾಗುವಳಿ ಮಾಡಿದ್ದರೆ ಅಂಥ ಭೂಮಿಯನ್ನು ಸ್ವತಃ ಸಾಗುವಳಿ ಮಾಡಿದ ಭೂಮಿಯೆಂದು ಭಾವಿಸತಕ್ಕದ್ದು;][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**ವಿವರಣೆ II .–** ಅವಿಭಕ್ತ ಕುಟುಂಬದ ಸಂದರ್ಭದಲ್ಲಿ ಆ ಭೂಮಿಯು ಅಂಥ ಅವಿಭಕ್ತ ಕುಟುಂಬದ ಯಾರೇ ಸಾಗುವಳಿ ಮಾಡಿದ್ದರೂ, ಆ ಭೂಮಿಯನ್ನು ಸ್ವತಃ ಸಾಗುವಳಿ ಮಾಡಿದ ಭೂಮಿಯೆಂದು ಭಾವಿಸತಕ್ಕದ್ದು;

[1][**ವಿವರಣೆ III .– x x x**][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(12) "ಕುಟುಂಬ" ಎಂದರೆ,–

(ಎ) ಗಂಡನನ್ನು ಅಥವಾ ಹೆಂಡತಿಯನ್ನು, ಅಥವಾ ಗಂಡಂದಿರನ್ನು ಅಥವಾ ಹೆಂಡತಿಯರನ್ನು ಹೊಂದಿರುವ ವ್ಯಕ್ತಿಯ ಸಂದರ್ಭದಲ್ಲಿ ಅಂತಹ ವ್ಯಕ್ತಿ, ಗಂಡ ಅಥವಾ ಹೆಂಡತಿ, ಗಂಡಂದಿರು ಅಥವಾ ಹೆಂಡತಿಯರು ಮತ್ತು ಅವರ ಅಪ್ರಾಪ್ತ ವಯಸ್ಕ ಪುತ್ರರು ಮತ್ತು ಅವರ ಅವಿವಾಹಿತ ಪುತ್ರಿಯರು, ಯಾರಾದರೂ ಇದ್ದರೆ;

(ಬಿ) ಗಂಡನನ್ನು ಅಥವಾ ಹೆಂಡತಿಯನ್ನು ಹೊಂದಿಲ್ಲದ ವ್ಯಕ್ತಿಯ ಸಂದರ್ಭದಲ್ಲಿ ಅಂತಹ ವ್ಯಕ್ತಿ ಮತ್ತು ಅವನ ಅಥವಾ ಅವಳ ಅಪ್ರಾಪ್ತ ವಯಸ್ಕ ಪುತ್ರರು ಮತ್ತು ಅವಿವಾಹಿತ ಪುತ್ರಿಯರು;

(ಸಿ) ವಿವಾಹ ವಿಚ್ಛೇದನ ಪಡೆದ ಮತ್ತು ಪುನರ್ ವಿವಾಹವಾಗಿಲ್ಲದ ವ್ಯಕ್ತಿಯ ಸಂದರ್ಭದಲ್ಲಿ, ಅಂಥ ವ್ಯಕ್ತಿ ಮತ್ತು ಅವನ ಅಪ್ರಾಪ್ತ ವಯಸ್ಕ ಪುತ್ರರು ಮತ್ತು ಅವಿವಾಹಿತ ಪುತ್ರಿಯರು, ಅವರು ಅವನ ಅಭಿರಕ್ಷೆಯಲ್ಲಿರಲಿ ಅಥವಾ ಇಲ್ಲದಿರಲಿ; ಮತ್ತು

(ಡಿ) ವ್ಯಕ್ತಿ ಮತ್ತು ಅವನ ಅಥವಾ ಅವಳ, ಹೆಂಡತಿ ಅಥವಾ ಗಂಡ ಇಬ್ಬರೂ ಮೃತರಾಗಿದ್ದರೆ, ಅವರ ಅಪ್ರಾಪ್ತ ವಯಸ್ಕ ಪುತ್ರರು ಮತ್ತು ಅವಿವಾಹಿತ ಪುತ್ರಿಯರು;][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(12ಎ) **"ಹಣಕಾಸು ಸಂಸ್ಥೆ"** ಎಂದರೆ:–

(i) ಬ್ಯಾಂಕಿಂಗ್ ವಿನಿಯಮನ ಅಧಿನಿಯಮ, 1949ರಲ್ಲಿ ಪರಿಭಾಷಿಸಿರುವ ಬ್ಯಾಂಕಿಂಗ್ ಕಂಪನಿ;

(ii) ಭಾರತೀಯ ಸ್ಟೇಟ್ ಬ್ಯಾಂಕ್ ಅಧಿನಿಯಮ, 1955ರ ಮೇರೆಗೆ ರಚಿತವಾದ ಭಾರತೀಯ ಸ್ಟೇಟ್ ಬ್ಯಾಂಕ್;

(iii) ಭಾರತೀಯ ಸ್ಟೇಟ್ ಬ್ಯಾಂಕ್ (ಸಹಾಯಕ ಬ್ಯಾಂಕುಗಳು) ಅಧಿನಿಯಮ, 1959ರಲ್ಲಿ ಪರಿಭಾಷಿಸಿರುವ ಸಹಾಯಕ ಬ್ಯಾಂಕ್;

(iv) ಬ್ಯಾಂಕಿಂಗ್ ಕಂಪನಿಗಳ ಉದ್ಯಮಗಳ ಆರ್ಜನೆ ಮತ್ತು ವರ್ಗಾವಣೆ ಅಧಿನಿಯಮ, 1970ರ ಮೇರೆಗೆ ರಚಿತವಾದ ಸಂವಾದಿ ಹೊಸ ಬ್ಯಾಂಕು;

(v) ಕೃಷಿ ಪುನರ್‌ವಿತ್ತೀಯ ನಿಗಮ ಅಧಿನಿಯಮ, 1963ರ ಮೇರೆಗೆ ರಚಿತವಾದ ಕೃಷಿ ಪುನರ್ ವಿತ್ತೀಯ ಮತ್ತು ಅಭಿವೃದ್ಧಿ ನಿಗಮ;

(vi) ಕಂಪನಿಗಳ ಅಧಿನಿಯಮ, 1956ರ ಮೇರೆಗೆ ನೋಂದಾಯಿತವಾದ ಕಂಪನಿಯಾಗಿರುವ ಕರ್ನಾಟಕ ರಾಜ್ಯ ಕೃಷಿ ಉದ್ಯಮಗಳ ನಿಗಮ;

(vii) ಕಂಪನಿಗಳ ಅಧಿನಿಯಮ, 1956ರ ಮೇರೆಗೆ ನಿಗಮಿತವಾದ ಕಂಪನಿಯಾಗಿರುವ ಕೃಷಿ ವಿತ್ತೀಯ ನಿಗಮ ನಿಯಮಿತ; ಮತ್ತು

(viii) ಈ ಅಧಿನಿಯಮದ ಉದ್ದೇಶಕ್ಕಾಗಿ ಹಣಕಾಸು ಸಂಸ್ಥೆಯೆಂದು ರಾಜ್ಯ ಸರ್ಕಾರವು ಅಧಿಸೂಚಿಸಿದ ಇತರ ಯಾವುದೇ ಸಂಸ್ಥೆ;][1]

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(13) x x x ][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(14) x x x][1]

1. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ ದಿನಾಂಕ 20.10.1995 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(15) ಯಾವುದೇ ಭೂಮಿಯ ಸಂಬಂಧದಲ್ಲಿ "ಅಭಿವೃದ್ಧಿ" ಎಂದರೆ ಆ ಭೂಮಿಯ [1][ಉತ್ಪಾದಕತೆಯನ್ನು][1] ಹೆಚ್ಚಿಸುವ ಮತ್ತು ಅದಕ್ಕೆ ಅನುರೂಪವಾಗಿರುವ ಮತ್ತು ಅದನ್ನು ಧಾರಣಾ ಮಾಡಿರುವ ಉದ್ದೇಶಕ್ಕೆ ಸುಸಂಗತವಾಗಿರುವ ಮತ್ತು ಅದನ್ನು ಆ ಭೂಮಿಯಲ್ಲಿ ಮಾಡದಿದ್ದರೂ ಅದರ ಪ್ರಯೋಜನಕ್ಕಾಗಿ ನೇರವಾಗಿ ಅಥವಾ, ಅದನ್ನು ಮಾಡಿದ ನಂತರ, ಅದಕ್ಕೆ ನೇರವಾಗಿ ಪ್ರಯೋಜನವಾಗುವಂತೆ ಮಾಡಲಾಗಿರುವ ಯಾವುದೇ ಕೆಲಸ ಮತ್ತು ಹಿಂದೆ ಹೇಳಿದ ಉಪಬಂಧಗಳಿಗೊಳಪಟ್ಟು ಅದರಲ್ಲಿ,–

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಲಾಗಿದೆ.

(ಎ) ಕೃಷಿ ಉದ್ದೇಶಗಳಿಗೆ ನೀರನ್ನು ಸಂಗ್ರಹಿಸಿಡಲು, ಸರಬರಾಜು ಮಾಡಲು ಅಥವಾ ಹಂಚಲು, ಕೆರೆಗಳನ್ನು, ಬಾವಿಗಳನ್ನು, ನೀರಿನ ನಾಲೆಗಳನ್ನು, ಏರಿಗಳನ್ನು ಮತ್ತು ಇತರ ಕಾಮಗಾರಿಗಳನ್ನು ನಿರ್ಮಿಸುವುದು;

(ಬಿ) ಭೂಮಿಯಿಂದ ನೀರನ್ನು ಹೊರ ಹಾಯಿಸುವುದಕ್ಕಾಗಿ ಅಥವಾ ಪ್ರವಾಹಗಳಿಂದ ಅಥವಾ ಸವೆತದಿಂದ ಅಥವಾ ನೀರಿನಿಂದಾಗುವ ಇತರ ಹಾನಿಯಿಂದ ಭೂಮಿಯನ್ನು ರಕ್ಷಿಸುವುದಕ್ಕಾಗಿ ಕಾಮಗಾರಿಗಳನ್ನು ನಿರ್ಮಿಸುವುದು;

(ಸಿ) ಮರಗಳನ್ನು ಅಥವಾ ನೆಡುತೋಪು ಬೆಳೆಗಳನ್ನು ನೆಡುವುದು ಮತ್ತು ಭೂಮಿಯನ್ನು ಕೃಷಿ ಯೋಗ್ಯಗೊಳಿಸುವುದು, ವ್ಯವಸಾಯಕ್ಕೆ ಸಿದ್ಧಗೊಳಿಸುವುದು, ಬೇಲಿ ಹಾಕುವುದು, ಮಟ್ಟ ಮಾಡುವುದು ಅಥವಾ ಮೆಟ್ಟಲು ಪಾತಿಗಳನ್ನಾಗಿ ಮಾಡುವುದು;

(ಡಿ) ಹಿಡುವಳಿಯನ್ನು ಅನುಕೂಲವಾದ ಅಥವಾ ಲಾಭದಾಯಕವಾದ ರೀತಿಯಲ್ಲಿ ಬಳಸುವುದಕ್ಕೆ ಅಥವಾ ಅಧಿಭೋಗಿಸುವುದಕ್ಕೆ ಸಮಂಜಸವಾಗಿ ಅಗತ್ಯವಾಗಿರುವ ಕಟ್ಟಡಗಳನ್ನು ಪುರಸಭಾ ಅಥವಾ ನಗರ ಪ್ರದೇಶವನ್ನು ಹೊರತುಪಡಿಸಿ ಬೇರೆ ಕಡೆಯಲ್ಲಿ ಭೂಮಿಯ ಮೇಲೆ ಅಥವಾ ಅದರ ಆಸುಪಾಸಿನಲ್ಲಿ ಕಟ್ಟುವುದು; ಮತ್ತು

(ಇ) ಹಿಂದೆ ಹೇಳಿದ ಕಾಮಗಾರಿಗಳಲ್ಲಿ ಯಾವುದನ್ನಾಗಲಿ ನವೀಕರಿಸುವುದು ಅಥವಾ ಪುನಃನಿರ್ಮಿಸುವುದು ಅಥವಾ ಅವುಗಳಲ್ಲಿ ಬದಲಾವಣೆ ಮಾಡುವುದು ಅಥವಾ ಅವುಗಳಿಗೆ ಸೇರ್ಪಡೆ ಮಾಡುವುದು

– ಒಳಗೊಳ್ಳುತ್ತವೆ; ಆದರೆ, ತಾತ್ಕಾಲಿಕ ಬಾವಿಗಳು ಮತ್ತು ಕೃಷಿಯ ಸಾಮಾನ್ಯ ಕ್ರಮದಲ್ಲಿ, ಸ್ಥಳದಲ್ಲಿ ಸಾಗುವಳಿದಾರರಿಂದ ರೂಢಿಗತವಾಗಿ ನಿರ್ಮಿಸಲ್ಪಟ್ಟಂಥ ನೀರಿನ ನಾಲೆಗಳು, ಏರಿಗಳು, ಮಟ್ಟಗಳು, ಬೇಲಿಗಳು ಅಥವಾ ಇತರ ಕಾಮಗಾರಿಗಳು ಅಂಥ ಕಾಮಗಾರಿಗಳಿಗೆ ಮಾಡುವ ಸಣ್ಣ ಪುಟ್ಟ ಬದಲಾವಣೆಗಳು ಅಥವಾ ದುರಸ್ತಿಗಳು ಒಳಗೊಳ್ಳುವುದಿಲ್ಲ;

**ವಿವರಣೆ.–** ಅನೇಕ ಭೂಮಿಗಳಿಗೆ ಪ್ರಯೋಜನ ಕಲ್ಪಿಸುವಂಥ ಕಾಮಗಾರಿಯನ್ನು ಅಂಥ ಹಿಡುವಳಿಗಳ ಪೈಕಿ ಪ್ರತಿಯೊಂದರ ಸಂಬಂಧದಲ್ಲಿಯೂ ಅಭಿವೃದ್ಧಿ ಕೆಲಸವೆಂದು ಭಾವಿಸಬಹುದು;

(16) "ಮಧ್ಯವರ್ತಿ" ಎಂದರೆ ಭೂ ಮಾಲೀಕನಾಗಿರದ, ಆದರೆ ಭೂಮಿಯಲ್ಲಿ ಹಿತಾಸಕ್ತಿಯುಳ್ಳ, ಮತ್ತು ಅಂಥ ಹಿತಾಸಕ್ತಿಯ ಕಾರಣದಿಂದಾಗಿ ಅದರ ಸ್ವಾಧೀನಕ್ಕೆ ಹಕ್ಕುಳ್ಳ, ಆದರೆ ಅಂಥ ಸ್ವಾಧೀನತೆಯನ್ನು ಕಾನೂನುಬದ್ಧವಾಗಿ ಇತರರಿಗೆ ವರ್ಗಾಯಿಸಿರುವ ಯಾರೇ ವ್ಯಕ್ತಿ;

(17) "ಅವಿಭಕ್ತ ಕುಟುಂಬ" ಎಂದರೆ ಹಿಂದೂ ಕಾನೂನಿಗೆ ಒಳಪಡುವ ವ್ಯಕ್ತಿಗಳ ಸಂದರ್ಭದಲ್ಲಿ, ಒಂದು ಅವಿಭಕ್ತ ಹಿಂದೂ ಕುಟುಂಬ ಮತ್ತು ಇತರ ವ್ಯಕ್ತಿಗಳ ಸಂದರ್ಭದಲ್ಲಿ ಪದ್ಧತಿಯಂತೆ ಆಸ್ತಿ –ಪಾಸ್ತಿಯನ್ನು ಜಂಟಿಯಾಗಿ ಹೊಂದಿರುವ ಅಥವಾ ನಿವಾಸದಲ್ಲಿ ಒಟ್ಟಿಗೆ ಇರುವ ಗುಂಪು ಅಥವಾ ಘಟಕ;

(18) "ಭೂಮಿ" ಎಂದರೆ ಕೃಷಿ ಭೂಮಿ ಅಂದರೆ ಕೃಷಿಯ ಉದ್ದೇಶಗಳಿಗೆ ಅಥವಾ ಅದಕ್ಕೆ ಉಪಯುಕ್ತ ಉದ್ದೇಶಗಳಿಗೆ ಬಳಸುತ್ತಿರುವ ಅಥವಾ ಬಳಸಲು ಯೋಗ್ಯವಾದ ಭೂಮಿ ಮತ್ತು ತೋಟಗಾರಿಕೆ ಭೂಮಿ, ಅರಣ್ಯ ಭೂಮಿ, ತೋಟದ ಭೂಮಿ, ಹುಲ್ಲುಗಾವಲು, ನೆಡುತೋಪು ಮತ್ತು ತೋಪು ಒಳಗೊಳ್ಳುತ್ತವೆ. ಆದರೆ, ಮನೆಯ ನಿವೇಶನ ಅಥವಾ ಕೃಷಿಯೇತರ ಉದ್ದೇಶಗಳಿಗಾಗಿ ಮಾತ್ರವೇ ಬಳಸಲಾಗುವ ಭೂಮಿಯು ಒಳಗೊಳ್ಳುವುದಿಲ್ಲ;

(19) "ಭೂ ರಹಿತ ವ್ಯಕ್ತಿ" ಎಂದರೆ ಮಾಲೀಕನಾಗಿ ಅಥವಾ ಗೇಣಿದಾರನಾಗಿ ಭೂಮಿಯನ್ನು ಹೊಂದಿಲ್ಲದ, ತನ್ನ ಜೀವನ ನಿರ್ವಹಣೆಗಾಗಿ ಪ್ರಧಾನವಾಗಿ ದೈಹಿಕ ದುಡಿಮೆಯಿಂದ ಸಂಪಾದಿಸುವ ಮತ್ತು ಕೃಷಿ ವೃತ್ತಿಯನ್ನು ಅವಲಂಬಿಸುವ ಉದ್ದೇಶವಿರುವ ವ್ಯಕ್ತಿ;

(20) "ಭೂ ಮಾಲೀಕ" ಎಂದರೆ ಭೂಮಿಯನ್ನು ಗೇಣಿದಾರನಿಗೆ ಗೇಣಿಗೆ ಕೊಟ್ಟಿರುವ ವ್ಯಕ್ತಿ ಮತ್ತು ಗೇಣಿದಾರನಿಂದ ಗೇಣಿಯನ್ನು ಪಡೆದುಕೊಳ್ಳಲು ಹಕ್ಕಿರುವ ವ್ಯಕ್ತಿಯನ್ನು ಒಳಗೊಳ್ಳುತ್ತದೆ;

**ವಿವರಣೆ.–** ಭೂಮಿಯ ಮಾಲೀಕನಿಂದ ಭೂಮಿಯನ್ನು ಗೇಣಿಗೆ ಪಡೆದುಕೊಂಡು ಅದನ್ನು ಬೇರೊಬ್ಬ ವ್ಯಕ್ತಿಗೆ ಗೇಣಿಗೆ ಕೊಟ್ಟಿರುವ ಖಾಯಂ ಗೇಣಿದಾರನಂಥ ಅಥವಾ ಮೂಲ ಗೇಣಿದಾರನಂಥ ಅಥವಾ ಮಿರಾಸಿ ಗೇಣಿದಾರನಂಥ ಅಥವಾ ಖಾತಾಕುಳದಂಥ ಮಧ್ಯವರ್ತಿಯನ್ನು, ಆ ಭೂಮಿಯನ್ನು ಯಾರಿಗೆ ಗೇಣಿಗೆ ಕೊಡಲಾಗಿದೆಯೋ ಆ ವ್ಯಕ್ತಿಯ ಸಂಬಂಧದಲ್ಲಿ ಭೂ ಮಾಲೀಕನೆಂದು ಭಾವಿಸತಕ್ಕದ್ದು;

(21) "ಭೂಮಿಯ ಒಡೆಯ" ಎಂದರೆ ಭೂಮಿಯ ಒಡೆಯ ಮತ್ತು ಭೂಮಿಯ ಸ್ವಾಧೀನ ಪಡೆದಿರುವ ನ್ಯಾಸಧಾರಿ ಅಥವಾ ಅಡಮಾನದಾರರನ್ನು ಒಳಗೊಳ್ಳುತ್ತದೆ;

[1][(21ಎ) "ಭೂ ಕಂದಾಯ" ಎಂದರೆ ಭೂಮಿ ಇರುವ ಪ್ರದೇಶದಲ್ಲಿ ಜಾರಿಯಲ್ಲಿರುವ ಭೂ ಕಂದಾಯ ವ್ಯವಸ್ಥೆಯ ಮೇರೆಗೆ ನಿಗದಿ ಮಾಡಿರುವಂತೆ, ಯಾರೇ ವ್ಯಕ್ತಿಯು ಹೊಂದಿರುವ ಅಥವಾ ಆತನಲ್ಲಿ ನಿಹಿತವಾಗಿರುವ ಭೂಮಿಯ ಬಗ್ಗೆ ಅವನಿಂದ ರಾಜ್ಯ ಸರ್ಕಾರವು ಅಥವಾ ಅದರ ಪರವಾಗಿ ಪಡೆದ ಅಥವಾ ಕ್ಲೇಮು ಮಾಡಬಹುದಾದ ಎಲ್ಲ ಮೊಬಲಗುಗಳು ಮತ್ತು ಸಂದಾಯಗಳು;

**ವಿವರಣೆ.–** ಭೂ ಕಂದಾಯ ವ್ಯವಸ್ಥೆಯು ಆಗದಿರುವ ಯಾವುದೇ ಗ್ರಾಮದ ಸಂದರ್ಭದಲ್ಲಿ ಭೂ ಕಂದಾಯದ ವ್ಯವಸ್ಥೆಯು ಆಗಿರುವ ಅದರ ಪಕ್ಕದ ಗ್ರಾಮದಲ್ಲಿ ಅದೇ ತರಹದ ಅಷ್ಟೇ ವಿಸ್ತೀರ್ಣದ ಭೂಮಿಯ ಮೇಲೆ ವಿಧಿಸಲಾದ ಭೂ ಕಂದಾಯ ನಿರ್ಧರಣೆಗೆ ಸಮನಾದ ಮೊಬಲಗನ್ನು ಈ ಖಂಡದ ಉದ್ದೇಶಗಳಿಗಾಗಿ ಭೂ ಕಂದಾಯವೆಂದು ಭಾವಿಸತಕ್ಕದ್ದು;

(21ಬಿ) "ಪರಿಮಿತ ಒಡೆಯ" ಎಂದರೆ ಯಾವುದೇ ಭೂಮಿಯಲ್ಲಿ ಆಜೀವ ಸಂಪದಕ್ಕೆ ಹಕ್ಕುಳ್ಳವನಾದ ಯಾರೇ ವ್ಯಕ್ತಿ ಮತ್ತು ಅವನ ಮೂಲಕ ಅಧಿಕಾರ ಪಡೆಯುವ ವ್ಯಕ್ತಿಗಳನ್ನು ಒಳಗೊಳ್ಳುತ್ತದೆ;

**ವಿವರಣೆ.–** ತನ್ನ ಜೀವಿತ ಕಾಲದಲ್ಲಿ ಭೂಮಿಯನ್ನು ಅನುಭೋಗಿಸಲು ಹಕ್ಕನ್ನು ಹೊಂದಿರುವ ವ್ಯಕ್ತಿಯ ಭೂಮಿಯನ್ನು ಪರಾಧೀನ ಮಾಡುವ ಅಧಿಕಾರವನ್ನು ಅವನು ಹೊಂದಿಲ್ಲದಿದ್ದರೂ, ಅವನನ್ನು ಪರಿಮಿತ ಒಡೆಯ ಎಂದು ಭಾವಿಸತಕ್ಕದ್ದು;][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ 01.03.1974ರ ರಿಂದ ಜಾರಿಗೆ ಬರುವಂತೆ ಉಪ–ಪ್ರಕರಣ (21ಎ) ಮತ್ತು (21ಬಿ) ಯನ್ನು ಸೇರಿಸಲಾಗಿದೆ.

(22) "ಅಧಿಸೂಚನೆ" ಎಂದರೆ ರಾಜ್ಯಪತ್ರದಲ್ಲಿ ಪ್ರಕಟಿಸಿದ ಅಧಿಸೂಚನೆ;

(23) "ಕಾಯಂ ಗೇಣಿದಾರ" ಎಂದರೆ ಭೂಮಿಯನ್ನು [1][ಸ್ವತಃ ಸಾಗುವಳಿ ಮಾಡುವವನು][1];

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಎ) ಯಾರ ಗೇಣಿದಾರಿಕೆಯ ಪ್ರಾರಂಭವನ್ನು ಅಥವಾ ಅವಧಿಯನ್ನು ಅಂಥ ಗೇಣಿದಾರಿಕೆಯು ತುಂಬಾ ಹಿಂದಿನದು ಎಂಬ ಕಾರಣದಿಂದ ಮನವರಿಕೆಯಾಗುವ ಹಾಗೆ ರುಜುವಾತುಪಡಿಸಲು ಸಾಧ್ಯವಾಗುವುದಿಲ್ಲವೋ ಅವನು; ಅಥವಾ

(ಬಿ) ಯಾವ ವ್ಯಕ್ತಿಯ ಹೆಸರನ್ನು ಅಥವಾ ಹಕ್ಕು ಸ್ವಾಮ್ಯ ಹೊಂದಿರುವ ಯಾವ ವ್ಯಕ್ತಿಯ ಪೂರ್ವಜರ ಹೆಸರನ್ನು ಕಾಯಂ ಗೇಣಿದಾರನೆಂದು ಹಕ್ಕು ದಾಖಲೆಯಲ್ಲಿ ಅಥವಾ ಯಾವುದೇ ಸರ್ಕಾರಿ ದಾಖಲೆಯಲ್ಲಿ ಅಥವಾ ಇತರ ಯಾವುದೇ ರೆವಿನ್ಯೂ ದಾಖಲೆಯಲ್ಲಿ ದಾಖಲು ಮಾಡಲಾಗಿದೆಯೋ ಅವನು; ಅಥವಾ

(ಸಿ) ಯಾರು ಪದ್ಧತಿಯಂತೆ, ಒಪ್ಪಂದದ ಅಥವಾ ನ್ಯಾಯಾಲಯದ ಡಿಕ್ರಿ ಅಥವಾ ಆದೇಶದ ಮೇರೆಗೆ ಭೂಮಿಯನ್ನು ಕಾಯಂ ಗೇಣಿಯ ಮೇಲೆ ಹೊಂದಿರುತ್ತಾನೋ ಅವನು; ಅಥವಾ

(ಡಿ) ಯಾರು ಮೂಲ ಗೇಣಿದಾರನಾಗಿ ಅಥವಾ ಮಿರಾಸೆದಾರನಾಗಿ ಅಥವಾ ಖಾತಾಕುಳವಾಗಿ ಭೂಮಿಯನ್ನು ಹೊಂದಿರುತ್ತಾನೆಯೋ ಅವನು ಮತ್ತು ಇದು ಯಾವುದೇ ಕಾನೂನಿನ ಉಪಬಂಧಗಳ ಮೇರೆಗೆ, ಯಾರ ಗೇಣಿದಾರಿಕೆಯು ಭೂಮಾಲೀಕನ ಹಿಡುವಳಿಯ ಅವಧಿಯಷ್ಟೇ ಇದೆ ಎಂದು ಪೂರ್ವಭಾವನೆ ಮಾಡಲಾಗಿದೆಯೋ ಅಂಥ ಯಾರೇ ವ್ಯಕ್ತಿಯು ಒಳಗೊಳ್ಳುತ್ತಾನೆ;

[1][(24) x x x][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(25) "ನೆಡುತೋಪು ಬೆಳೆಗಳು" ಎಂದರೆ ಏಲಕ್ಕಿ, [1][x x x][1] ಕಾಫಿ, ಮೆಣಸು, ರಬ್ಬರ್ ಮತ್ತು ಟೀ;

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಮತ್ತು 1991ರ ಅಧಿನಿಯಮ ಸಂಖ್ಯೆ 1ರ ಮೂಲಕ 5.2.1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(26) "ನಿಯಮಿಸಿದ" ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

(27) "ರಕ್ಷಿತ ಗೇಣಿದಾರ" ಎಂದರೆ ಗೊತ್ತುಪಡಿಸಿದ ದಿನಕ್ಕೆ ಮೊದಲು, ಹನ್ನೆರಡು ವರ್ಷಗಳಿಗೆ ಕಡಿಮೆಯಲ್ಲದ ಕಾಲಾವಧಿಯವರೆಗೆ ಸತತವಾಗಿ ಭೂಮಿಯನ್ನು ಹೊಂದಿದ್ದ ಮತ್ತು ಅದನ್ನು ಸ್ವತಃ ಸಾಗುವಳಿ ಮಾಡುತ್ತಿದ್ದ ಯಾವುದೇ ಭೂಮಿಯ ಗೇಣಿದಾರ; ಮತ್ತು ,–

(i) [1][ಬೆಳಗಾವಿ ಪ್ರದೇಶ][1]ದಲ್ಲಿ, ಗೊತ್ತುಪಡಿಸಿದ ದಿನಕ್ಕೆ ಮೊದಲು ಆ ಪ್ರದೇಶದಲ್ಲಿ ಜಾರಿಯಲ್ಲಿದ್ದ ಬಾಂಬೆ ಗೇಣಿದಾರಿಕೆ ಮತ್ತು ಕೃಷಿ ಭೂಮಿಗಳ ಅಧಿನಿಯಮ, 1948ರ 4ಎ ಪ್ರಕರಣದ ಮೇರೆಗೆ ರಕ್ಷಿತ ಗೇಣಿದಾರನೆಂದು ಮಾನ್ಯ ಮಾಡಲಾಗಿರುವ ವ್ಯಕ್ತಿಯು; ಮತ್ತು

(ii) [1][ಗುಲ್ಬರ್ಗ ಪ್ರದೇಶ][1]ದಲ್ಲಿ, ಗೊತ್ತುಪಡಿಸಿದ ದಿನಕ್ಕೆ ಮೊದಲು ಆ ಪ್ರದೇಶದಲ್ಲಿ ಜಾರಿಯಲ್ಲಿದ್ದ, ಹೈದರಾಬಾದ್ ಗೇಣಿದಾರಿಕೆ ಮತ್ತು ಕೃಷಿ ಭೂಮಿಗಳ ಅಧಿನಿಯಮ, 1950ರ ಮೇರೆಗೆ ರಕ್ಷಿತ ಗೇಣಿದಾರನೆಂದು ಭಾವಿಸಲಾಗಿದ್ದ ವ್ಯಕ್ತಿಯು

– ಒಳಗೊಳ್ಳುತ್ತಾನೆ;

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ ದಿನಾಂಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

**ವಿವರಣೆ:**– (i) ಗೇಣಿದಾರನು ವಾರಸುದಾರಿಕೆಯ ಅಥವಾ ಉತ್ತರಾಧಿಕಾರದ ಮೂಲಕ ಮತ್ತೊಬ್ಬ ವ್ಯಕ್ತಿಯಿಂದ ಭೂಮಿಯನ್ನು ಧಾರಣ ಮಾಡಿದ್ದರೆ ಅಥವಾ ಅಂಥ ಭೂಮಿಯನ್ನು ಅವನು ಗೇಣಿದಾರನಾಗಿ ಧಾರಣ ಮಾಡಿದ್ದರೆ ಮತ್ತು ಅಂಥ ಇತರ ವ್ಯಕ್ತಿಯ ವಾರಸುದಾರನಾಗಿದ್ದರೆ, ಅಂಥ ಭೂಮಿಯನ್ನು ಅಂಥ ಇತರ ವ್ಯಕ್ತಿಯು ಗೇಣಿದಾರನಾಗಿ ಯಾವ ಕಾಲಾವಧಿಯಲ್ಲಿ ಧಾರಣ ಮಾಡಿದ್ದನೋ, ಆ ಕಾಲಾವಧಿಯನ್ನು ಈ ಖಂಡದ ಮೇರೆಗೆ ಹನ್ನೆರಡು ವರ್ಷಗಳ ಕಾಲಾವಧಿಯನ್ನು ಲೆಕ್ಕ ಹಾಕುವಾಗ ಸೇರಿಸಿಕೊಳ್ಳತಕ್ಕದ್ದು;

(ii) ಭೂಮಿಯನ್ನು ಧಾರಣ ಮಾಡಿರುವ ಗೇಣಿದಾರನು ಗೊತ್ತುಪಡಿಸಿದ ದಿನಕ್ಕೆ ಮೊದಲು ಹನ್ನೆರಡು ವರ್ಷಗಳೊಳಗೆ ಯಾವುದೇ ಕಾಲದಲ್ಲಿ ಅದೇ ಭೂ ಮಾಲೀಕನಿಂದ ಅದೇ ಗ್ರಾಮದಲ್ಲಿ ತಾನು ಸ್ವತಃ ಯಾವ ಭೂಮಿಯನ್ನು ಸಾಗುವಳಿ ಮಾಡುತ್ತಿದ್ದನೋ ಆ ಯಾವುದೇ ಇತರ ಭೂಮಿಯನ್ನು ಗೇಣಿದಾರನಾಗಿ ಧಾರಣ ಮಾಡಿದ್ದರೆ, ಅಂಥ ಇತರ ಭೂಮಿಯನ್ನು ಅವನು ಯಾವ ಕಾಲಾವಧಿಯಲ್ಲಿ ಧಾರಣ ಮಾಡಿದ್ದನೋ, ಆ ಕಾಲಾವಧಿಯನ್ನು ಈ ಖಂಡದ ಮೇರೆಗೆ ಹನ್ನೆರಡು ವರ್ಷಗಳ ಕಾಲಾವಧಿಯನ್ನು ಲೆಕ್ಕ ಹಾಕುವಾಗ ಸೇರಿಸಿಕೊಳ್ಳತಕ್ಕದ್ದು;

(iii) ಯಾವುದಾದರೂ ಭೂಮಿಯನ್ನು ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳು ಗೇಣಿದಾರರಾಗಿ, ಜಂಟಿಯಾಗಿ ಧಾರಣ ಮಾಡಿದ್ದರೆ, ಅವರಲ್ಲಿ ಯಾರಾದರೂ ಒಬ್ಬರು ಅಂಥ ಭೂಮಿಯನ್ನು ಸ್ವತಃ ಸಾಗುವಳಿ ಮಾಡಿದ್ದರೆ ಮತ್ತು ಸಾಗುವಳಿ ಮಾಡುವುದನ್ನು ಮುಂದುವರಿಸುತ್ತಿದ್ದರೆ ಅಂಥ ಎಲ್ಲ ವ್ಯಕ್ತಿಗಳನ್ನೂ ಅಂಥ ಭೂಮಿಯ ಸಂಬಂಧದಲ್ಲಿ ರಕ್ಷಿತ ಗೇಣಿದಾರರೆಂದು ಭಾವಿಸತಕ್ಕದ್ದು;

(iv) ಗೇಣಿದಾರನು ಯಾವುದಾದರೂ ತಾತ್ಕಾಲಿಕ ಅಶಕ್ತತೆಯ ಕಾರಣದಿಂದ ಭೂಮಿಯನ್ನು ಒಳಗೇಣಿಗೆ ಕೊಟ್ಟಿದ್ದರೆ, ಅವನು ರಕ್ಷಿತ ಗೇಣಿದಾರನ ಹಕ್ಕುಗಳನ್ನು ಪಡೆಯುವ ಉದ್ದೇಶಕ್ಕಾಗಿ, ಒಳಗೇಣಿಯ ಕಾಲಾವಧಿಯಲ್ಲಿ ಭೂಮಿಯನ್ನು ಸ್ವಾಧೀನದಲ್ಲಿಟ್ಟು ಕೊಂಡಿರುವುದನ್ನು ಮುಂದುವರಿಸಿರುವನೆಂದು ಮತ್ತು ಭೂಮಿಯನ್ನು ಸ್ವತಃ ಸಾಗುವಳಿ ಮಾಡುತ್ತಿರುವನೆಂದು ಭಾವಿಸತಕ್ಕದ್ದು;

[1][(28) "ಗೇಣಿ" ಎಂದರೆ ಗೇಣಿದಾರನು ತಾನು ಧಾರಣ ಮಾಡಿರುವ ಭೂಮಿಯನ್ನು ಬಳಸಿಕೊಳ್ಳುತ್ತಿರುವ ಮತ್ತು ಅಧಿಭೋಗಿಸುತ್ತಿರುವ ಕಾರಣದಿಂದಾಗಿ ಸಂದಾಯ ಮಾಡಿದ ಅಥವಾ ಸಂದಾಯ ಮಾಡಬೇಕಾದ ಹಣ;][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(29) "ಅನುಸೂಚಿತ ಬ್ಯಾಂಕು" ಎಂದರೆ ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ, 1934ರ ಎರಡನೇ ಅನುಸೂಚಿಯಲ್ಲಿ ಸೇರಿಸಲಾದ ಬ್ಯಾಂಕು;

(29ಎ) "ಪರಿಶಿಷ್ಟ ಜಾತಿಗಳು" ಎಂದರೆ [2][ಕರ್ನಾಟಕ ರಾಜ್ಯ][2]ದ ಸಂಬಂಧದಲ್ಲಿ ಅಥವಾ ಅದರ ಯಾವುದೇ ಪ್ರದೇಶದ ಸಂಬಂಧದಲ್ಲಿ ಸಂವಿಧಾನ (ಪರಿಶಿಷ್ಟ ಜಾತಿಗಳು) ಆದೇಶ, 1950ರಲ್ಲಿ ನಿರ್ದಿಷ್ಟಪಡಿಸಿದ ಪರಿಶಿಷ್ಟ ಜಾತಿಗಳು;

(29ಬಿ) "ಪರಿಶಿಷ್ಟ ಪಂಗಡಗಳು" ಎಂದರೆ [2][ಕರ್ನಾಟಕ ರಾಜ್ಯ][2]ದ ಸಂಬಂಧದಲ್ಲಿ ಅಥವಾ ಅದರ ಯಾವುದೇ ಪ್ರದೇಶದ ಸಂಬಂಧದಲ್ಲಿ ಸಂವಿಧಾನ (ಪರಿಶಿಷ್ಟ ಪಂಗಡಗಳು) ಆದೇಶ, 1950ರಲ್ಲಿ ನಿರ್ದಿಷ್ಟಪಡಿಸಿದ ಪರಿಶಿಷ್ಟ ಪಂಗಡಗಳು;][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973 ರ ಮೂಲಕ ದಿನಾಂಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

[1][(30) "ನಾವಿಕ" ಎಂದರೆ ವ್ಯಾಪಾರಿ ನೌಕೆ ಅಧಿನಿಯಮ, 1958 (1958ರ ಕೇಂದ್ರ ಅಧಿನಿಯಮ 44) ಯಾವ ಹಡಗಿಗೆ ಅಥವಾ ಹಾಯಿ ನೌಕೆಗೆ ಅನ್ವಯಿಸುವುದೋ ಆ ಹಡಗಿನ ಅಥವಾ ಹಾಯಿ ನೌಕೆಯ ಚಾಲಕ ವರ್ಗದ ಸದಸ್ಯನಾಗಿ ನಿಯೋಜಿತನಾದ ಅಥವಾ ತೊಡಗಿರುವ ಮಾಸ್ಟರ ಪೈಲಟ್ ಅಥವಾ ಅಪ್ರೆಂಟಿಸ್ ಒಳಗೊಂಡಂತೆ ವ್ಯಕ್ತಿ;][1]

ಪರಂತು, ಯಾರೇ ವ್ಯಕ್ತಿಯು ಒಕ್ಕೂಟದ ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸುತ್ತಿರುವನೇ ಎಂಬ ಪ್ರಶ್ನೆ ಉದ್ಭವಿಸಿದ್ದಲ್ಲಿ ಅಂಥ ಪ್ರಶ್ನೆಯನ್ನು ರಾಜ್ಯ ಸರ್ಕಾರವು ತೀರ್ಮಾನಿಸತಕ್ಕದ್ದು ಮತ್ತು ಅದರ ತೀರ್ಮಾನವೇ ಅಂತಿಮವಾದುದಾಗಿರತಕ್ಕದ್ದು.

1. 1965ರ ಅಧಿನಿಯಮ ಸಂಖ್ಯೆ 4ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಲಾಗಿದೆ.

(31) "ಸಣ್ಣ ಹಿಡುವಳಿದಾರ" ಎಂದರೆ [1][ಎರಡು ಯುನಿಟ್‌ಗಳಿಗೆ][1] ಮೀರದ ಭೂಮಿಯನ್ನು ಹೊಂದಿರುವ, ಯಾವ ಭೂ ಮಾಲೀಕನ ವಾರ್ಷಿಕ ಒಟ್ಟು ನಿವ್ವಳ ಆದಾಯವು ಅಂಥ ಭೂಮಿಯಿಂದ ಬರತಕ್ಕ ಆದಾಯವೂ ಸೇರಿದಂತೆ [2][ಹತ್ತು ಸಾವಿರ ರೂಪಾಯಿಗಳಿಗೆ][2] ಮೀರುವುದಿಲ್ಲವೋ ಆ ಭೂ ಮಾಲೀಕ;

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(31ಎ) **"ಸೈನಿಕ"** ಎಂದರೆ ಒಕ್ಕೂಟದ ಸಶಸ್ತ್ರ ಪಡೆಗಳ ಸೇವೆಯಲ್ಲಿರುವ ವ್ಯಕ್ತಿ ಮತ್ತು [2][ಭೂಮಿಯನ್ನು ಪುನಃ ವಶಕ್ಕೆ ಪಡೆಯುವ ಮತ್ತು ಪುನಃ ವಶಕ್ಕೆ ಪಡೆದ ಭೂಮಿಯನ್ನು ವರ್ಗಾವಣೆ ಮಾಡುವ ಉದ್ದೇಶಗಳಿಗಾಗಿ][2] [3][ಯಾವ ಸೈನಿಕನು ಅಂಥ ಸೈನಿಕನಾಗಿ ಸೇವೆಯಲ್ಲಿರುವಾಗಲೇ][3] ಮೃತಪಟ್ಟಿರುವನೋ ಆ ಸೈನಿಕನ ಸಂದರ್ಭದಲ್ಲಿ, ಅವನ ಮರಣದ ಕಾಲದಲ್ಲಿ ಅಂಥ ಸೈನಿಕನ ಮೇಲೆ ಅವಲಂಬಿತರಾಗಿದ್ದ ತಂದೆ, ತಾಯಿ, ಹೆಂಡತಿ/ಗಂಡ, ಮಗು ಮತ್ತು ಮೊಮ್ಮಗುವನ್ನು ಒಳಗೊಳ್ಳುತ್ತದೆ:

ಪರಂತು, ಯಾರೇ ವ್ಯಕ್ತಿಯು ಸೈನಿಕನೇ ಅಥವಾ [3][ಯಾರೇ ಸೈನಿಕನು ಅಂಥ ಸೈನಿಕನಾಗಿ ಸೇವೆಯಲ್ಲಿರುವಾಗಲೇ][3] ಮೃತಪಟ್ಟಿರುವನೇ ಎಂಬ ಪ್ರಶ್ನೆಯು ಉದ್ಭವಿಸಿದರೆ, ಅಂಥ ಪ್ರಶ್ನೆಯನ್ನು ರಾಜ್ಯ ಸರ್ಕಾರವು ತೀರ್ಮಾನಿಸತಕ್ಕದ್ದು ಮತ್ತು ಅದರ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.][1]

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(32) "ಸ್ತ್ರೀ ಧನ ಭೂಮಿ" ಎಂದರೆ ಕುಟುಂಬದ ಯಾರೇ ಸ್ತ್ರೀಯು ತನ್ನ ಹೆಸರಿನಲ್ಲೇ ಧಾರಣ ಮಾಡಿರುವ ಯಾವುದೇ ಭೂಮಿ;

(32ಎ) "ತಹಶೀಲ್ದಾರ" ಪದವು ಈ ಅಧಿನಿಯಮದ ಮೇರೆಗೆ ತಹಶೀಲ್ದಾರನ ಎಲ್ಲ ಅಥವಾ ಯಾವುವೇ ಅಧಿಕಾರಗಳನ್ನು ಚಲಾಯಿಸಲು ರಾಜ್ಯ ಸರ್ಕಾರದಿಂದ ಅಧಿಕಾರ ಪಡೆದ ವಿಶೇಷ ತಹಶೀಲ್ದಾರನನ್ನು ಒಳಗೊಳ್ಳುತ್ತದೆ;][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ (32) ಮತ್ತು (32ಎ) ಉಪಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ.

(33) "ಗೇಣಿದಾರಿಕೆ" ಎಂದರೆ ಭೂ ಮಾಲೀಕನ ಮತ್ತು ಗೇಣಿದಾರನ ಸಂಬಂಧ;

[1][(34) "ಗೇಣಿದಾರ" ಎಂದರೆ ಭೂ ಮಾಲೀಕನಿಂದ [1*][ಗೇಣಿಯ ಮೇಲೆ ಧಾರಣ ಮಾಡಿರುವ ಭೂಮಿಯನ್ನು ಸ್ವತಃ ಸಾಗುವಳಿ ಮಾಡುವ][1*] ಕೃಷಿಕ ಮತ್ತು ಇದು,–

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ (34)ನೇ ಖಂಡವನ್ನು ಪ್ರತ್ಯಾಯೋಜಿಸಲಾಗಿದೆ.

1*. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(i) 4ನೇ ಪ್ರಕರಣದ ಮೇರೆಗೆ ಯಾವ ವ್ಯಕ್ತಿಯನ್ನು ಗೇಣಿದಾರನೆಂದು ಭಾವಿಸಲಾಗಿದೆಯೋ ಆ ವ್ಯಕ್ತಿಯನ್ನು;

(ii) [1][ಕರ್ನಾಟಕ][1] ಗೇಣಿದಾರರ (ಹೊರದೂಡುವಿಕೆಯಿಂದ ತಾತ್ಕಾಲಿಕ ರಕ್ಷಣೆ) ಅಧಿನಿಯಮ, 1961ರ ಮೇರೆಗೆ ಯಾವುದೇ ಭೂಮಿಯಿಂದ ಹೊರದೂಡುವಿಕೆಯ ವಿರುದ್ಧ ಯಾವ ವ್ಯಕ್ತಿಯನ್ನು ರಕ್ಷಿಸಲಾಗಿತ್ತೋ ಆ ವ್ಯಕ್ತಿಯನ್ನು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973 ರ ಮೂಲಕ ದಿನಾಂಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

[1][(iiಎ) 5ನೇ ಪ್ರಕರಣದ ಉಪಬಂಧಗಳಿಗೆ ವಿರುದ್ಧವಾಗಿ ಮತ್ತು ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕಕ್ಕೆ ಮುಂಚಿತವಾಗಿ ಸೃಜಿಸಲಾದ ಗೇಣಿಯ ಮೇರೆಗೆ ಗೇಣಿಯ ಮೇಲೆ ಯಾವುದೇ ಭೂಮಿಯನ್ನು ಸ್ವತಃ ಯಾವ ವ್ಯಕ್ತಿಯು ಸಾಗುವಳಿ ಮಾಡುತ್ತಿರುವನೋ ಆ ವ್ಯಕ್ತಿಯನ್ನು;][1]

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(iii) ಯಾವ ವ್ಯಕ್ತಿಯು ಕಾಯಂ ಗೇಣಿದಾರನಾಗಿರುವನೋ ಆ ವ್ಯಕ್ತಿಯನ್ನು; ಮತ್ತು

(iv) ಯಾವ ವ್ಯಕ್ತಿಯು ರಕ್ಷಿತ ಗೇಣಿದಾರನಾಗಿರುವನೋ ಆ ವ್ಯಕ್ತಿಯನ್ನು

– ಒಳಗೊಳ್ಳುತ್ತದೆ;

**ವಿವರಣೆ.**– ಯಾವುದೇ ಭೂಮಿಯ ಹುಲ್ಲನ್ನು ಕೊಯ್ಯಲು ಅಥವಾ ಹಣ್ಣುಗಳನ್ನು ಅಥವಾ ಇತರ ಉತ್ಪನ್ನಗಳನ್ನು ಸಂಗ್ರಹಿಸಲು ಕರಾರನ್ನು ಮಾಡಿಕೊಳ್ಳುವ ವ್ಯಕ್ತಿಯನ್ನು, ಆ ಕಾರಣದಿಂದಲೇ ಗೇಣಿದಾರನೆಂದು ಭಾವಿಸತಕ್ಕದ್ದಲ್ಲ;][1]

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ (34)ನೇ ಖಂಡವನ್ನು ಪ್ರತ್ಯಾಯೋಜಿಸಲಾಗಿದೆ.

[1][(35) **"ನ್ಯಾಯಾಧಿಕರಣ"** ಎಂದರೆ 48ನೇ ಪ್ರಕರಣದ ಮೇರೆಗೆ ರಚಿತವಾದ ನ್ಯಾಯಾಧಿಕರಣ;

(35ಎ) **"ಯೂನಿಟ್"** ಎಂದರೆ ಯಾವ 'ಎ' ವರ್ಗದ ಭೂಮಿಯ ಮಣ್ಣಿನ ವರ್ಗೀಕರಣದ ಮೌಲ್ಯವು ಐವತ್ತು ಪೈಸೆ (ಎಂಟಾಣೆ) ಯಷ್ಟಿರುವುದೋ ಮತ್ತು ಅದಕ್ಕೂ ಮೇಲ್ಪಟ್ಟಿರುವುದೋ ಅಂಥ 'ಎ' ವರ್ಗದ [2][ಒಂದು ಎಕರೆ ಭೂಮಿ (40.47 ಮಾನಗಳು)][2] ಅಥವಾ ಅನುಸೂಚಿ 1ರ 'ಬಿ' ಭಾಗದಲ್ಲಿ ಹೇಳಿರುವ ಸೂತ್ರದ ಮೇರೆಗೆ ನಿರ್ಧರಿಸಿದ, ಸದರಿ ಅನುಸೂಚಿಯ ಭಾಗ 'ಎ' ಯಲ್ಲಿ ನಿರ್ದಿಷ್ಟಪಡಿಸಿರುವ ಇತರ ಭೂಮಿಯ ಒಂದು ಅಥವಾ ಹೆಚ್ಚು ವರ್ಗಗಳಿಂದ ಕೂಡಿದ, ಅದಕ್ಕೆ ಸಮನಾದ ವಿಸ್ತೀರ್ಣ.][1]

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ (35)ನೇ ಖಂಡವನ್ನು ಬಿಟ್ಟುಬಿಡಲಾಗಿದೆ ಮತ್ತು 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ (35) ಮತ್ತು (35ಎ) ಖಂಡವನ್ನು ಸೇರಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(36) "[1][ಅವಿವಾಹಿತ ಪುತ್ರಿ][1]" ಎಂದರೆ ಮದುವೆಯೇ ಆಗದಿರುವ [1][ಪುತ್ರಿ;][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(37) "ಗ್ರಾಮ" ಎಂದರೆ ರೆವಿನ್ಯೂ ಲೆಕ್ಕಗಳಲ್ಲಿ ಗ್ರಾಮ ಎಂದು ಮಾನ್ಯ ಮಾಡಿರುವ ಗ್ರಾಮ.

(ಬಿ) ಈ ಅಧಿನಿಯಮದಲ್ಲಿ ಬಳಸಿದ, ಆದರೆ ಪರಿಭಾಷಿಸದ ಪದಗಳಿಗೆ ಮತ್ತು ಪದಾವಳಿಗಳಿಗೆ ಸಂದರ್ಭಾನುಸಾರ [1][[2][ಕರ್ನಾಟಕ][2] ಭೂ ಕಂದಾಯ ಅಧಿನಿಯಮ, 1964][1] ರಲ್ಲಿ ಮತ್ತು ಸ್ವತ್ತು ವರ್ಗಾವಣೆ ಅಧಿನಿಯಮ, 1882ರಲ್ಲಿ ಅವುಗಳಿಗೆ ಕೊಟ್ಟಿರುವ ಅರ್ಥವೇ ಇರತಕ್ಕದ್ದು.

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973 ರ ಮೂಲಕ ದಿನಾಂಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

[1][(ಸಿ) x x x][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

## ಅಧ್ಯಾಯ – II

## ಗೇಣಿದಾರಿಕೆಗಳ ಬಗ್ಗೆ ಸಾಮಾನ್ಯ ಉಪಬಂಧಗಳು

**3. [1][ಗುಲ್ಬರ್ಗ ಪ್ರದೇಶ][1]ದಲ್ಲಿರುವ ಕೃಷಿ ಭೂಮಿಗೆ ಸ್ವತ್ತು ವರ್ಗಾವಣೆ ಅಧಿನಿಯಮವನ್ನು ವಿಸ್ತರಿಸುವುದು ಮತ್ತು ಆ ಅಧಿನಿಯಮದ V ನೇ ಅಧ್ಯಾಯವನ್ನು ಗೇಣಿದಾರಿಕೆಗಳಿಗೆ ಮತ್ತು ಗೇಣಿಗಳಿಗೆ ಅನ್ವಯಿಸುವುದು.–** (1) ಸ್ವತ್ತು ವರ್ಗಾವಣೆ ಅಧಿನಿಯಮ, 1882 (1882ರ ಕೇಂದ್ರ ಅಧಿನಿಯಮ V)ನ್ನು [1][ಗುಲಬರ್ಗ ಪ್ರದೇಶ][1]ದಲ್ಲಿರುವ ಕೃಷಿ ಭೂಮಿಗೆ ವಿಸ್ತರಿಸತಕ್ಕದ್ದು, ಮತ್ತು ಸದರಿ ಅಧಿನಿಯಮದಲ್ಲಿ "ಸ್ವತ್ತು" ಮತ್ತು "ಸ್ಥಿರ ಸ್ವತ್ತು" ಎಂಬ ಪದಗಳು ಕೃಷಿ ಭೂಮಿಯನ್ನು ಒಳಗೊಳ್ಳತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973 ರ ಮೂಲಕ ದಿನಾಂಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

(2) ಸ್ವತ್ತು ವರ್ಗಾವಣೆ ಅಧಿನಿಯಮ, 1882ರ Vನೇ ಅಧ್ಯಾಯದ ಉಪಬಂಧಗಳು, ಅವು ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗಿಲ್ಲದಿರುವಷ್ಟರ ಮಟ್ಟಿಗೆ, ಈ ಅಧಿನಿಯಮವು ಯಾವ ಗೇಣಿದಾರಿಕೆಗಳಿಗೆ ಮತ್ತು ಗೇಣಿಗಳಿಗೆ ಅನ್ವಯಿಸುವುದೋ ಆ ಗೇಣಿದಾರಿಕೆಗಳಿಗೆ ಮತ್ತು ಗೇಣಿಗಳಿಗೆ ಅನ್ವಯವಾಗತಕ್ಕದ್ದು.

**4. ವ್ಯಕ್ತಿಗಳನ್ನು ಗೇಣಿದಾರರೆಂದು ಭಾವಿಸುವುದು.–** ಬೇರೊಬ್ಬ ವ್ಯಕ್ತಿಗೆ ಸೇರಿರುವ ಯಾವುದೇ ಭೂಮಿಯನ್ನು ಕಾನೂನು ಬದ್ಧವಾಗಿ ಸಾಗುವಳಿ ಮಾಡುತ್ತಿರುವ ವ್ಯಕ್ತಿಯನ್ನು, ಅಂತಹ ಭೂಮಿಯನ್ನು ಮಾಲೀಕನು ಸ್ವತಃ ಸಾಗುವಳಿ ಮಾಡುತ್ತಿರದಿದ್ದರೆ ಮತ್ತು ಅಂತಹ ವ್ಯಕ್ತಿಯು,–

(ಎ) ಮಾಲೀಕನ ಕುಟುಂಬದವನಾಗಿರದಿದ್ದರೆ; ಅಥವಾ

(ಬಿ) ಮಾಲೀಕನ ಅಥವಾ ಮಾಲೀಕನ ಕುಟುಂಬದ ಯಾರೇ ವ್ಯಕ್ತಿಯ ಖುದ್ದು ಮೇಲ್ವಿಚಾರಣೆಯಲ್ಲಿ ಭೂಮಿಯನ್ನು ಸಾಗುವಳಿ ಮಾಡುವ ಆದರೆ ಬೆಳೆಯಲ್ಲಿ ಪಾಲನ್ನು ಕೊಡದೆ ನಗದಾಗಿ ಅಥವಾ ವಸ್ತುರೂಪದಲ್ಲಿ ಕೊಡಬಹುದಾದ ಮಜೂರಿಯನ್ನು ತೆಗೆದುಕೊಳ್ಳುವ ನೌಕರನಾಗಿರದಿದ್ದರೆ ಅಥವಾ ಕೂಲಿಗಾರನಾಗಿರದಿದ್ದರೆ; ಅಥವಾ

(ಸಿ) ಅಡಮಾನಕ್ಕೆ ಪಡೆದು ಸ್ವಾಧೀನತೆ ಹೊಂದಿರುವ ವ್ಯಕ್ತಿಯಾಗಿರದಿದ್ದರೆ

– ಗೇಣಿದಾರನೆಂದು ಭಾವಿಸತಕ್ಕದ್ದು:

ಪರಂತು, ಗೊತ್ತುಪಡಿಸಿದ ದಿನದಿಂದ [1][xxx][1] ಒಂದು ವರ್ಷದೊಳಗಾಗಿ ಮಾಲೀಕನು ಸಲ್ಲಿಸಿದ ಅರ್ಜಿಯ ಮೇಲೆ,–

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(i) ಅಂತಹ ವ್ಯಕ್ತಿಯನ್ನು ಗೇಣಿದಾರನಲ್ಲವೆಂದು [1][ನ್ಯಾಯಾಧಿಕರಣ][1]ವು ಘೋಷಿಸಿದರೆ ಮತ್ತು ಅಪೀಲಿನಲ್ಲಿ ಅದರ ತೀರ್ಮಾನವನ್ನು ವ್ಯತಿರಿಕ್ತಗೊಳಿಸಿರದಿದ್ದರೆ; ಅಥವಾ

(ii) [1][ನ್ಯಾಯಾಧಿಕರಣ][1]ವು ಅಂತಹ ಘೋಷಣೆಯನ್ನು ಮಾಡಲು ನಿರಾಕರಿಸಿದರೆ, ಆದರೆ ಅದರ ತೀರ್ಮಾನವನ್ನು ಅಪೀಲಿನಲ್ಲಿ ವ್ಯತಿರಿಕ್ತಗೊಳಿಸಿದ್ದರೆ

– ಅಂತಹ ವ್ಯಕ್ತಿಯನ್ನು ಗೇಣಿದಾರನೆಂದು ಭಾವಿಸತಕ್ಕದ್ದಲ್ಲ.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1]**[5. ಗೇಣಿಗಳು, ಇತ್ಯಾದಿಗಳ ನಿಷೇಧ.–** (1) ಈ ಅಧಿನಿಯಮದಲ್ಲಿ ಉಪಬಂಧಿಸಿದಂತೆ ಹೊರತು ಈ ತಿದ್ದುಪಡಿ ಅಧಿನಿಯಮವು ಪ್ರಾರಂಭವಾಗುವ ದಿನಾಂಕದ ತರುವಾಯ, ಯಾವುದೇ ಭೂಮಿಯ ಸಂಬಂಧದಲ್ಲಿ ಯಾವ ಗೇಣಿಯನ್ನೂ ಸೃಜಿಸತಕ್ಕದ್ದಲ್ಲ ಅಥವಾ ಮುಂದುವರೆಸತಕ್ಕದ್ದಲ್ಲ ಅಥವಾ ಯಾವುದೇ ಭೂಮಿಯನ್ನೂ ಯಾವುದೇ ಅವಧಿಗೂ ಗೇಣಿಗೆ ಕೊಡತಕ್ಕದ್ದಲ್ಲ.

[2][(2)ಉಪ–ಪ್ರಕರಣ (1)ರಲ್ಲಿ ಇರುವುದು ಯಾವುದೂ,–

(ಎ) ಸೈನಿಕನು ಅಥವಾ ನಾವಿಕನು ಸೃಜಿಸಿದ ಅಥವಾ ಮುಂದುವರೆಸಿದ ಗೇಣಿದಾರಿಕೆಗೆ, ಅವನು ಸೈನಿಕನಾಗಿ ಅಥವಾ ನಾವಿಕನಾಗಿ ಸೇವೆಯಲ್ಲಿದ್ದಾಗಲೇ ಅಥವಾ ಸೈನಿಕನಾಗುವುದಕ್ಕೂ ಅಥವಾ ನಾವಿಕನಾಗುವುದಕ್ಕೂ ಮೊದಲಿನ ಮೂರು ತಿಂಗಳ ಒಳಗೆ ಅಂಥ ಗೇಣಿಯನ್ನು ಸೃಜಿಸಿದರೆ ಅಥವಾ ಮುಂದುವರೆಸಿದ್ದರೆ ಅನ್ವಯವಾಗತಕ್ಕದ್ದಲ್ಲ.

(ಬಿ) ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1995 ಪ್ರಾರಂಭವಾದ ತರುವಾಯ, ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅಧಿಭೋಗದಾರರೆಂದು ನೋಂದಾಯಿತರಾದ ಭೂ ಮಾಲೀಕರು ಅಥವಾ ವ್ಯಕ್ತಿಗಳು ಇಪ್ಪತ್ತು ವರ್ಷಗಳಿಗೆ ಮೀರದ ಅವಧಿಗಾಗಿ ಮೀನು ಸಾಕಾಣಿಕೆಗಾಗಿ ಭೂಮಿಯನ್ನು ಬಳಸುವ ಉದ್ದೇಶಕ್ಕಾಗಿ ಪಕ್ಷಕಾರರ ನಡುವೆ ಆಗುವ ಪರಸ್ಪರ ಒಪ್ಪಂದದ ಮೂಲಕ ನಿರ್ಧರಿಸಬಹುದಾದಂಥ ಗುತ್ತಿಗೆಗಾಗಿ ಅಥವಾ ಗೇಣಿಗೆ ಕೊಟ್ಟ ಯಾವುದೇ ಭೂಮಿಗೆ ಅನ್ವಯವಾಗತಕ್ಕದ್ದಲ್ಲ ಮತ್ತು ಅಂಥ ಒಪ್ಪಂದವನ್ನು ನೋಂದಣಿ ಮಾಡತಕ್ಕದ್ದು ಮತ್ತು ಅಂಥ ನೋಂದಣಿಯ ದಿನಾಂಕದಿಂದ ಹದಿನೈದು ದಿನಗಳೊಳಗೆ ಅದರ ಪ್ರತಿಯನ್ನು ಜಿಲ್ಲಾಧಿಕಾರಿಯವರಿಗೆ ಕಳುಹಿಸತಕ್ಕದ್ದು.][2]

(3) ಉಪಪ್ರಕರಣ (2)ರ ಮೇರೆಗೆ [3][ಸೃಜಿಸಿದ][3] ಪ್ರತಿಯೊಂದು ಗುತ್ತಿಗೆಯೂ ಬರಹದಲ್ಲಿರತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ ದಿನಾಂಕ 20.10.1995 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**6. ಕಾಲ ಗತಿಸಿದ್ದರಿಂದ ಗೇಣಿದಾರಿಕೆಯು ಅಂತ್ಯವಾಗದಿರುವುದು.–** ಯಾವುದೇ ಭೂಮಿಯ ಗೇಣಿದಾರಿಕೆಯು ಒಪ್ಪಂದದ ಮೇರೆಗೆ ಆಗಲಿ ಅಥವಾ ಅನ್ಯಥಾ ಆಗಲಿ ಗೊತ್ತು ಮಾಡಿದ್ದ ಅದರ ಅವಧಿಯು ಸಮಾಪ್ತಿ ಆಗಿದೆಯೆಂಬ ಕಾರಣ ಮಾತ್ರದಿಂದಲೇ ಅಂತ್ಯವಾಗತಕ್ಕದ್ದಲ್ಲ.

**7. ಕೆಲವು ಸಂದರ್ಭಗಳಲ್ಲಿ ಸ್ವಾಧೀನತೆ ತಪ್ಪಿಸಿದ್ದ ಸ್ವಾಧೀನತೆಯನ್ನು ಗೇಣಿದಾರರಿಗೆ ಪುನಃ ಕೊಡುವುದು.–** (1) 1957ನೇ ಸೆಪ್ಟೆಂಬರ್ ಹತ್ತನೆಯ ದಿನಕ್ಕೆ ಮುಂಚೆ ಗೇಣಿದಾರನಾಗಿ [1][ಥಥಥ][1] ಯಾವ ವ್ಯಕ್ತಿಯು ಅಥವಾ ಆ ವ್ಯಕ್ತಿಯ, ಹಕ್ಕನ್ನು ಹೊಂದಿದ್ದ ಪೂರ್ವಜನು ಯಾವುದೇ ಭೂಮಿಯನ್ನು ಧಾರಣ ಮಾಡಿದ್ದರೆ ಆ ವ್ಯಕ್ತಿಯು ಅಥವಾ ಆ ವ್ಯಕ್ತಿಯ, ಹಕ್ಕನ್ನು ಹೊಂದಿರುವ ಪೂರ್ವಜನು ಮತ್ತು ಆ ದಿನಾಂಕದ ತರುವಾಯ ಮತ್ತು ಗೊತ್ತುಪಡಿಸಿದ ದಿನಕ್ಕೆ ಮುಂಚೆ ಆ ಯಾವ ವ್ಯಕ್ತಿಯನ್ನು, ಗೇಣಿದಾರಿಕೆಯನ್ನು ಬಿಟ್ಟುಕೊಡುವ ಮೂಲಕವಾಗಿಯಾಗಲೀ ಅಥವಾ ಒಕ್ಕಲೆಬ್ಬಿಸುವ ಮೂಲಕವಾಗಿಯಾಗಲೀ ಅಂಥ ಭೂಮಿಯ ಸ್ವಾಧೀನತೆಯನ್ನು ತಪ್ಪಿಸಿದ್ದರೆ, ಗೊತ್ತುಪಡಿಸಿದ ದಿನದಿಂದ [2][ಹದಿನೈದು ತಿಂಗಳೊಳಗೆ][2] ಗೊತ್ತುಪಡಿಸಿದ ಅಂಥ ದಿನದಂದು ಭೂಮಿಯನ್ನು ಕೃಷಿಯೇತರ ಬಳಕೆಗೆ ಬಳಸಿದ್ದ ಹೊರತು ತನ್ನ ಗೇಣಿದಾರಿಕೆಯನ್ನು ಪುನಃ ಪಡೆಯುವುದಕ್ಕಾಗಿ [3][ನ್ಯಾಯಾಧಿಕರಣಕ್ಕೆ][3] ಅವನು ಅರ್ಜಿ ಸಲ್ಲಿಸಬಹುದು.

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1966ರ ಅಧಿನಿಯಮ ಸಂಖ್ಯೆ 38ರ ಮೂಲಕ ದಿನಾಂಕ 29.09.1966 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ

3. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಉಪ–ಪ್ರಕರಣ (1)ರ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದ ಮೇಲೆ [1][ನ್ಯಾಯಾಧಿಕರಣ][1]ವು, ಯಾವ ಸನ್ನಿವೇಶಗಳಲ್ಲಿ ಮತ್ತು ಯಾವ ಕಾರ್ಯವಿಧಾನದ ಮೇರೆಗೆ ಅಂಥ ಸ್ವಾಧೀನವನ್ನು ತಪ್ಪಿಸಲಾಯಿತೋ ಆ ಸನ್ನಿವೇಶಗಳ ಮತ್ತು ಕಾರ್ಯವಿಧಾನದ ಬಗ್ಗೆ ವಿಚಾರಣೆ ನಡೆಸತಕ್ಕದ್ದು ಮತ್ತು ಅಂಥ ಭೂಮಿಯ ಸ್ವಾಧೀನತೆಯನ್ನು,–

(ಎ) ಮೋಸದಿಂದ, ತಪ್ಪು ನಿರೂಪಣೆ ಮಾಡಿ ಅಥವಾ ಅನುಚಿತ ಪ್ರಭಾವ ಬೀರಿ ಅಥವಾ ಇತರ ಯಾವುದೇ ರೀತಿಯ ಒತ್ತಾಯದಿಂದ ಅಥವಾ ತತ್ಕಾಲದಲ್ಲಿ ಅನ್ವಯವಾಗುವ ಕಾನೂನಿನ ಉಪಬಂಧಗಳನ್ನು ಅನ್ಯಥಾ ಉಲ್ಲಂಘಿಸಿರುವುದರಿಂದಾಗಿ ಗೇಣಿದಾರನು ಬಿಟ್ಟುಕೊಟ್ಟಿರುವುದರ ಮತ್ತು ಆ ರೀತಿಯಿಂದ ಸಮ್ಮತಿಯನ್ನು ಪಡೆದಿರುವುದರ; ಅಥವಾ

(ಬಿ) ಗೇಣಿದಾರಿಕೆಯ ಅವಧಿಯು ಮುಕ್ತಾಯವಾದುದರ; ಅಥವಾ

(ಸಿ) ನ್ಯಾಯಾಲಯಕ್ಕೆ ಹೋಗದೆಯೇ ಅಥವಾ ಕಾನೂನಿನ ಯಾವುದೇ ಉಪಬಂಧವನ್ನು ಉಲ್ಲಂಘಿಸಿ ಭೂಮಾಲೀಕನ ಅಥವಾ ಅವನ ಪರವಾಗಿ ಕಾರ್ಯನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯು ಯಾವುದೇ ಕಾರ್ಯವನ್ನು ಮಾಡಿರುವುದರ

– ಪರಿಣಾಮವಾಗಿ ತಪ್ಪಿಸಲಾಯಿತೆಂದು, [1][ನ್ಯಾಯಾಧಿಕರಣಕ್ಕೆ][1] [2][ಮನದಟ್ಟಾದರೆ][2] ಗೇಣಿದಾರನಿಗೆ ಭೂಮಿಯ ಸ್ವಾಧೀನತೆಯನ್ನು ಮತ್ತು ಅದರ ಗೇಣಿದಾರಿಕೆಯನ್ನು ಪುನಃ ಕೊಡಬೇಕೆಂದು [1][ನ್ಯಾಯಾಧಿಕರಣ][1]ವು ಆದೇಶಿಸತಕ್ಕದ್ದು. [3][ಆ ತರುವಾಯ ಅಂಥ ಭೂಮಿಯು ರಾಜ್ಯ ಸರ್ಕಾರದಲ್ಲಿ ನಿಹಿತವಾಗಿದೆ ಎಂದು ಭಾವಿಸತಕ್ಕದ್ದು ಮತ್ತು 48ಎ ಪ್ರಕರಣದ (5)ನೇ ಉಪಪ್ರಕರಣದ ಮೇರೆಗೆ, ಅಧಿಭೋಗದಾರನಾಗಿ ನೋಂದಾಯಿಸಿಕೊಳ್ಳಲು ಅವನಿಗೆ ಆದೇಶಿಸಲಾಗಿದ್ದರೆ ಹೇಗೋ ಹಾಗೆ ಅಂಥ ಗೇಣಿದಾರನಿಗೆ ಈ ಅಧಿನಿಯಮದ ಉಪಬಂಧಗಳು ಅನ್ವಯವಾಗತಕ್ಕದ್ದು:][3]

ಪರಂತು, ಭೂಮಾಲೀಕನ ಕುಟುಂಬಕ್ಕೆ ಸೇರಿರದ ಗೇಣಿದಾರನು ಸದ್ಭಾವನೆಯಿಂದ ಭೂಮಿಯನ್ನು ಗುತ್ತಿಗೆಯ ಮೇಲೆ ಧಾರಣ ಮಾಡಿದ್ದನೆಂದು ಅಥವಾ ಕಾನೂನಿನ ಯಾವುದೇ ಉಪಬಂಧಕ್ಕನುಸಾರವಾಗಿ ಗೇಣಿದಾರಿಕೆಯನ್ನು ಬಿಟ್ಟು ಕೊಟ್ಟಿರುವುದರಿಂದಾಗಿ ಅಥವಾ ಒಕ್ಕಲೆಬ್ಬಿಸಿದ್ದರಿಂದಾಗಿ, ಸ್ವಾಧೀನವು ತಪ್ಪಿಹೋಯಿತೆಂದು ಅಥವಾ ಭೂಮಾಲೀಕನಲ್ಲದ ಇತರ ವ್ಯಕ್ತಿಯು, ಭೂಮಿಯ ಸ್ವಾಧೀನಕ್ಕೆ ಕಾನೂನು ಬದ್ಧವಾಗಿ ಹಕ್ಕುಳ್ಳವನಾಗಿರುತ್ತಾನೆಂದು [1][ನ್ಯಾಯಾಧಿಕರಣಕ್ಕೆ][1] [2][ಮನದಟ್ಟಾದರೆ][2], [1][ನ್ಯಾಯಾಧಿಕರಣ][1]ವು ಭೂಮಿಯ ಸ್ವಾಧೀನವನ್ನು ಪುನಃ ಕೊಡಬೇಕೆಂದು ಆದೇಶಿಸತಕ್ಕದ್ದಲ್ಲ.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1973 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) ಉಪಪ್ರಕರಣ (2)ರ ಪರಂತುಕದಲ್ಲಿ ಉಲ್ಲೇಖಿಸಿರುವ ವ್ಯಕ್ತಿಯಾಗಿರದ ಬೇರೊಬ್ಬ ವ್ಯಕ್ತಿಯು ಗೇಣಿದಾರನಾಗಿ ಅಥವಾ ಅನ್ಯಥಾ, ಆ ಭೂಮಿಯ ಸ್ವಾಧೀನ ಹೊಂದಿರಬಹುದಾಗಿದ್ದರೂ, (1) ಮತ್ತು (2)ನೇ ಉಪ ಪ್ರಕರಣಗಳು ಪರಿಣಾಮಕಾರಿಯಾಗಿರತಕ್ಕದ್ದು ಮತ್ತು ಅಂಥ ಇತರ ವ್ಯಕ್ತಿಯು ಹಾಗೆ ಸ್ವಾಧೀನವನ್ನು ಹೊಂದಿದ್ದರೂ, ಅವನು ಒಕ್ಕಲೆಬ್ಬಿಸಿಕೊಳ್ಳುವುದಕ್ಕೆ ಗುರಿಯಾಗತಕ್ಕದ್ದು.

[1][**8. ಗೇಣಿ.–** (1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ಯಾವುದೇ ಕಾನೂನಿನಲ್ಲಿ, ರೂಢಿಯಲ್ಲಿ, ಆಚರಣೆಯಲ್ಲಿ, ಒಪ್ಪಂದದಲ್ಲಿ, ನ್ಯಾಯಾಲಯದ ಡಿಕ್ರಿಯಲ್ಲಿ ಅಥವಾ ಆದೇಶದಲ್ಲಿ ತದ್ವಿರುದ್ಧವಾದುದು ಏನೇ ಇದ್ದರೂ,–

(ಎ) ಯಾವುದೇ ಭೂಮಿಯ ಸಂಬಂಧದಲ್ಲಿ ಗೇಣಿದಾರನು ಸಂದಾಯ ಮಾಡಬೇಕಾದ ಗೇಣಿಯು ವರ್ಷಕ್ಕೊಮ್ಮೆ ಸಂದಾಯವಾಗತಕ್ಕದ್ದು, ಮತ್ತು

[2][(ಬಿ) ಅಂಥ ಗೇಣಿಯು, ಅಂಥ ಭೂಮಿಗೆ ಸಂದಾಯವಾಗಬೇಕಾದ ಭೂಕಂದಾಯದ ಮತ್ತು ನೀರು ದರ ಏನಾದರೂ ಇದ್ದರೆ, ಅವುಗಳ ಒಟ್ಟು ಮೊತ್ತದ ಹತ್ತರಷ್ಟು ಇರತಕ್ಕದ್ದು:][2]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

ಪರಂತು, 1ನೇ ಅನುಸೂಚಿಯ ಎ ಭಾಗದಲ್ಲಿ ಉಲ್ಲೇಖಿಸಿರುವ ಎ ವರ್ಗದ, ಬಿ ವರ್ಗದ ಮತ್ತು ಸಿ ವರ್ಗದ ಭೂಮಿಗಳ ಸಂದರ್ಭದಲ್ಲಿ (ಸಿ ವರ್ಗದ (ii)ನೇ ಬಾಬಿನಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳನ್ನು ಬಿಟ್ಟು) ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದ ನೀರು ದರವು ಈ ಕೆಳಗೆ ನಿರ್ದಿಷ್ಟಪಡಿಸಿರುವ ಮೊಬಲಗನ್ನು ಮೀರತಕ್ಕದ್ದಲ್ಲ:–

| | | |
|---|---|---|
| (i) ಎ ವರ್ಗದ ಭೂಮಿಗಳು | – | ಪ್ರತಿ ಎಕರೆಗೆ ಹದಿನಾರು ರೂಪಾಯಿಗಳು ಮತ್ತು ಐವತ್ತು ಪೈಸೆ: |
| (ii) ಬಿ ವರ್ಗದ ಭೂಮಿಗಳು | – | ಪ್ರತಿ ಎಕರೆಗೆ ಹನ್ನೊಂದು ರೂಪಾಯಿಗಳು: |
| (iii) ಸಿ ವರ್ಗದ ಭೂಮಿಗಳು ಆ ವರ್ಗದ (ii)ನೇ ಬಾಬಿನಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳನ್ನು ಬಿಟ್ಟು | – | ಪ್ರತಿ ಎಕರೆಗೆ ಐದು ರೂಪಾಯಿಗಳು ಮತ್ತು ಐವತ್ತು ಪೈಸೆ: |

ಮತ್ತೂ ಪರಂತು, ಯಾವುದೇ ಕರಾರಿನ ಮೇರೆಗೆ ಗೇಣಿದಾರನು ಸಂದಾಯ ಮಾಡಬೇಕಾದ ಗೇಣಿಯು (ಬಿ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಗೇಣಿಗಿಂತ ಕಡಿಮೆಯಿದ್ದರೆ, ಅಂತಹ ಗೇಣಿದಾರನು ಅಂಥ ಗೇಣಿಗಿಂತ ಹೆಚ್ಚು ಗೇಣಿಯನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದಲ್ಲ ಮತ್ತು ತಿದ್ದುಪಡಿ ಅಧಿನಿಯಮವು ಪ್ರಾರಂಭವಾಗುವ ದಿನಾಂಕಕ್ಕೆ ಮುಂಚೆ ಮಾಡಿಕೊಂಡ ಯಾವುದೇ ಕರಾರಿನ ಮೇರೆಗೆ ಅಂಥ ಕಡಿಮೆ ಗೇಣಿಯನ್ನು ವಸ್ತು ರೂಪದಲ್ಲಿ ಆ ಸಂದಾಯ ಮಾಡಬೇಕಾಗಿದ್ದರೆ, ವಸ್ತು ರೂಪದ ಆ ಗೇಣಿಯನ್ನು ನಿಯಮಿಸಿದ ರೀತಿಯಲ್ಲಿ ಅದಕ್ಕೆ ಸಮನಾದ ನಗದು ರೂಪಕ್ಕೆ ಪರಿವರ್ತಿಸಿ ಸಂದಾಯ ಮಾಡಬೇಕಾದ ಮೊಬಲಗನ್ನು ಲೆಕ್ಕ ಹಾಕತಕ್ಕದ್ದು:

ಮತ್ತೂ ಪರಂತು, ಮಲೆನಾಡು ಪ್ರದೇಶವೆಂದು ಅಧಿಸೂಚಿತವಾದ ಯಾವುದೇ ಪ್ರದೇಶದಲ್ಲಿ, ಖುಷ್ಕಿ ಭೂಮಿ ಎಂದು ನಿರ್ದಿಷ್ಟಪಡಿಸಿದ, ಆದರೆ ಮೇಯಿಸಲು ಅಥವಾ ತರಗೆಲೆಗಳನ್ನು ಸಾಗಿಸಲು ಮಾತ್ರ ಬಳಸಿದ ಭೂಮಿಗಳ ಸಂಬಂಧದಲ್ಲಿ ಗೇಣಿಯು ಅಂಥ ಭೂಮಿಗೆ ಸಂದಾಯ ಮಾಡಬೇಕಾದ ಭೂಕಂದಾಯಕ್ಕೆ ಸಮನಾದುದು ಆಗಿರತಕ್ಕದ್ದು:

[1][ಮತ್ತೂ ಪರಂತು, ಸೈನಿಕನಿಗೆ ಅಥವಾ ನಾವಿಕನಿಗೆ ಗೇಣಿದಾರನು ಸಂದಾಯ ಮಾಡಬೇಕಾದ ಗೇಣಿಯು,–

(ಎ) ಎ ವರ್ಗದ ಅಥವಾ ಬಿ ವರ್ಗದ ಭೂಮಿಯ ಸಂದರ್ಭದಲ್ಲಿ ಒಟ್ಟು ಉತ್ಪನ್ನದ ನಾಲ್ಕನೆ ಒಂದರಷ್ಟು ಅಥವಾ ಯಾವ ಅಂಥ ಉತ್ಪನ್ನದ ನಗದು ಮೌಲ್ಯವು ಯಾವುದೇ ಸಂದರ್ಭದಲ್ಲಿ ಒಂದು ಎಕರೆಗೆ ಐದು ನೂರು ರೂಪಾಯಿಗಳನ್ನು ಮೀರತಕ್ಕದ್ದಲ್ಲವೋ ಆ ಮೌಲ್ಯದಷ್ಟು; ಮತ್ತು

(ಬಿ) ಯಾವುದೇ ಇತರೆ ವರ್ಗದ ಭೂಮಿಯ ಸಂದರ್ಭದಲ್ಲಿ, ಒಟ್ಟು ಉತ್ಪನ್ನದ ಐದನೇ ಒಂದರಷ್ಟು ಯಾವ ಅಂಥ ಉತ್ಪನ್ನದ ನಗದು ಮೌಲ್ಯವು, ಯಾವುದೇ ಸಂದರ್ಭದಲ್ಲಿ ಒಂದು ಎಕರೆಗೆ ಎರಡು ನೂರ ಐವತ್ತು ರೂಪಾಯಿಗಳನ್ನು ಮೀರತಕ್ಕದಲ್ಲವೋ ಆ ಮೌಲ್ಯದಷ್ಟು

– ಅಥವಾ ಕರಾರುಗೇಣಿ ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಆಗಿರತಕ್ಕದ್ದು.

**ವಿವರಣೆ.**– ಈ ಪರಂತುಕದ ಉದ್ದೇಶಕ್ಕಾಗಿ ಪ್ರತಿಯೊಂದು ಎಕರೆಯ ಒಟ್ಟು ಉತ್ಪನ್ನವನ್ನು ಅಥವಾ ನಗದು ರೂಪದಲ್ಲಿ ಅದರ ಮೌಲ್ಯವನ್ನು ನಿಯಮಿಸಬಹುದಾದಂತೆ ನಿರ್ಧರಿಸತಕ್ಕದ್ದು.][1]][1]

1. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ವಿವರಣೆ.**– ಈ ಪ್ರಕರಣದಲ್ಲಿ **"ನೀರು ದರ"** ಎಂದರೆ, ಭೂಕಂದಾಯವನ್ನು ನಿರ್ದಿಷ್ಟಪಡಿಸುವ ಉದ್ದೇಶಕ್ಕಾಗಿ ಖುಷ್ಕಿ ಭೂಮಿಯೆಂದು ವರ್ಗೀಕರಿಸಿರುವ ಮತ್ತು ರಾಜ್ಯ ಸರ್ಕಾರದ ಸ್ವತ್ತಾಗಿರುವ ಯಾವುದೇ ಜಲ ಮೂಲದಿಂದ ನೀರಾವರಿಯಾದ ಭೂಮಿಯ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ನೀರು ದರ.

[1][**9. ಗೇಣಿಯನ್ನು ಸಂದಾಯ ಮಾಡಲಾಗಿದೆಯೆಂದು ಯಾವಾಗ ಭಾವಿಸುವುದು ಮತ್ತು ಸಂದಾಯ ಮಾಡಬೇಕಾದ ಗೇಣಿಯ ಬಗೆಗಿನ ವಿವಾದ.**– (1) ಭೂಮಾಲೀಕನು ಗೇಣಿಯನ್ನು ಸ್ವೀಕರಿಸಲು ಮತ್ತು ರಸೀದಿಯನ್ನು ಕೊಡಲು ತಪ್ಪಿಸಿಕೊಂಡಲ್ಲಿ, ಗೇಣಿದಾರನು ಗೇಣಿಯ ಮೊಬಲಗನ್ನು ಅಂಚೆ ಮನಿಯಾರ್ಡರ್ ಮೂಲಕ ಕಳುಹಿಸಿದರೆ ಅಥವಾ ತಹಸೀಲ್ದಾರನ ಬಳಿ ಠೇವಣಿ ಮಾಡಿದರೆ, ಅವನು ಗೇಣಿಯನ್ನು ಸಂದಾಯ ಮಾಡಿದ್ದಾನೆಂದು ಭಾವಿಸತಕ್ಕದ್ದು.

(2) ಸಂದಾಯ ಮಾಡಬೇಕಾದ ಗೇಣಿಯ ಬಗ್ಗೆ ಭೂಮಾಲೀಕನ ಮತ್ತು ಗೇಣಿದಾರನ ನಡುವಿನ ವಿವಾದವನ್ನು, ಭೂಮಾಲೀಕನ ಅಥವಾ ಗೇಣಿದಾರನ ಅರ್ಜಿಯ ಮೇಲೆ ತಹಶೀಲ್ದಾರನು ತೀರ್ಮಾನಿಸತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**10. ಭೂಮಾಲೀಕನ ಹಕ್ಕುಗಳು ಮತ್ತು ಹೊಣೆಗಾರಿಕೆಗಳು.**– ಯಾವುದೇ ಕಾನೂನು, ಆಚರಣೆ ಅಥವಾ ಒಪ್ಪಂದ ಅಥವಾ ನ್ಯಾಯಾಲಯದ ಡಿಕ್ರಿ ಅಥವಾ ಆದೇಶ ಏನೇ ಇದ್ದರೂ, ಆದರೆ ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಉಳಿದು, 8ನೇ ಪ್ರಕರಣದ ಮೇರೆಗೆ ಯಾವ ಭೂಮಿಯ ಸಂಬಂಧದಲ್ಲಿ ಗೇಣಿಯನ್ನು ಸಂದಾಯ ಮಾಡಬೇಕೋ ಆ ಭೂಮಿಯ ಸಂಬಂಧದಲ್ಲಿ,–

(ಎ) ಗೇಣಿದಾರನ ಸ್ವಾಧೀನದಲ್ಲಿರುವ ಭೂಮಿಯ ಸಾಗುವಳಿಯ ವೆಚ್ಚದ ಬಾಬ್ತು ಹಣವನ್ನು ಕೊಡಲು ಭೂಮಾಲೀಕನು ಹೊಣೆಗಾರನಾಗಿರತಕ್ಕದ್ದಲ್ಲ.

[1][(ಬಿ) x x x][1];

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಸಿ) ಯಾರೇ ಭೂಮಾಲೀಕನೂ ಅಥವಾ ಅವನ ಪರವಾಗಿ ಯಾರೇ ವ್ಯಕ್ತಿಯು [1][ವಸ್ತು ರೂಪದಲ್ಲಿ ಅಥವಾ][1] ಸೇವೆಯ ಅಥವಾ ದುಡಿಮೆಯ ರೂಪದಲ್ಲಿ ಗೇಣಿಯನ್ನು ವಸೂಲ್ಮಾಡತಕ್ಕದ್ದಲ್ಲ ಅಥವಾ ಪಡೆಯತಕ್ಕದ್ದಲ್ಲ.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**10ಎ. ಭೂ ಕಂದಾಯ, ಇತ್ಯಾದಿಗಳನ್ನು ಸಂದಾಯ ಮಾಡಲು ಹೊಣೆಗಾರಿಕೆ.**– ಯಾವುದೇ ಕಾನೂನು, ರೂಢಿ, ಪದ್ಧತಿ, ಒಪ್ಪಂದ, ನ್ಯಾಯಾಲಯದ ಡಿಕ್ರಿ ಅಥವಾ ಆದೇಶ ಏನೇ ಇದ್ದರೂ, ಗೇಣಿದಾರನು, ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಕ್ಕೆ ಅಥವಾ ಸ್ಥಳೀಯ ಪ್ರಾಧಿಕಾರಕ್ಕೆ ಗೇಣಿಯ ಮೇಲೆ ತಾನು ಧಾರಣ ಮಾಡಿರುವ ಭೂಮಿಗೆ ವಿಧಿಸಿದ ಭೂಕಂದಾಯವನ್ನು, ನೀರು ದರವನ್ನು ಮತ್ತು ಎಲ್ಲ ಉಪಕರಗಳನ್ನು ಅಥವಾ ಫೀಜುಗಳನ್ನು ಸಂದಾಯ ಮಾಡಲು ಜವಾಬ್ದಾರನಾಗಿರತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**11. ಈ ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸಿ ವಸೂಲು ಮಾಡಿದ ಗೇಣಿಯ ಮರುಪಾವತಿ.**– ಯಾರೇ ಭೂಮಾಲೀಕನು ಅಥವಾ ಅವನ ಪರವಾಗಿ ಯಾರೇ ವ್ಯಕ್ತಿಯು, 8ನೇ, 9ನೇ ಅಥವಾ 10ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಯಾರೇ ಗೇಣಿದಾರನಿಂದ ಗೇಣಿಯನ್ನು ವಸೂಲು ಮಾಡಿದ, ಆ ಭೂಮಾಲೀಕನು ಹಾಗೆ ವಸೂಲ್ಮಾಡಿದ ಹೆಚ್ಚಿನ ಮೊಬಲಗನ್ನು ಕೂಡಲೇ ಗೇಣಿದಾರನಿಗೆ ಮರು ಪಾವತಿ ಮಾಡತಕ್ಕದ್ದು ಮತ್ತು ಈ ಬಗ್ಗೆ [1][ತಹಸೀಲ್ದಾರ][1]ನು ನಿರ್ಧರಿಸಬಹುದಾದಷ್ಟು ಪರಿಹಾರವನ್ನು ಗೇಣಿದಾರನಿಗೆ ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದು ಮತ್ತು [1][ತಹಸೀಲ್ದಾರ][1]ನು ನಿರ್ಧರಿಸಬಹುದಾದಂತೆ [2][xxx][2] ವಸೂಲ್ಮಾಡಿದ ಹೆಚ್ಚಿನ ಮೊಬಲಗಿನ ಎರಡರಷ್ಟಕ್ಕೆ ಮೀರದ ದಂಡಕ್ಕೆ ಗುರಿಯಾಗತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**12. ಎಲ್ಲಾ ಉಪಕರ, ಇತ್ಯಾದಿಗಳ ರದ್ದಿಯಾತಿ.**– ಯಾವುದೇ ಒಪ್ಪಂದ, ಪದ್ಧತಿ ಅಥವಾ ಕಾನೂನು ಏನೇ ಇದ್ದರೂ, ಯಾರೇ ಗೇಣಿದಾರನಿಂದ, ಅವನು ಗೇಣಿದಾರನಾಗಿ ಹೊಂದಿರುವ ಯಾವುದೇ ಭೂಮಿಯ ಸಂಬಂಧದಲ್ಲಿ ಅಂಥ ಭೂಮಿಯ ಬಗ್ಗೆ ಕಾನೂನುಬದ್ಧವಾಗಿ ಬರಬೇಕಾದ ಗೇಣಿಯನ್ನು ಹೊರತುಪಡಿಸಿ, ಯಾರೇ ಭೂಮಾಲೀಕನು ಯಾವುದೇ ವರ್ಣನೆಯ ಅಥವಾ ಯಾವುದೇ ಹೆಸರಿನ ಯಾವುದೇ ಉಪಕರವನ್ನು, ದರವನ್ನು, ಪ್ರೀಮಿಯಂನ್ನು, Huk ಯನ್ನು ಅಥವಾ ಕರವನ್ನು ಅಥವಾ ಸೇವೆಯನ್ನು ವಿಧಿಸುವುದು ಕಾನೂನು ಸಮ್ಮತವಾಗಿರತಕ್ಕದ್ದಲ್ಲ.

**13. ಗೇಣಿಯ ಸಂದಾಯವನ್ನು ನಿಲ್ಲಿಸುವುದು,** [1][**ಮಾಫಿ ಮಾಡುವುದು ಅಥವಾ ಕಡಿತಗೊಳಿಸುವುದು**][1].– (1) ಯಾವುದೇ ಭೂಮಿಯ ಸಂಬಂಧದಲ್ಲಿ ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡಬೇಕಾದ ಭೂಕಂದಾಯವನ್ನು ಪೂರ್ಣವಾಗಿ ಸಂದಾಯ ಮಾಡುವುದನ್ನು ಯಾವುದೇ ಕಾರಣದಿಂದ ನಿಲ್ಲಿಸಿದಾಗ ಅಥವಾ ಮಾಫಿಮಾಡಿದಾಗ, ಭೂಮಾಲೀಕನು, ಸಂದರ್ಭಾನುಸಾರ, ಅಂಥ ಭೂಮಿಯ ಬಗ್ಗೆ ತನಗೆ ತನ್ನ ಗೇಣಿದಾರನು ಸಂದಾಯ ಮಾಡಬೇಕಾಗಿರುವ ಗೇಣಿಯನ್ನು ಸಂದಾಯ ಮಾಡುವುದನ್ನು ನಿಲ್ಲಿಸತಕ್ಕದ್ದು ಅಥವಾ ಮಾಫಿ ಮಾಡತಕ್ಕದ್ದು. ಅಂಥ ಭೂಮಿಯ ಸಂದರ್ಭದಲ್ಲಿ ಭೂಕಂದಾಯವನ್ನು, ಸಂದಾಯ ಮಾಡುವುದನ್ನು ಭಾಗಶಃ ನಿಲ್ಲಿಸಿದರೆ ಅಥವಾ ಮಾಫಿ ಮಾಡಿದರೆ, ಭೂಮಾಲೀಕನು ಅಂಥ ಭೂಮಿಯ ಬಗ್ಗೆ ಗೇಣಿದಾರನು ಸಂದಾಯ ಮಾಡಬೇಕಾಗಿರುವ ಗೇಣಿಯನ್ನು ಅದೇ ಪ್ರಮಾಣದಲ್ಲಿ ಸಂದಾಯ ಮಾಡುವುದನ್ನು ನಿಲ್ಲಿಸತಕ್ಕದ್ದು ಅಥವಾ ಮಾಫಿ ಮಾಡತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಅಂಥ ಭೂಮಿಯ ಸಂಬಂಧದಲ್ಲಿ ರಾಜ್ಯ ಸರ್ಕಾರಕ್ಕೆ ಯಾವ ಭೂಕಂದಾಯವನ್ನು ಸಂದಾಯ ಮಾಡಬೇಕಾಗಿರದಿದ್ದರೆ ಮತ್ತು ಅಂಥ ಭೂಮಿಯ ಅಕ್ಕಪಕ್ಕದಲ್ಲಿರುವ ಇತರ ಯಾವುದೇ ಭೂಮಿಯ ಸಂಬಂಧದಲ್ಲಿ ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡಬೇಕಾದ ಭೂಕಂದಾಯದ, ಪೂರ್ಣ ಅಥವಾ ಭಾಗಶಃ ಸಂದಾಯವನ್ನು ಯಾವುದೇ ಕಾರಣದಿಂದ ನಿಲ್ಲಿಸಿದ್ದರೆ ಅಥವಾ ಮಾಫಿ ಮಾಡಿದ್ದರೆ, ಡೆಪ್ಯುಟಿ ಕಮಿಷನರವರು, ರಾಜ್ಯ ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೆ ಒಳಪಟ್ಟು, (1)ನೇ ಉಪಪ್ರಕರಣದಲ್ಲಿ ಉಪಬಂಧಿಸಿರುವ ರೀತಿಯಲ್ಲಿ, ಭೂಮಾಲೀಕನಿಗೆ ಅಂಥ ಭೂಮಿಯ ಸಂಬಂಧದಲ್ಲಿ ಬರಬೇಕಾದ ಗೇಣಿಯನ್ನು ಅಥವಾ ಅದರ ಭಾಗವನ್ನು ಸಂದಾಯ ಮಾಡುವುದನ್ನು ಸಂದರ್ಭಾನುಸಾರ ನಿಲ್ಲಿಸತಕ್ಕದ್ದು ಅಥವಾ ಮಾಫಿ ಮಾಡತಕ್ಕದ್ದು.

(3) ಈ ಪ್ರಕರಣದ ಮೇರೆಗೆ ಯಾವ ಗೇಣಿಯ ಸಂದಾಯವನ್ನು ಮಾಫಿ ಮಾಡಲಾಗಿದೆಯೋ ಆ ಯಾವುದೇ ಗೇಣಿಯನ್ನು ಅಥವಾ ಯಾವ ಅವಧಿಗೆ ಅಂಥ ಗೇಣಿಯ ಸಂದಾಯವನ್ನು ನಿಲ್ಲಿಸಲಾಗಿದೆಯೋ ಆ ಅವಧಿಯಲ್ಲಿ ಅಂಥ ಗೇಣಿಯನ್ನು ಭೂ ಮಾಲೀಕನು ವಸೂಲ್ಮಾಡುವುದಕ್ಕಾಗಿ ಯಾವ ದಾವೆಯನ್ನೂ ಅಥವಾ ಇತರ ವ್ಯವಹರಣೆಯನ್ನೂ ಹೂಡತಕ್ಕದ್ದಲ್ಲ ಮತ್ತು ಸಿವಿಲ್ ನ್ಯಾಯಾಲಯದ ಅಥವಾ ಇತರ ಪ್ರಾಧಿಕಾರದ ಯಾವ ಡಿಕ್ರಿಯನ್ನು ಅಥವಾ ಆದೇಶವನ್ನು ಜಾರಿ ಮಾಡತಕ್ಕದ್ದಲ್ಲ, ಈ ಪ್ರಕರಣದ ಮೇರೆಗೆ ಗೇಣಿಯ ಸಂದಾಯವನ್ನು ಯಾವ ಅವಧಿಗೆ ನಿಲ್ಲಿಸಲಾಯಿತೋ ಆ ಅವಧಿಯನ್ನು ಅಂಥ ಗೇಣಿಯ ವಸೂಲಿಗಾಗಿ ಸಲ್ಲಿಸಿದ ಯಾವುದೇ ದಾವೆಗೆ ಅಥವಾ ವ್ಯವಹರಣೆಗೆ ನಿಯಮಿಸಿದ ಕಾಲ ಪರಿಮಿತಿ ಅವಧಿಯನ್ನು ಲೆಕ್ಕ ಹಾಕುವಾಗ ಬಿಟ್ಟುಬಿಡಕ್ಕದ್ದು.

[1][(4) x x x][1]

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ 29.7.1965 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(5) ಯಾರೇ ಭೂಮಾಲೀಕನು ಈ ಪ್ರಕರಣದಲ್ಲಿ ಉಪಬಂಧಿಸಿದಂತೆ ಗೇಣಿಯನ್ನು ಸಂದಾಯ ಮಾಡುವುದನ್ನು ನಿಲ್ಲಿಸಲು ಅಥವಾ ಮಾಫಿ ಮಾಡಲು ತಪ್ಪಿದರೆ, ಅವನು ಈ ಪ್ರಕರಣವನ್ನು ಉಲ್ಲಂಘಿಸಿ ವಸೂಲು ಮಾಡಿದ ಮೊಬಲಗನ್ನು ಗೇಣಿದಾರನಿಗೆ ಮರುಪಾವತಿ ಮಾಡಲು ಹೊಣೆಗಾರನಾಗಿರತಕ್ಕದ್ದು. ಗೇಣಿದಾರನು ಆ ಮೊಬಲಗಿನ ವಸೂಲಿಗಾಗಿ [1][ತಹಸೀಲ್ದಾರನಿಗೆ][1] ಅರ್ಜಿ ಸಲ್ಲಿಸಬಹುದು ಮತ್ತು [1][ತಹಸೀಲ್ದಾರನು][1] ವಿಚಾರಣೆಯ ತರುವಾಯ, ಮರು ಪಾವತಿಗಾಗಿ ಮತ್ತು [1][ತಹಸೀಲ್ದಾರನು][1] ಗೊತ್ತುಪಡಿಸಬಹುದಾದಂತೆ ಹಾಗೆ ವಸೂಲು ಮಾಡಿದ ಮೊಬಲಗಿಗೆ ಮೀರದ ದಂಡವನ್ನು ಸಂದಾಯ ಮಾಡುವುದಕ್ಕಾಗಿ ಆದೇಶಿಸಬಹುದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(6) [1][ತಹಸೀಲ್ದಾರನು][1] ಗೇಣಿದಾರಿಕೆಯು ಚಾಲ್ತಿಯಲ್ಲಿರುವಾಗ ಯಾವುದೇ ಕಾಲದಲ್ಲಿ ಗೇಣಿದಾರನು ಅಥವಾ ಭೂಮಾಲೀಕನು ಸಲ್ಲಿಸಿದ ಅರ್ಜಿಯ ಮೇಲೆ ವಿಚಾರಣೆ ನಡೆಸಿದ ನಂತರ,–

(ಎ) ಪ್ರವಾಹದಿಂದ ಅಥವಾ ಗೇಣಿದಾರನ ಹತೋಟಿಗೆ ಮೀರಿದ ಇತರ ಕಾರಣದಿಂದ ಭೂಮಿಯ ಫಲವತ್ತತೆಯು ಕ್ಷೀಣವಾಗುವ ಪ್ರಯುಕ್ತ ಅದು ಸಂಪೂರ್ಣವಾಗಿ ಅಥವಾ ಭಾಗಶಃ ಸಾಗುವಳಿಗೆ ಯೋಗ್ಯವಾದುದಾಗಿಲ್ಲವೆಂದು ಅಥವಾ ಬೆಳೆಗಳಿಗೆ ಹಾನಿಯುಂಟಾಗಿದೆಯೆಂದು [1][ಅವನಿಗೆ][1] ಮನದಟ್ಟಾದರೆ, ಯಾವುದೇ ವರ್ಷಕ್ಕೆ ಸಂದಾಯ ಮಾಡಬೇಕಾಗಿರುವ ಗೇಣಿಯನ್ನು ಕಡಿಮೆ ಮಾಡಬಹುದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(ಬಿ) x x x][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**14.** x x x][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**15. ಸೈನಿಕನು ಅಥವಾ ನಾವಿಕನು ಭೂಮಿಯನ್ನು ಪುನಃ ವಶಕ್ಕೆ ತೆಗೆದುಕೊಳ್ಳುವುದು.–** (1) 5ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಗೇಣಿಯನ್ನು ಸೃಜಿಸಿದ ಅಥವಾ ಮುಂದುವರೆಸಿದ ಸೈನಿಕನು ಅಥವಾ ನಾವಿಕನು, ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಅವನ ಗೇಣಿದಾರನು ರಕ್ಷಿತ ಗೇಣಿದಾರನಾಗಿರಲಿ ಅಥವಾ ಅಲ್ಲದಿರಲಿ, ಗರಿಷ್ಠ ಪರಿಮಿತಿ ವಿಸ್ತೀರ್ಣದಷ್ಟು ಭೂಮಿಯನ್ನು ಪುನಃ ವಶಕ್ಕೆ ತೆಗೆದುಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ 15ನೇ ಪ್ರಕರಣವನ್ನು ಪ್ರತ್ಯಾಯೋಜಿಸಲಾಗಿದೆ.

(2) ಸೈನಿಕನು ಅಥವಾ ನಾವಿಕನು, ತಾನೇ ಸ್ವತಃ ಸಾಗುವಳಿ ಮಾಡಲು ಭೂಮಿಯು ನಿಜವಾಗಿ ಬೇಕಾಗಿದ್ದರೆ, ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಆದರೆ ನಿಯಮಿಸಿದ ಅವಧಿಗಿಂತ ಕಡಿಮೆಯಿರದ ಅವಧಿಯೊಳಗೆ ಭೂಮಿಯ ಸ್ವಾಧೀನತೆಯನ್ನು ಒಪ್ಪಿಸಬೇಕೆಂದು ಅಗತ್ಯಪಡಿಸಿ ಗೇಣಿದಾರನಿಗೆ ನೋಟೀಸನ್ನು ಕೊಡತಕ್ಕದ್ದು.

(3) 2ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಿದ ನೋಟೀಸನ್ನು,–

(i) ಒಕ್ಕೂಟದ ಸಶಸ್ತ್ರ ಪಡೆಗಳಲ್ಲಿ ಸೇವೆಯಲ್ಲಿರುವ ಸೈನಿಕನ ಸಂದರ್ಭದಲ್ಲಿ, ಅವನನ್ನು ಸಶಸ್ತ್ರ ಪಡೆಯಿಂದ ಬಿಡುಗಡೆ ಮಾಡಿದ ಅಥವಾ ಮೀಸಲು ಪಡೆಗೆ ಕಳುಹಿಸಿದ ದಿನಾಂಕದಿಂದ [1][ಒಂದು ವರ್ಷಕ್ಕಿಂತ ತರುವಾಯದಲ್ಲದ ಯಾವುದೇ ಕಾಲದಲ್ಲಿ;][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ii) ಸೈನಿಕನ ತಂದೆ, ತಾಯಿ, ಗಂಡ–ಹೆಂಡತಿ, ಮಗು ಅಥವಾ ಮೊಮ್ಮಗುವಿನ ಸಂದರ್ಭದಲ್ಲಿ, ಅಂತಹ ಸೈನಿಕನ ಮರಣದ ದಿನಾಂಕದಿಂದ ಒಂದು ವರ್ಷದೊಳಗೆ; ಮತ್ತು

(iii) ನಾವಿಕನ ಸಂದರ್ಭದಲ್ಲಿ ಅವನು ನಾವಿಕನಾಗಿರುವುದು ನಿಂತು ಹೋದ ದಿನಾಂಕದಿಂದ ಒಂದು ವರ್ಷದೊಳಗೆ

– ಕೊಡತಕ್ಕದ್ದು.

(4) ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಭೂಮಿಯ ಸ್ವಾಧೀನವನ್ನು ಒಪ್ಪಿಸಲು ಗೇಣಿದಾರನು ತಪ್ಪಿದರೆ, ಸೈನಿಕನು ಅಥವಾ ನಾವಿಕನು, ಗೇಣಿದಾರನನ್ನು ಒಕ್ಕಲೆಬ್ಬಿಸಲು ಮತ್ತು ಭೂಮಿಯ ಸ್ವಾಧೀನವನ್ನು ಪಡೆಯಲು, ನಿಯಮಿಸಿದ ವಿವರಗಳನ್ನು ಒದಗಿಸಿ, ಭೂಮಿಯ ಹೆಚ್ಚಿನ ಭಾಗವು ಯಾವ ತಹಶೀಲ್ದಾರನ ಅಧಿಕಾರ ವ್ಯಾಪ್ತಿಯಲ್ಲಿ ಇದೆಯೋ ಆ ತಹಸೀಲ್ದಾರನಿಗೆ ಅರ್ಜಿಯನ್ನು ಸಲ್ಲಿಸಬಹುದು.

(5) ಅಂತಹ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ತಹಸೀಲ್ದಾರನು ಗೇಣಿದಾರನಿಗೆ ನೋಟೀಸನ್ನು ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಭೂಮಿಯ ಸ್ವಾಧೀನವನ್ನು ಸೈನಿಕನಿಗೆ ಅಥವಾ ನಾವಿಕನಿಗೆ ಒಪ್ಪಿಸಬೇಕೆಂದು ಅಗತ್ಯಪಡಿಸತಕ್ಕದ್ದು. [1][ಆ ಅವಧಿಯು ನಿಯಮಿಸಿದ ಅವಧಿಗಿಂತ ಕಡಿಮೆಯಿರತಕ್ಕದ್ದಲ್ಲ][1] ಮತ್ತು ಗೇಣಿದಾರನು ಅದನ್ನು ಪಾಲಿಸಲು ತಪ್ಪಿದರೆ, ತಹಸೀಲ್ದಾರನು ಗೇಣಿದಾರನನ್ನು ಶೀಘ್ರವಾಗಿ ಒಕ್ಕಲೆಬ್ಬಿಸಬಹುದು ಮತ್ತು ಸೈನಿಕನಿಗೆ ಅಥವಾ ನಾವಿಕನಿಗೆ ಭೂಮಿಯ ಸ್ವಾಧೀನವನ್ನು ಒಪ್ಪಿಸಬಹುದು.

1. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(6) ಗೇಣಿದಾರನು ಸಲ್ಲಿಸಿದ ಅರ್ಜಿಯ ಮೇಲೆ ಅಥವಾ ಅನ್ಯಥಾ ಮತ್ತು ನಿಯಮಿಸಬಹುದಾದಂಥ ವಿಚಾರಣೆಯ ತರುವಾಯ, (2)ನೇ ಉಪ ಪ್ರಕರಣದ ಮೇರೆಗೆ ಅಗತ್ಯಪಡಿಸಿದ ನೋಟೀಸನ್ನು ಕೊಟ್ಟಿಲ್ಲವೆಂದು ತಹಸೀಲ್ದಾರನಿಗೆ ಮನದಟ್ಟಾದರೆ, ಅವನು ಅಧಿಸೂಚನೆ ಮೂಲಕ, ಗೇಣಿಗೆ ಕೊಟ್ಟಿದ್ದ ಆ ಭೂಮಿಯು ಎಲ್ಲ ಪೂರ್ವಾಧಿಗಳಿಂದ ಮುಕ್ತವಾಗಿ ಆ ಅಧಿಸೂಚನೆಯಲ್ಲಿ ನಿರ್ದಿಷ್ಟ ಪಡಿಸಬಹುದಾದಂತಹ ದಿನಾಂಕದಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಕ್ಕೆ ವರ್ಗಾವಣೆ ಆಗತಕ್ಕದ್ದೆಂದು ಮತ್ತು ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದೆಂದು ಘೋಷಿಸತಕ್ಕದ್ದು. ನಿಯಮಿಸಿದ ರೀತಿಯಲ್ಲಿ ತಹಸೀಲ್ದಾರನು, ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು ಮತ್ತು ಗೇಣಿದಾರನು ಅದರ ಅಧಿಭೋಗದಾರನಾಗಿ ನೋಂದಾಯಿತನಾಗಲು ಹಕ್ಕುಳ್ಳವನಾಗಿರತಕ್ಕದ್ದು, ಈ ಬಗ್ಗೆ 45ನೇ ಪ್ರಕರಣದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 15ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**16. 17. 18.** x x x][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**19. ಪುನಃ ವಶಕ್ಕೆ ತೆಗೆದುಕೊಂಡ ಭೂಮಿಯ ವರ್ಗಾವಣೆಯ ಮೇಲೆ ನಿರ್ಬಂಧ.–** [1][(1)][1] ಇತರ ಯಾವುದೇ ಕಾನೂನಿನಲ್ಲಿ ಅಥವಾ 80ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಗೇಣಿದಾರನಿಂದ ಪುನಃ ವಶಕ್ಕೆ ತೆಗೆದುಕೊಂಡ ಯಾವ ಭೂಮಿಯೂ ಹಾಗೆ ಪುನಃ ವಶಕ್ಕೆ ತೆಗೆದುಕೊಂಡಂದಿನಿಂದ [2][ಹದಿನೈದು ವರ್ಷಗಳೊಳಗಾಗಿ][2] ಮಾರಾಟದ, [3][ದಾನದ ಅಥವಾ ವಿನಿಮಯದ ಮೂಲಕ ಅಥವಾ ಅನ್ಯಥಾ][3] ವರ್ಗಾವಣೆಯಾಗತಕ್ಕದ್ದಲ್ಲ:

ಪರಂತು, ಆ ಭೂಮಿಯನ್ನು ಪುನಃ ವಶಕ್ಕೆ ತೆಗೆದುಕೊಂಡ ಮೇಲೆ ಯಾವ ಗೇಣಿದಾರನನ್ನು ಆ ಭೂಮಿಯಿಂದ ಒಕ್ಕಲೆಬ್ಬಿಸಲಾಗಿತ್ತೋ ಆ ಗೇಣಿದಾರನಿಗೆ, [2][ತಹಸೀಲ್ದಾರ][2]ನು ನಿರ್ಧರಿಸುವ ಬೆಲೆಗೆ ಅಂಥ ಭೂಮಿಯನ್ನು ಮಾರಾಟ ಮಾಡಬಹುದು:

[4][ಮತ್ತು ಪರಂತು, [5][ಸೇವೆಯಲ್ಲಿರುವಾಗಲೇ][5] ಮೃತನಾದ/ಳಾದ ಸೈನಿಕನ/ಳ ತಂದೆ, ತಾಯಿ, ಹೆಂಡತಿ/ಗಂಡ/ಮಗು ಅಥವಾ ಮೊಮ್ಮಗು ಮತ್ತು ಅವನ ಮರಣ ಕಾಲದಲ್ಲಿ ಅಂಥ ಸೈನಿಕನ ಮೇಲೆ ಅವಲಂಬಿತರಾಗಿದ್ದ ಅವನ ತಂದೆ, ತಾಯಿ, ಹೆಂಡತಿ / ಗಂಡ / ಮಗು ಅಥವಾ ಮೊಮ್ಮಗು ಅಂಥ ಭೂಮಿಯನ್ನು ಮಾರಾಟ ಮಾಡಬಹುದು.][4]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

4. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

5. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(2) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, ಭೂಒಡೆಯನು, ಭೂಮಿಯ ಅಭಿವೃದ್ಧಿಗಾಗಿ ಅಥವಾ ಕೃಷಿ ಪದ್ಧತಿಗಳಲ್ಲಿ ಸುಧಾರಣೆ ತರುವ ಸಲುವಾಗಿ ರಾಜ್ಯ ಸರ್ಕಾರದಿಂದ, [2][ಹಣಕಾಸು ಸಂಸ್ಥೆಯಿಂದ, ಸಹಕಾರ ಭೂ ಅಭಿವೃದ್ಧಿ ಬ್ಯಾಂಕಿನಿಂದ, ಸಹಕಾರ ಸಂಘದಿಂದ][2] ಕಂಪನಿಗಳ ಅಧಿನಿಯಮ, 1956ರ 3ನೇ ಪ್ರಕರಣದಲ್ಲಿ ಪರಿಭಾಷಿಸಿರುವ ಯಾವ ಕಂಪನಿಯಲ್ಲಿ ರಾಜ್ಯ ಸರ್ಕಾರವು ಶೇಕಡಾ ಐವತ್ತೊಂದಕ್ಕೆ ಕಡಿಮೆ ಇಲ್ಲದ ಸಂದಾಯಿತ ಷೇರು ಬಂಡವಾಳವನ್ನು ಹೊಂದಿರುವುದೋ ಆ ಕಂಪನಿಯಿಂದ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಥವಾ ಅವರೆಡು ಸರ್ಕಾರಗಳ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ನಿಗಮದಿಂದ ಸಾಲ ಪಡೆಯುವುದು ಮತ್ತು ಆ ಭೂಮಿಯಲ್ಲಿಯ ತನ್ನ ಹಿತಾಸಕ್ತಿಯನ್ನು ಅಡಮಾನ ಮಾಡುವುದು ಅಥವಾ ಅದರ ಮೇಲೆ ಋಣಭಾರವನ್ನು ಸೃಜಿಸುವುದು ಕಾನೂನು ಸಮ್ಮತವಾದುದಾಗಿರತಕ್ಕದ್ದು; ಮತ್ತು ಅಂಥ ಸಾಲವನ್ನು ಯಾವ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗನುಸಾರವಾಗಿ ಮಂಜೂರು ಮಾಡಲಾಯಿತೋ ಆ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗೆ ಅನುಸಾರವಾಗಿ ಅಂಥ ಸಾಲವನ್ನು ಸಂದಾಯ ಮಾಡಲು, ಅವನು ತಪ್ಪಿದರೆ ಯಾವುದೇ ಕಾನೂನಿನಲ್ಲಿ ಉಪಬಂಧಿಸಿರುವ ಇತರ ಯಾವುದೇ ಕ್ರಮಕ್ಕೆ ಬಾಧಕವಾಗದಂತೆ ಭೂಮಿಯಲ್ಲಿಯ ಅವನ ಹಿತಾಸಕ್ತಿಗಳನ್ನು ಜಪ್ತಿ ಮಾಡಿಸುವುದು ಮತ್ತು ಮಾರಾಟ ಮಾಡಿಸುವುದು ಮತ್ತು ಅದರ ಉತ್ಪತ್ತಿಗಳನ್ನು ಅಂಥ ಸಾಲದ ಸಂದಾಯಕ್ಕೆ ಉಪಯೋಗಿಸುವುದು ಕಾನೂನು ಬದ್ಧವಾದುದಾಗಿರತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**20. ಸಾಗುವಳಿ, ಇತ್ಯಾದಿಯನ್ನು ಮಾಡಲು ತಪ್ಪುವುದು.–** (1) [2][19ನೇ ಪ್ರಕರಣಕ್ಕೆ ಒಳಪಟ್ಟು, ಸ್ವತಃ][2] ಸಾಗುವಳಿ ಮಾಡಲು ಅಥವಾ ಅದನ್ನು ಕೃಷಿಯೇತರ ಉದ್ದೇಶಗಳಿಗಾಗಿ ಬಳಸುವ ದೃಷ್ಟಿಯಿಂದ ಗೇಣಿದಾರನನ್ನು ಒಕ್ಕಲೆಬ್ಬಿಸಿ ಯಾವುದೇ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡಿರುವ ವ್ಯಕ್ತಿಯು, ಅವನು ಸ್ವಾಧೀನಕ್ಕೆ ತೆಗೆದುಕೊಂಡ ದಿನಾಂಕದಿಂದ ಒಂದು ವರ್ಷದೊಳಗೆ ಹಾಗೆ ಮಾಡಲು ತಪ್ಪಿದರೆ ಅಥವಾ ಅಂಥ ದಿನಾಂಕದಿಂದ ಮೂರು ವರ್ಷಗಳೊಳಗೆ ಹಾಗೆ ಮಾಡುವುದನ್ನು ನಿಲ್ಲಿಸಿದರೆ, ತಹಸೀಲ್ದಾರನು, ಅಂಥ ಗೇಣಿದಾರನು ಸಲ್ಲಿಸಿದ ಅರ್ಜಿಯ ಮೇಲೆ ಅಥವಾ ಅನ್ಯಥಾ, ಅಂಥ ವ್ಯಕ್ತಿಯು ಹಾಗೆ ಮಾಡಲು ತಪ್ಪಿದ್ದಾನೆಂದು ಅಥವಾ ಹಾಗೆ ಮಾಡುವುದನ್ನು ನಿಲ್ಲಿಸಿದ್ದಾನೆಂದು ಮನದಟ್ಟು ಮಾಡಿಕೊಂಡರೆ, ಅಧಿಸೂಚನೆಯ ಮೂಲಕ, ಅವನು ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ ಭೂಮಿಯು ಎಲ್ಲಾ ಪೂರ್ವಾಧಿಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರಕ್ಕೆ ವರ್ಗಾವಣೆಗೊಳ್ಳತಕ್ಕದ್ದೆಂದು ಮತ್ತು ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದೆಂದು ಘೋಷಿಸತಕ್ಕದ್ದು.

[2][(2) ಭೂಮಿಯು ಹಾಗೆ ನಿಹಿತವಾದಾಗ ಅಂಥ ಗೇಣಿದಾರನು, (1)ನೇ ಉಪ ಪ್ರಕರಣದ ಮೇರೆಗೆ ಅಧಿಸೂಚನೆಯ ದಿನಾಂಕದಿಂದ ಹನ್ನೆರಡು ತಿಂಗಳುಗಳ ಒಳಗೆ ಆ ಉದ್ದೇಶಕ್ಕಾಗಿ ಅರ್ಜಿಯನ್ನು ಸಲ್ಲಿಸಿದಲ್ಲಿ, ಅವನು ಅದರ ಅಧಿಭೋಗದಾರನಾಗಿ ನೋಂದಾಯಿತನಾಗಲು ಹಕ್ಕುಳ್ಳವನಾಗಿರತಕ್ಕದ್ದು ಮತ್ತು ಅಧ್ಯಾಯ–III ರ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಈ ಬಗ್ಗೆ ಅನ್ವಯವಾಗತಕ್ಕದ್ದು.][2]][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**21. ಭಾಗ ಮಾಡುವುದಕ್ಕೆ, ಒಳಗೇಣಿಗೆ ಕೊಡುವುದಕ್ಕೆ ಮತ್ತು ಹಸ್ತಾಂತರ ಮಾಡುವುದಕ್ಕೆ ನಿಷೇಧ.–** (1) ಗೇಣಿದಾರನು ಧಾರಣ ಮಾಡಿರುವ ಭೂಮಿಯನ್ನು ಭಾಗ ಮಾಡಿಕೊಳ್ಳುವುದು ಅಥವಾ ಅದನ್ನು ಒಳಗೇಣಿಗೆ ಕೊಡುವುದು ಅಥವಾ ಅದರಲ್ಲಿಯ ಯಾವುದೇ ಹಿತಾಸಕ್ತಿಯನ್ನು ಹಸ್ತಾಂತರಿಸುವುದು ಸಿಂಧುವಾದುದಾಗಿರತಕ್ಕದ್ದಲ್ಲ:

ಪರಂತು, ಈ ಉಪಪ್ರಕರಣದಲ್ಲಿರುವುದು ಯಾವುದೂ, ಕಾಯಂ ಗೇಣಿದಾರನ ಹಕ್ಕುಗಳು ಯಾವುವಾದರೂ ಇದ್ದರೆ, ಅವುಗಳಿಗೆ ಬಾಧಕವನ್ನುಂಟುಮಾಡತಕ್ಕದ್ದಲ್ಲ:

ಮತ್ತೂ ಪರಂತು, ಗೇಣಿದಾರನು ಮೃತಪಟ್ಟರೆ,–

(i) ಅವನು ಅವಿಭಕ್ತ ಕುಟುಂಬದವನಾಗಿದ್ದರೆ, ಸದರಿ ಕುಟುಂಬದಲ್ಲಿ ಬದುಕಿರುವ ಸದಸ್ಯರು; ಮತ್ತು

(ii) ಅವನು ಅವಿಭಕ್ತ ಕುಟುಂಬದವನಾಗಿರದಿದ್ದರೆ, ಅವನ ವಾರಸುದಾರರು

– ಗೇಣಿ ಭೂಮಿಯನ್ನು ಈ ಕೆಳಗಿನ ಷರತ್ತುಗಳಿಗೆ ಒಳಪಟ್ಟು, ಪಾಲು ಮಾಡಿಕೊಳ್ಳಲು ಮತ್ತು ಪುನಃ ಭಾಗ ಮಾಡಿಕೊಳ್ಳಲು ಹಕ್ಕುಳ್ಳವರಾಗಿರತಕ್ಕದ್ದು:–

(ಎ) ಪ್ರತಿಯೊಬ್ಬ ಪಾಲುದಾರನು ಪ್ರತ್ಯೇಕ ಗೇಣಿದಾರನಾಗಿ ತನ್ನ ಪಾಲನ್ನು ಧಾರಣ ಮಾಡತಕ್ಕದ್ದು.

(ಬಿ) ಗೇಣಿಗೆ ಕೊಟ್ಟ ಭೂಮಿಯ ಸಂಬಂಧದಲ್ಲಿ ಸಂದಾಯ ಮಾಡಬೇಕಾಗಿರುವ ಗೇಣಿಯು ಪಾಲುದಾರರಲ್ಲಿ, ಸಂದರ್ಭಾನುಸಾರ, ಅವರಿಗೆ ಹಂಚಿಕೆ ಮಾಡಿದ ಪಾಲಿಗನುಸಾರವಾಗಿ ಗೇಣಿಯು ಹಂಚಿಕೆಯಾಗತಕ್ಕದ್ದು.

(ಸಿ) ಪ್ರತಿಯೊಬ್ಬ ಪಾಲುದಾರನಿಗೆ ಹಂಚಿಕೆ ಮಾಡಿದ ವಿಸ್ತೀರ್ಣವು ಭೂಮಿಯ ಒಂದು ತುಂಡಿಗಿಂತ ಕಡಿಮೆ ಇರತಕ್ಕದ್ದಲ್ಲ.

(ಡಿ) ಅಂಥ ವಿಸ್ತೀರ್ಣವು ಒಂದು ತುಂಡಿಗಿಂತ ಕಡಿಮೆಯಿದ್ದರೆ ಪಾಲುದಾರರು ಅದರ ಆದಾಯವನ್ನು ಜಂಟಿಯಾಗಿ ಅನುಭೋಗಿಸಲು ಹಕ್ಕುಳ್ಳವರಾಗಿರತಕ್ಕದ್ದು, ಆದರೆ ಭೂಮಿಯನ್ನು ಬಾಂದು ಕಲ್ಲುಗಳ ಮೂಲಕ ಭಾಗ ಮಾಡತಕ್ಕದ್ದಲ್ಲ.

[1][(ಇ) ಪಾಲುದಾರನು ಸಂದಾಯ ಮಾಡಬೇಕಾಗಿರುವ ಗೇಣಿಯ ಹಂಚಿಕೆಯ ಸಂಬಂಧದಲ್ಲಿ ಯಾವುದೇ ಪ್ರಶ್ನೆಯು ಉದ್ಭವಿಸಿದರೆ, ಅದನ್ನು ತಹಸೀಲ್ದಾರನು ತೀರ್ಮಾನಿಸತಕ್ಕದ್ದು:

ಪರಂತು, ಯಾವುದೇ ಕಾನೂನು ಪ್ರಶ್ನೆಯು ಒಳಗೊಂಡಿದ್ದರೆ, ತಹಸೀಲ್ದಾರನು ಅದನ್ನು ನ್ಯಾಯಾಲಯಕ್ಕೆ ಉಲ್ಲೇಖಿಸತಕ್ಕದ್ದು. ಅಂಥ ಉಲ್ಲೇಖವನ್ನು ಸ್ವೀಕರಿಸಿದ ಮೇಲೆ ನ್ಯಾಯಾಲಯವು, ಸಂಬಂಧಪಟ್ಟ ಪಕ್ಷಕಾರರಿಗೆ ನೋಟೀಸು ಕೊಟ್ಟ ತರುವಾಯ, ಸಾಧ್ಯವಾದಷ್ಟು ಶೀಘ್ರವಾಗಿ ಆ ಪ್ರಶ್ನೆಯ ವಿಚಾರಣೆ ನಡೆಸತಕ್ಕದ್ದು ಮತ್ತು ಅದರ ಮೇಲೆ ತನ್ನ ನಿರ್ಣಯವನ್ನು ದಾಖಲಿಸಿ ಅದನ್ನು ತಹಸೀಲ್ದಾರನಿಗೆ ಕಳುಹಿಸತಕ್ಕದ್ದು. ಅನಂತರ ತಹಸೀಲ್ದಾರನು ಸದರಿ ನಿರ್ಣಯಕ್ಕೆ ಅನುಸಾರವಾಗಿ ತೀರ್ಮಾನವನ್ನು ಕೊಡತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(2) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, ಒಕ್ಕೂಟದ ಸಶಸ್ತ್ರ ಪಡೆಗಳಲ್ಲಿ ಸೇವೆಯಲ್ಲಿರುವ ಸೈನಿಕನು ಅಥವಾ ನಾವಿಕನು ಗೇಣಿದಾರನಾಗಿದ್ದರೆ ಅವನು ಗೇಣಿದಾರನಾಗಿ ತಾನು ಧಾರಣ ಮಾಡಿದ ಭೂಮಿಯನ್ನು ಒಳಗೇಣಿಗೆ ಕೊಡುವುದು ಕಾನೂನು ಬದ್ಧವಾಗಿರತಕ್ಕದ್ದು.

(3) ಉಪ ಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, ಗೇಣಿದಾರನು, ಭೂಮಿಯ ಅಭಿವೃದ್ಧಿಗಾಗಿ ಅಥವಾ ಕೃಷಿ ಪದ್ಧತಿಗಳಲ್ಲಿ ಸುಧಾರಣೆ ತರುವ ಸಲುವಾಗಿ ರಾಜ್ಯ ಸರ್ಕಾರದಿಂದ, [2][ಹಣಕಾಸು ಸಂಸ್ಥೆಯಿಂದ, ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕಿನಿಂದ, ಸಹಕಾರ ಸಂಘದಿಂದ][2] ಕಂಪನಿಗಳ ಅಧಿನಿಯಮ, 1956ರ 3ನೇ ಪ್ರಕರಣದಲ್ಲಿ ಪರಿಭಾಷಿಸಿರುವ ಯಾವ ಕಂಪನಿಯಲ್ಲಿ ರಾಜ್ಯ ಸರ್ಕಾರವು ಶೇಕಡ ಐವತ್ತೊಂದಕ್ಕೆ ಕಡಿಮೆಯಿಲ್ಲದ ಸಂದಾಯಿತ ಷೇರು ಬಂಡವಾಳವನ್ನು ಹೊಂದಿರುವುದೋ ಆ ಕಂಪನಿಯಿಂದ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಥವಾ ಅವರೆಡು ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ನಿಗಮದಿಂದ ಸಾಲ ಪಡೆಯುವುದು ಮತ್ತು ಭೂಮಿಯಲ್ಲಿನ ತನ್ನ ಹಿತಾಸಕ್ತಿಯನ್ನು ಅಡಮಾನ ಮಾಡುವುದು ಅಥವಾ ಅದರ ಮೇಲೆ ಋಣಭಾರವನ್ನು ಸೃಜಿಸುವುದು ಕಾನೂನು ಸಮ್ಮತವಾಗಿರತಕ್ಕದ್ದು ಮತ್ತು ಅಂಥ ಸಾಲವನ್ನು ಯಾವ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗೆ ಅನುಸಾರವಾಗಿ ಮಂಜೂರು ಮಾಡಲಾಯಿತೋ ಆ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗೆ ಅನುಸಾರವಾಗಿ ಅಂಥ ಸಾಲವನ್ನು ಸಂದಾಯ ಮಾಡಲು ತಪ್ಪಿದರೆ ಕಾನೂನಿನಲ್ಲಿ ಉಪಬಂಧಿಸಿರುವ ಇತರ ಯಾವುದೇ ಕ್ರಮಕ್ಕೆ ಬಾಧಕವಾಗದಂತೆ ಆ ಭೂಮಿಯಲ್ಲಿ ಅವನ ಹಿತಾಸಕ್ತಿಗಳನ್ನು ಜಪ್ತಿ ಮಾಡಿಸುವುದು ಮತ್ತು ಮಾರಾಟ ಮಾಡಿಸುವುದು ಮತ್ತು ಅದರ ಉತ್ಪತ್ತಿಗಳನ್ನು ಅಂಥ ಸಾಲದ ಸಂದಾಯಕ್ಕೆ ಉಪಯೋಗಿಸುವುದು ಕಾನೂನು ಬದ್ಧವಾದುದಾಗಿರತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**22. ಗೇಣಿ ಕೊಡದಿರುವುದು, ಇತ್ಯಾದಿಗಳ ನಿಮಿತ್ತ ಗೇಣಿದಾರನನ್ನು ಒಕ್ಕಲೆಬ್ಬಿಸುವುದು.–** (1) ಯಾವುದೇ ಒಪ್ಪಂದ, ಪದ್ಧತಿ, ನ್ಯಾಯಾಲಯದ ಡಿಕ್ರಿ ಅಥವಾ ಆದೇಶ ಏನೇ ಇದ್ದರು, ಅಥವಾ [1][142ನೇ ಪ್ರಕರಣದಿಂದ ನಿರಸಿತವಾದ ಯಾವುದೇ ಅಧಿನಿಯಮಿತಿಯಲ್ಲಿ ಅಥವಾ ಕಾನೂನಿನಲ್ಲಿ ಅಥವಾ ಅಂಥ ಅಧಿನಿಯಮದ ಅಥವಾ ಕಾನೂನಿನ ಪ್ರಾರಂಭಕ್ಕೆ ಮುಂಚೆ ಜಾರಿಯಲ್ಲಿದ್ದ ಇತರ ಯಾವುದೇ ಕಾನೂನಿನಲ್ಲಿ][1] ಏನೇ ಒಳಗೊಂಡಿದ್ದರೂ ಮತ್ತು [2][15][2]ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, ಗೇಣಿದಾರನಾಗಿ ಅವನು ಧಾರಣ ಮಾಡಿದ ಯಾವುದೇ ಭೂಮಿಯಿಂದ ಯಾರೇ ವ್ಯಕ್ತಿಯನ್ನು ಈ ಕೆಳಗಿನ ಕಾರಣಗಳ ಪೈಕಿ ಯಾವುದೇ ಕಾರಣದ ಮೇಲೆ ಹೊರತು, ಒಕ್ಕಲೆಬ್ಬಿಸತಕ್ಕದ್ದಲ್ಲ. ಎಂದರೆ,–

(ಎ) ಗೇಣಿದಾರನು ಸತತವಾಗಿ ಎರಡು ವರ್ಷಗಳ ಅವಧಿಯಲ್ಲಿ ಗಡುವು ದಿನಾಂಕದಂದು ಅಥವಾ ಅದಕ್ಕೂ ಮುಂಚೆ ಅಂಥ ಭೂಮಿಯ ಗೇಣಿಯನ್ನು ಸಂದಾಯ ಮಾಡಲು ತಪ್ಪಿದ್ದಾನೆ:

ಪರಂತು, ಗಡುವು ದಿನಾಂಕದ ತರುವಾಯ 3 ತಿಂಗಳೊಳಗೆ ಪ್ರತಿವರ್ಷ ಭೂ ಮಾಲೀಕನು ಆ ವರ್ಷಕ್ಕೆ ಗೇಣಿಯನ್ನು ಸಂದಾಯ ಮಾಡಲು ಗೇಣಿದಾರನು ತಪ್ಪಿದ್ದಾನೆಂದು ಲಿಖಿತದಲ್ಲಿ ನೋಟೀಸನ್ನು ನೀಡಿರಬೇಕು;

(ಬಿ) ಗೇಣಿದಾರನು ಭೂಮಿಗೆ ಖಾಯಂ ಆಗಿ ಹಾನಿಯಾಗುವಂಥ ಕಾರ್ಯವನ್ನು ಮಾಡಿದ್ದಾನೆ;

(ಸಿ) 21ನೇ ಪ್ರಕರಣವನ್ನು ಉಲ್ಲಂಘಿಸಿ ಗೇಣಿದಾರನು ಭೂಮಿಯನ್ನು ಭಾಗ ಮಾಡಿದ್ದಾನೆ, ಒಳಗೇಣಿಗೆ ಕೊಟ್ಟಿದ್ದಾನೆ ಅಥವಾ ಹಸ್ತಾಂತರಿಸಿದ್ದಾನೆ;

(ಡಿ) ಗೇಣಿದಾರನು ಭೂಮಿಯನ್ನು ಸ್ವತಃ ಸಾಗುವಳಿ ಮಾಡಲು ಸತತ ಎರಡು ವರ್ಷ ತಪ್ಪಿದ್ದಾನೆ; ಮತ್ತು

(ಇ) ಗೇಣಿದಾರನು ಕೃಷಿ ಅಲ್ಲದ ಇತರ ಉದ್ದೇಶಕ್ಕಾಗಿ ಅಂಥ ಭೂಮಿಯನ್ನು ಬಳಸಿದ್ದಾನೆ [3][xxx][3]:

ಪರಂತು, ಭೂ ಮಾಲೀಕನು, ಗೇಣಿದಾರಿಕೆಯನ್ನು ಅಂತ್ಯಗೊಳಿಸಬೇಕೆಂಬ ತನ್ನ ನಿರ್ಧಾರವನ್ನು ಮತ್ತು ಹಾಗೆ ಅಂತ್ಯಗೊಳಿಸುವುದಕ್ಕೆ ಇರುವ ಆಧಾರದ ವಿವರಗಳನ್ನು ತಿಳಿಸಿ ಮತ್ತು ಗೇಣಿದಾರನನ್ನು ಯಾವ ಉಲ್ಲಂಘನೆಗಾಗಿ ಒಕ್ಕಲೆಬ್ಬಿಸಲು ಉದ್ದೇಶಿಸಲಾಗಿದೆಯೋ ಆ ಉಲ್ಲಂಘನೆಯನ್ನು ಮೂರು ತಿಂಗಳ ಅವಧಿಯೊಳಗೆ ಸರಿಪಡಿಸಿಕೊಳ್ಳಲು ಗೇಣಿದಾರನು ತಪ್ಪಿದ್ದಾನೆಂದು ಲಿಖಿತದಲ್ಲಿ [2][ಮೂರು ತಿಂಗಳ][2] ನೋಟೀಸನ್ನು ಕೊಟ್ಟಿದ್ದ ಹೊರತು, ಯಾರೇ ಗೇಣಿದಾರನನ್ನೂ ಈ ಉಪ ಪ್ರಕರಣದ ಮೇರೆಗೆ ಒಕ್ಕಲೆಬ್ಬಿಸತಕ್ಕದ್ದಲ್ಲ:

[4][ಪರಂತುಕ xxx][4]

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

4. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**ವಿವರಣೆ.– (1)** ಗೇಣಿದಾರನು ಭೂ ಮಾಲೀಕನಿಗೆ ಸಂದಾಯ ಮಾಡಬೇಕಾದ ಯಾವುದೇ ವರ್ಷದ ಗೇಣಿಯನ್ನು ಆ ವರ್ಷ ಮುಕ್ತಾಯದ ನಂತರದ ಜೂನ್ ತಿಂಗಳ ಅಂತ್ಯದೊಳಗಾಗಿ ಸಂದಾಯ ಮಾಡದಿದ್ದರೆ, ಗೇಣಿದಾರನು ಗೇಣಿಯನ್ನು ಸಂದಾಯ ಮಾಡಲು ತಪ್ಪಿರುವನೆಂದು ಭಾವಿಸತಕ್ಕದ್ದು.

(2) ಉಪ ಪ್ರಕರಣ (1)ರಲ್ಲಿ ಇರುವುದು ಯಾವುದೂ, ಕಾಯಂ ಗೇಣಿದಾರನು ಹೊಂದಿರುವ ಯಾವುದೇ ಭೂಮಿಯ ಗೇಣಿದಾರಿಕೆಗೆ, ಅಂಥ ಗೇಣಿದಾರಿಕೆಯ ಷರತ್ತುಗಳ ಪ್ರಕಾರ ಸದರಿ ಉಪಪ್ರಕರಣದಲ್ಲಿ ತಿಳಿಸಿರುವ ಕಾರಣಗಳ ಪೈಕಿ ಯಾವುದೇ ಕಾರಣದ ಮೇಲೆ ಗೇಣಿದಾರಿಕೆಯು ಅಂತ್ಯಗೊಳಿಸಲು ಗುರಿಯಾಗಬಹುದಾಗಿದ್ದ ಹೊರತು, ಅನ್ವಯವಾಗತಕ್ಕದ್ದಲ್ಲ.

(3) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, [1][xxx][1] [2][ಒಕ್ಕೂಟದ ಸಶಸ್ತ್ರ ಪಡೆಗಳಲ್ಲಿ ಸೇವೆಯಲ್ಲಿರುವ ಸೈನಿಕನು ಅಥವಾ ನಾವಿಕ][2]ನು ಗೇಣಿದಾರನಾಗಿದ್ದು ಅವನು ಧಾರಣ ಮಾಡಿರುವ ಯಾವುದೇ ಭೂಮಿಯ ಗೇಣಿದಾರಿಕೆಯು, ಸದರಿ ಗೇಣಿದಾರನು ಅಥವಾ ಅವನ ಪರವಾಗಿ ಆ ಭೂಮಿಯನ್ನು ಒಳಗೇಣಿಗೆ ಕೊಟ್ಟಿರುವ ಕಾರಣ ಮಾತ್ರದಿಂದಲೇ ಸದರಿ ಉಪಪ್ರಕರಣದ ಮೇರೆಗೆ ಅಂತ್ಯಗೊಳಿಸಲು ಗುರಿಯಾಗತಕ್ಕದ್ದಲ್ಲ.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**23. ವ್ಯವಹರಣೆಗಳು ಇತ್ಯರ್ಥದಲ್ಲಿರುವಾಗ ಗೇಣಿಯನ್ನು ಸಂದಾಯ ಮಾಡಿದರೆ ಒಕ್ಕಲೆಬ್ಬಿಸಲು ಆದೇಶ ಮಾಡದಿರುವುದು.–** (1) 22ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಭೂಮಿಯ ಸ್ವಾಧೀನವನ್ನು ಮರಳಿ ಪಡೆಯಲು ಭೂ ಮಾಲೀಕನು ಹೂಡಿದ ಯಾವುದೇ ವ್ಯವಹರಣೆಯು ಇತ್ಯರ್ಥದಲ್ಲಿರುವಾಗ, ಗೇಣಿದಾರನು ಭೂ ಮಾಲೀಕನಿಗೆ [1][ಸತತ ಎರಡು ವರ್ಷ][1]ಗಳ ಗೇಣಿಯ ಬಾಕಿಗಳನ್ನು [2][ತಹಶೀಲ್ದಾರ][2]ನು ತೀರ್ಮಾನಿಸಿದಂತೆ ವ್ಯವಹರಣೆಗಳ ವೆಚ್ಚಗಳ ಸಹಿತ [2][ತಹಶೀಲ್ದಾರ][2]ನು ಗೊತ್ತುಪಡಿಸಬಹುದಾದಂಥ ಅವಧಿಯೊಳಗಾಗಿ ಸಂದಾಯ ಮಾಡಿದರೆ ಗೇಣಿಯನ್ನು ಸಂದಾಯ ಮಾಡಲು ತಪ್ಪಿದ ಕಾರಣದ ಮೇಲೆಯೇ ಭೂ ಮಾಲೀಕನಿಗೆ ಆ ಭೂಮಿಯ ಸ್ವಾಧೀನವನ್ನು ಮರಳಿ ಕೊಡಬೇಕೆಂದು [2][ತಹಶೀಲ್ದಾರ][2]ನು ಆದೇಶ ಮಾಡತಕ್ಕದ್ದಲ್ಲ.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) 142ನೇ ಪ್ರಕರಣದಿಂದ ಅಥವಾ ಇತರ ಯಾವುದೇ ಕಾನೂನಿನಿಂದ ನಿರಸಿತವಾದ ಯಾವುದೇ ಅಧಿನಿಯಮಿತಿಯಲ್ಲಿ ಅಥವಾ ಆ ಕಾನೂನಿನ ಉಪಬಂಧದಲ್ಲಿ ಏನೇ ಒಳಗೊಂಡಿದ್ದರೂ ಅಂಥ ನಿರಸಿತ ಅಧಿನಿಯಮದ ಅಥವಾ ಕಾನೂನಿನ ಮೇರೆಗೆ ಯಾವುದೇ ನ್ಯಾಯಾಲಯದ, ಅಧಿಕಾರಿಯ ಅಥವಾ ಪ್ರಾಧಿಕಾರಿಯ ಮುಂದೆ, ಗೇಣಿಯನ್ನು ಸಂದಾಯ ಮಾಡಲು ತಪ್ಪಿದ ಕಾರಣದ ಮೇಲೆ ಗೇಣಿದಾರನನ್ನು ಒಕ್ಕಲೆಬ್ಬಿಸುವ ಸಲುವಾಗಿ ಗೊತ್ತುಪಡಿಸಿದ ದಿನದಂದು ಇತ್ಯರ್ಥದಲ್ಲಿರುವ ಅಥವಾ ಆ ದಿನದಂದು ಅಥವಾ ಆ ದಿನದ ನಂತರ ಹೂಡಿದ ಯಾವುದೇ ವ್ಯವಹರಣೆಗಳಲ್ಲಿ, ಅಂಥ ನ್ಯಾಯಾಲಯವು, ಅಧಿಕಾರಿಯು ಅಥವಾ ಪ್ರಾಧಿಕಾರಿಯು ನಿರ್ಣಯಿಸಿದಂತೆ ವ್ಯವಹರಣೆಗಳ ವೆಚ್ಚಗಳ ಸಹಿತ ಗೇಣಿಯ ಬಾಕಿಗಳನ್ನು ಅಂಥ ನ್ಯಾಯಾಲಯವು, ಅಧಿಕಾರಿಯು ಅಥವಾ ಪ್ರಾಧಿಕಾರಿಯು ಗೊತ್ತುಪಡಿಸಬಹುದಾದ ಅವಧಿಯೊಳಗಾಗಿ ಗೇಣಿದಾರನು ಭೂ ಮಾಲೀಕನಿಗೆ ಸಂದಾಯ ಮಾಡಿದರೆ, ಅಂಥ ನ್ಯಾಯಾಲಯವು, ಅಧಿಕಾರಿಯು ಅಥವಾ ಪ್ರಾಧಿಕಾರಿಯು ಗೇಣಿದಾರನನ್ನು ಒಕ್ಕಲೆಬ್ಬಿಸಲು ಆದೇಶ ಮಾಡತಕ್ಕದ್ದಲ್ಲ.

[1][(3) ಉಪಪ್ರಕರಣ (1) ಮತ್ತು (2)ರಲ್ಲಿ ಅಥವಾ 116ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಗೇಣಿಯನ್ನು ಸಂದಾಯ ಮಾಡಲು ತಪ್ಪಿದ ಕಾರಣದ ಮೇಲೆ, ಗೇಣಿದಾರನನ್ನು ಒಕ್ಕಲೆಬ್ಬಿಸುವುದಕ್ಕೆ ಸಂಬಂಧಿಸಿದ ಯಾವುದೇ ಡಿಕ್ರಿಯನ್ನು ಅಥವಾ ಆದೇಶವನ್ನು ಆ ಡಿಕ್ರಿಯಲ್ಲಿ ಅಥವಾ ಆದೇಶದಲ್ಲಿ ನಿರ್ದಿಷ್ಟಪಡಿಸಿದ ವ್ಯವಹರಣೆಗಳ ವೆಚ್ಚಗಳ ಸಹಿತ ಸತತ ಎರಡು ವರ್ಷಗಳ ಗೇಣಿಯ ಬಾಕಿಗಳನ್ನು ಗೇಣಿದಾರನು ಭೂ ಮಾಲೀಕನಿಗೆ ಸಂದಾಯ ಮಾಡಿದರೆ, ಜಾರಿ ಮಾಡತಕ್ಕದ್ದಲ್ಲ ಮತ್ತು ಹಾಗೆ ಸಂದಾಯವಾದ ಬಳಿಕ, ಸದರಿ ಡಿಕ್ರಿಯು ಅಥವಾ ಆದೇಶವು ರದ್ದಾಗತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**24. ಗೇಣಿದಾರನ ಅಧಿಕಾರಗಳು ಪಿತ್ರಾರ್ಜಿತವಾದವುಗಳು ಆಗಿರುವುದು.–** ಗೇಣಿದಾರನು ಮರಣ ಹೊಂದಿದಲ್ಲಿ, ಅವನ ಮರಣದ ಕಾಲದಲ್ಲಿ ಯಾವ ನಿಬಂಧನೆಗಳ ಮತ್ತು ಷರತ್ತುಗಳ ಮೇಲೆ ಗೇಣಿದಾರಿಕೆಯನ್ನು ಹೊಂದಿದ್ದನೋ ಅವುಗಳ ಮೇಲೆಯೇ ಅಂಥ ಗೇಣಿದಾರನ ವಾರಸುದಾರರಿಗೆ ಗೇಣಿದಾರಿಕೆಯನ್ನು ಭೂಮಾಲೀಕನು ಮುಂದುವರಿಸಿದ್ದಾನೆಂದು ಭಾವಿಸತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**25. ಗೇಣಿದಾರನು ಭೂಮಿಯನ್ನು ಬಿಟ್ಟುಕೊಡುವುದು.–** (1) ಸೈನಿಕನ ಅಥವಾ ನಾವಿಕನ ಯಾರೇ ಗೇಣಿದಾರನು ಗೇಣಿದಾರನಾಗಿ ತಾನು ಧಾರಣ ಮಾಡಿರುವ ಯಾವುದೇ ಭೂಮಿಯನ್ನು ರಾಜ್ಯ ಸರ್ಕಾರಕ್ಕೆ ಬಿಟ್ಟು ಕೊಡಬೇಕೇ ಹೊರತು ಬೇರೆಯವರಿಗೆ ಬಿಟ್ಟುಕೊಡತಕ್ಕದ್ದಲ್ಲ:

ಪರಂತು, ಲಿಖಿತದಲ್ಲಿ ಹಾಗೆ ಬಿಟ್ಟು ಕೊಟ್ಟಿದ್ದ ಹೊರತು ಮತ್ತು ಬಿಟ್ಟು ಕೊಟ್ಟಿರುವುದನ್ನು ಗೇಣಿದಾರನು ತಹಸೀಲ್ದಾರನ ಮುಂದೆ ಒಪ್ಪಿಕೊಂಡಿದ್ದ ಹೊರತು ಮತ್ತು ಬಿಟ್ಟು ಕೊಟ್ಟಿರುವುದನ್ನು ನಿಯಮಿಸಿದ ರೀತಿಯಲ್ಲಿ ತಹಸೀಲ್ದಾರರ ಕಚೇರಿಯಲ್ಲಿ ನೋಂದಾಯಿಸಿದ್ದ ಹೊರತು, ಬಿಟ್ಟುಕೊಟ್ಟಿರುವುದು ಜಾರಿಗೆ ಬರತಕ್ಕದ್ದಲ್ಲ.

(2) ಉಪಪ್ರಕರಣ (1)ರ ಮೇರೆಗೆ ರಾಜ್ಯ ಸರ್ಕಾರವು ತನಗೆ ಬಿಟ್ಟು ಕೊಟ್ಟಿರುವ ಭೂಮಿಯ ಸಂಬಂಧದಲ್ಲಿ 8ನೇ ಪ್ರಕರಣದ ಉಪಬಂಧಗಳಿಗನುಸಾರವಾಗಿ ಲೆಕ್ಕ ಹಾಕಿದ ಗೇಣಿಯನ್ನು ಭೂ ಮಾಲೀಕನಿಗೆ ಸಂದಾಯ ಮಾಡತಕ್ಕದ್ದು.

(3) ರಾಜ್ಯ ಸರ್ಕಾರವು, ಬಿಟ್ಟು ಕೊಟ್ಟಿರುವ ಆ ಭೂಮಿಯನ್ನು ಸೈನಿಕನು ಅಥವಾ ನಾವಿಕನು ಸ್ವತಃ ಸಾಗುವಳಿ ಮಾಡುವುದಾಗಿ ಕೇಳಿಕೊಳ್ಳದಿದ್ದರೆ, ಈ ಉದ್ದೇಶಕ್ಕಾಗಿ ರಚಿಸಿದ ನಿಯಮಗಳಿಗೊಳಪಟ್ಟು ಯಾರೇ ವ್ಯಕ್ತಿಗೆ ಅದನ್ನು ಗೇಣಿಗೆ ಕೊಡಬಹುದು.

(4) ರಾಜ್ಯ ಸರ್ಕಾರವು, (3)ನೇ ಉಪಪ್ರಕರಣದ ಮೇರೆಗೆ ಭೂಮಿಯನ್ನು ಗೇಣಿಗೆ ಕೊಟ್ಟಾಗ, ಗೇಣಿದಾರನು ಆ ಭೂಮಿಗೆ ಗೇಣಿಯನ್ನು ಭೂ ಮಾಲೀಕನಿಗೆ ನೇರವಾಗಿ ಸಂದಾಯ ಮಾಡತಕ್ಕದ್ದು ಮತ್ತು ಆ ಭೂಮಿಗೆ ಗೇಣಿಯನ್ನು ಸಂದಾಯ ಮಾಡಲು (2)ನೇ ಉಪ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರಕ್ಕೆ ಇರುವ ಹೊಣೆಗಾರಿಕೆಯು ಹಾಗೆ ಗೇಣಿಗೆ ಕೊಟ್ಟ ದಿನಾಂಕದಿಂದ ಕೊನೆಗೊಳ್ಳತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**26. ಗೇಣಿದಾರನಿಗೆ ಭೂಮಿಯನ್ನು ಫಲಾನುಭವದ ಹಕ್ಕನ್ನು ಅಡಮಾನ ಮಾಡಿರುವಾಗ ಗೇಣಿದಾರಿಕೆಯನ್ನು ಸ್ಥಗಿತಗೊಳಿಸುವುದು.–** ಭೂ ಮಾಲೀಕನು ಯಾವುದೇ ಭೂಮಿಯನ್ನು, ಅದನ್ನು ಸಾಗುವಳಿ ಮಾಡುತ್ತಿರುವ ಗೇಣಿದಾರನಿಗೆ ಫಲಾನುಭವದ ಹಕ್ಕನ್ನು ಅಡಮಾನ ಮಾಡುವ ಮೂಲಕ ಅಡಮಾನ ಮಾಡಿದ್ದರೆ ಅಂಥ ಭೂಮಿಯ ಗೇಣಿದಾರಿಕೆಯು ಅಡಮಾನವು ಅಸ್ತಿತ್ವದಲ್ಲಿರುವ ಅವಧಿಯಲ್ಲಿ ಸ್ಥಗಿತವಾಗಿರತಕ್ಕದ್ದು. ಸದರಿ ಅವಧಿಯು ಮುಕ್ತಾಯವಾದ ನಂತರ, ಆ ಭೂಮಿಯನ್ನು ಯಾವ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಅದನ್ನು ಅಡಮಾನ ಮಾಡುವುದಕ್ಕೆ ಮುಂಚೆ ಅವನು ಧಾರಣ ಮಾಡಿದ್ದನೋ ಆ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಆ ಭೂಮಿಯನ್ನು ಧಾರಣ ಮಾಡುವುದನ್ನು ಮುಂದುವರಿಸುವುದು ಗೇಣಿದಾರನಿಗೆ ಕಾನೂನು ಬದ್ಧವಾಗಿರತಕ್ಕದ್ದು.

**27. ಗೇಣಿದಾರನು ನೆಟ್ಟ ಗಿಡಗಳ ಮೇಲೆ ಅವನಿಗಿರುವ ಹಕ್ಕುಗಳು.–** ಗೇಣಿದಾರನು ತನಗೆ ಗೇಣಿಗೆ ಕೊಟ್ಟ ಯಾವುದೇ ಭೂಮಿಯಲ್ಲಿ ಯಾವುದೇ ಮರಗಳನ್ನು ಬೆಳೆಸಿದ್ದರೆ ಅಥವಾ ಬೆಳೆಸಿದರೆ, ಅವನ ಗೇಣಿದಾರಿಕೆಯು ಮುಂದುವರಿಯುತ್ತಿರುವ ಅವಧಿಯಲ್ಲಿ ಅಂಥ ಮರಗಳಿಂದ ದೊರೆಯುವ ಉತ್ಪತ್ತಿಯನ್ನು ಮತ್ತು ಸೌದೆಯನ್ನು ತೆಗೆದುಕೊಳ್ಳಲು ಅವನು ಹಕ್ಕುಳ್ಳವನಾಗಿರತಕ್ಕದ್ದು ಮತ್ತು ಅವನ ಗೇಣಿದಾರಿಕೆಯು ಅಂತ್ಯಗೊಂಡ ಬಳಿಕ, ಸದರಿ ಮರಗಳಿಗೆ [1][ತಹಶೀಲ್ದಾರ][1]ನು ನಿರ್ಧರಿಸಬಹುದಾದಂಥ ಪರಿಹಾರವನ್ನು ಪಡೆಯಲು ಅವನು ಹಕ್ಕುಳ್ಳವನಾಗಿರತಕ್ಕದ್ದು:

[2][ಪರಂತುಕ, xxx][2]

[2][xxx][2] ಪರಂತು, ಗೇಣಿದಾರಿಕೆಯು ಮುಂದುವರಿಯುತ್ತಿರುವಾಗ, ಮರಗಳನ್ನು ಬೆಳಸಿರದಿದ್ದರೆ ಹೇಗೋ ಹಾಗೆ ಭೂ ಮಾಲೀಕನು ಭೂಮಿಯ ಗೇಣಿಯನ್ನು ಪಡೆಯಲು ಹೇಗೆ ಹಕ್ಕುಳ್ಳವನಾಗುತ್ತಿದ್ದನೋ ಹಾಗೆಯೇ ಗೇಣಿಯನ್ನು ಪಡೆಯಲು ಭೂ ಮಾಲೀಕನು ಹಕ್ಕುಳ್ಳವನಾಗಿರತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**[1][28. x x x][1]**

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**29. ಗೇಣಿದಾರರು ಬಾಂದು ಗುರುತುಗಳನ್ನು ಸುಸ್ಥಿತಿಯಲ್ಲಿಡಲು ಜವಾಬ್ದಾರರಾಗಿರುವುದು.–** ಭೂಮಿಗಳ ಬಾಂದು ಗುರುತುಗಳನ್ನು ಸುಸ್ಥಿತಿಯಲ್ಲಿಡುವುದಕ್ಕೆ ಸಂಬಂಧಪಟ್ಟ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಗೇಣಿದಾರನು ಧಾರಣ ಮಾಡಿರುವ ಭೂಮಿಯ ಬಾಂದು ಗುರುತುಗಳನ್ನು ಸುಸ್ಥಿತಿಯಲ್ಲಿಡುವುದಕ್ಕೆ ಚೆನ್ನಾಗಿ ದುರಸ್ತಿ ಮಾಡಿಸುವುದಕ್ಕೆ ಗೇಣಿದಾರನು ಜವಬ್ದಾರನಾಗಿರತಕ್ಕದ್ದು ಮತ್ತು ಅಂಥ ಬಾಂದು ಗುರುತುಗಳಲ್ಲಿ ಬದಲಾವಣೆ ಮಾಡಿರುವುದಕ್ಕೆ ಅಥವಾ ಅವುಗಳನ್ನು ತೆಗೆದು ಹಾಕಿರುವುದಕ್ಕೆ ಅಥವಾ ದುರಸ್ಥಿ ಮಾಡಿಸಿರುವುದಕ್ಕೆ ರೆವೆನ್ಯೂ ಅಧಿಕಾರಿಗಳು ಮಾಡಿದ ಸೇವೆಗಾಗಿ ತಗುಲಿದ ಯಾವುವೇ ಯುಕ್ತ ವೆಚ್ಚಗಳನ್ನು ಗೇಣಿದಾರನು ವಹಿಸತಕ್ಕದ್ದು.

**30. ರಕ್ಷಕ ಬದುಗಳ ದುರಸ್ತಿ.–** (1) ಯಾವುದೇ ಒಪ್ಪಂದದಲ್ಲಿ, ಪದ್ಧತಿಯಲ್ಲಿ ಅಥವಾ ರೂಢಿಯಲ್ಲಿ ತದ್ವಿರುದ್ಧವಾದುದು ಏನೇ ಇದ್ದರೂ, ಗೇಣಿದಾರನು ಧಾರಣ ಮಾಡಿರುವ ಯಾವುದೇ ಭೂಮಿಯನ್ನು ರಕ್ಷಿಸುವ ಯಾವುವೇ ಬದುಗಳನ್ನು ನಿರ್ಮಿಸುವ, ಸುಸ್ಥಿತಿಯಲ್ಲಿಡುವ ಅಥವಾ ದುರಸ್ತಿ ಮಾಡುವ ಕೆಲಸವನ್ನು ಭೂ ಮಾಲೀಕನ ಮತ್ತು ಗೇಣಿದಾರನ ನಡುವಣ ವಿವಾದದಿಂದಾಗಿ ಅಥವಾ ಇತರ ಯಾವುದೇ ಕಾರಣದಿಂದಾಗಿ ನಿರ್ಲಕ್ಷಿಸಲಾಗಿದೆಯೆಂದು ಅಸಿಸ್ಟೆಂಟ್ ಕಮೀಷನರಿಗೆ ಕಂಡು ಬಂದರೆ ಅವನು, ಲಿಖಿತ ಆದೇಶದ ಮೂಲಕ, ಆ ಆದೇಶದಲ್ಲಿ ನಿರ್ದಿಷ್ಟಪಡಿಬಹುದಾದಂಥ ವ್ಯಕ್ತಿಯು ಅವುಗಳನ್ನು ನಿರ್ಮಿಸಬೇಕೆಂದು, ಸುಸ್ಥಿತಿಯಲ್ಲಿಡಬೇಕೆಂದು ಅಥವಾ ದುರಸ್ತಿ ಮಾಡಬೇಕೆಂದು ನಿರ್ದೇಶಿಸಬಹುದು ಮತ್ತು ಅದಕ್ಕೆ ತಗುಲಿದ ಖರ್ಚುಗಳು, ಯಾವುದೇ ಒಪ್ಪಂದದ, ಪದ್ಧತಿಯ ಅಥವಾ ರೂಢಿಯ ಮೇರೆಗೆ ಬದುಗಳನ್ನು ಯಾವ ವ್ಯಕ್ತಿಯು ನಿರ್ಮಿಸಲು, ಸುಸ್ಥಿತಿಯಲ್ಲಿಡಲು ಅಥವಾ ದುರಸ್ಥಿ ಮಾಡಲು ಹೊಣೆಗಾರನಾಗಿರುವನೋ ಆ ವ್ಯಕ್ತಿಯಿಂದ ಭೂ ಕಂದಾಯದ ಬಾಕಿಯಂತೆ ವಸೂಲು ಮಾಡಬಹುದಾದುದು ಆಗಿರತಕ್ಕದ್ದು.

(2) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, ಯಾವ ಭೂಮಿಯ ರಕ್ಷಕ ಬದುಗಳನ್ನು ನಿರ್ಲಕ್ಷಿಸಲಾಗಿದೆಯೋ ಆ ರಕ್ಷಕ ಬದುಗಳನ್ನು ಆ ಭೂಮಿಯ ಗೇಣಿದಾರನು, ತನ್ನ ಸ್ವಂತ ಖರ್ಚಿನಿಂದ ಅಂಥ ಬದುಗಳನ್ನು ನಿರ್ಮಿಸುವುದು, ಸುಸ್ಥಿತಿಯಲ್ಲಿಡುವುದು ಅಥವಾ ದುರಸ್ತಿ ಮಾಡುವುದು ಕಾನೂನು ಸಮ್ಮತವಾಗಿರತಕ್ಕದ್ದು ಮತ್ತು ಹಾಗೆ ಮಾಡಿದ ಖರ್ಚನ್ನು [1][ತಹಶೀಲ್ದಾರ][1]ನಿಗೆ ಅವನು ಸಲ್ಲಿಸಿದ ಅರ್ಜಿಯ ಮೇಲೆ ಯಾವುದೇ ಒಪ್ಪಂದದ, ಪದ್ಧತಿಯ ಅಥವಾ ರೂಢಿಯ ಮೇರೆಗೆ ಭೂ ಮಾಲೀಕನಿಗೆ ಇರುವ ಹೊಣೆಗೆ ಅನುಸಾರವಾಗಿ ಗೇಣಿದಾರನಿಂದ ವಸೂಲು ಮಾಡಬಹುದಾದುದು ಆಗಿರತಕ್ಕದ್ದು. ಬದುಗಳನ್ನು ನಿರ್ಮಿಸಲು, ಸುಸ್ಥಿತಿಯಲ್ಲಿಡಲು ಅಥವಾ ದುರಸ್ತಿ ಮಾಡಲು ಗೇಣಿದಾರನಿಗೆ ತಗುಲಿದ ಖರ್ಚನ್ನು ಭೂಮಾಲೀಕನು ಸಂಪೂರ್ಣವಾಗಿ ಅಥವಾ ಭಾಗಶಃ ಸಂದಾಯ ಮಾಡಲು ಹೊಣೆಗಾರನೆಂದು ತೀರ್ಮಾನಿಸಿದ್ದ ಸಂದರ್ಭದಲ್ಲಿ, ಗೇಣಿದಾರನು ಅರ್ಜಿ ಹಾಕಿಕೊಂಡಾಗ, ಗೇಣಿದಾರನ ವ್ಯವಹರಣೆಗಳ ಖರ್ಚುಗಳೂ ಸಹ ಭೂ ಮಾಲೀಕನಿಂದ ವಸೂಲು ಮಾಡಬಹುದಾದುದು ಆಗಿರತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**31. ಫಾರ್ಮ್ ಹೌಸನ್ನು ಕಟ್ಟಿಕೊಳ್ಳಲು ಗೇಣಿದಾರನ ಹಕ್ಕು.–** ಗೇಣಿದಾರನಾಗಿ ತಾನು ಧಾರಣ ಮಾಡಿರುವ ಭೂಮಿಯಲ್ಲಿ, ಹಿಡುವಳಿಯನ್ನು ಅನುಕೂಲಕರವಾಗಿ ಅಥವಾ ಲಾಭದಾಯಕವಾಗಿ ಬಳಸಿಕೊಳ್ಳಲು ಅಥವಾ ಅಧಿಭೋಗಿಸಲು ಯುಕ್ತವಾಗಿ ಅಗತ್ಯವಿರುವ ಫಾರ್ಮ್ ಹೌಸನ್ನು ಕಟ್ಟಿಕೊಳ್ಳಲು ಗೇಣಿದಾರನು ಹಕ್ಕುಳ್ಳವನಾಗಿರತಕ್ಕದ್ದು.

**32. ಪುರೋಭಿವೃದ್ಧಿ ವಂತಿಗೆ.–** ಖಾಯಂ ಗೇಣಿದಾರನು ಧಾರಣ ಮಾಡಿರುವ ಭೂಮಿಯ ಮೇಲೆ, [1][ಕರ್ನಾಟಕ][1] ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರು ದರ ವಿಧಿಸುವಿಕೆ) ಅಧಿನಿಯಮ, 1957ರ ಉಪಬಂಧಗಳ ಮೇರೆಗೆ ಅಥವಾ ಕಾನೂನಿನ ಇತರ ಯಾವುದೇ ಉಪಬಂಧದ ಮೇರೆಗೆ ಪುರೋಭಿವೃದ್ಧಿ ವಂತಿಗೆಗಾಗಿ ಸರ್ಕಾರವು ಯಾವುದೇ ಕಾಲದಲ್ಲಿ ಯಾವುದೇ ಮೊಬಲಗನ್ನು ವಸೂಲು ಮಾಡಿದರೆ ಅಥವಾ ವಿಧಿಸಿದರೆ ಅದರ ಖಾಯಂ ಗೇಣಿದಾರನು ಅಂಥ ಮೊಬಲಗನ್ನು ಸರ್ಕಾರಕ್ಕೆ ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973 ರ ಮೂಲಕ ದಿನಾಂಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

**33. ಗೇಣಿ ರಸೀದಿಗಳು.**– (1) ತದ್ವಿರುದ್ಧವಾಗಿ ಗೇಣಿದಾರನಿಂದ ಲಿಖಿತದಲ್ಲಿ ಸುಸ್ಪಷ್ಟ ತಿಳುವಳಿಕೆ ಇಲ್ಲದಿರುವಲ್ಲಿ ಅದನ್ನು ಯಾವ ವರ್ಷದಲ್ಲಿ ಸಂದಾಯ ಮಾಡಲಾಯಿತೋ ಆ ವರ್ಷಕ್ಕೆ, ಗೇಣಿದಾರನು ಭೂಮಾಲೀಕನಿಗೆ ಮಾಡಿರುವ ಪ್ರತಿಯೊಂದು ಸಂದಾಯವನ್ನು ಅಂಥ ಗೇಣಿದಾರನಿಗೆ ಕೊಡಬೇಕಾದ ಗೇಣಿಯ ಬಾಬ್ತನ್ನು ಸಂದಾಯ ಮಾಡಲಾಗಿದೆಯೆಂದು ಭಾವಿಸತಕ್ಕದ್ದು.

(2) ಯಾವುದೇ ಭೂಮಿಯ ಸಂಬಂಧದಲ್ಲಿ ಭೂಮಾಲೀಕನು ಅಥವಾ ಅಂಥ ಭೂ ಮಾಲೀಕನ ಪರವಾಗಿ ಯಾರೇ ವ್ಯಕ್ತಿಯು ಯಾವುದೇ ಗೇಣಿಯನ್ನು ಸ್ವೀಕರಿಸಿದ್ದರೆ ಭೂ ಮಾಲೀಕನು ಅಥವಾ, ಸಂದರ್ಭಾನುಸಾರ ಅಂಥ ವ್ಯಕ್ತಿಯು ಅಂಥ ಗೇಣಿಯನ್ನು ಅವನು ಸ್ವೀಕರಿಸುವ ಕಾಲದಲ್ಲಿ, ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ರೀತಿಯಲ್ಲಿ ಅದಕ್ಕೆ ಲಿಖಿತ ರಸೀದಿಯನ್ನು ಕೊಡತಕ್ಕದ್ದು.

**34. ನ್ಯಾಯಾಲಯದ ಪ್ರೊಸಸ್ ಮೂಲಕ ಜಪ್ತಿ ಅಥವಾ ಮಾರಾಟಕ್ಕೆ ಪ್ರತಿಷೇಧ.**– ಈ ಅಧಿನಿಯಮದಲ್ಲಿ ಅಥವಾ [1][ಕರ್ನಾಟಕ][1] ಸಹಕಾರ ಸಂಘಗಳ ಅಧಿನಿಯಮ, 1959ರಲ್ಲಿ ಸ್ಪಷ್ಟವಾಗಿ ಉಪಬಂಧಿಸಿರುವುದನ್ನುಳಿದು ಗೇಣಿದಾರನು ತಾನು ಗೇಣಿದಾರನಾಗಿ ಧಾರಣ ಮಾಡಿರುವ ಯಾವುದೇ ಭೂಮಿಯಲ್ಲಿನ ಅವನ ಹಿತಾಸಕ್ತಿಯು ಸಿವಿಲ್ ನ್ಯಾಯಾಲಯದ ಡಿಕ್ರಿ ಅಥವಾ ಆದೇಶದ ಜಾರಿ ಕ್ರಮದಲ್ಲಿ ಜಪ್ತಿಗೆ, ವಶಪಡಿಸಿಕೊಳ್ಳುವುದಕ್ಕೆ ಅಥವಾ ಮಾರಾಟಕ್ಕೆ ಗುರಿಯಾಗತಕ್ಕದ್ದಲ್ಲ.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973 ರ ಮೂಲಕ ದಿನಾಂಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

**35. ವಾಸದ ಮನೆಯಿಂದ ಹೊರದೂಡುವುದಕ್ಕೆ ಪ್ರತಿಷೇಧ.**– (1) ಯಾವುದೇ ಗ್ರಾಮದಲ್ಲಿ ಗೇಣಿದಾರನು ತನ್ನ ಭೂ ಮಾಲೀಕನಿಗೆ ಸೇರಿದ ನಿವೇಶನದಲ್ಲಿನ ವಾಸದ ಮನೆಯಲ್ಲಿ ವಾಸವಾಗಿದ್ದರೆ, ಅಂಥ ಗೇಣಿದಾರನನ್ನು,–

(ಎ) ಆ ವಾಸದ ಮನೆಯು ಅಂಥ ಗೇಣಿದಾರನ ಅಥವಾ [1][ಹಕ್ಕುಳ್ಳ ಅವನ ಪೂರ್ವಜರ ಪೈಕಿ ಯಾರೇ ಪೂರ್ವಜನ][1] ವೆಚ್ಚದಲ್ಲಿ ಕಟ್ಟಿದ್ದಲ್ಲವೆಂದು ಭೂಮಾಲೀಕನು ರುಜುವಾತು ಪಡಿಸಿದ ಹೊರತು; ಮತ್ತು

(ಬಿ) ಅಂಥ ಗೇಣಿದಾರನು ತಾನು ಅಂಥ ನಿವೇಶನದ ಬಳಕೆ ಮತ್ತು ವಾಸಕ್ಕಾಗಿ ಏನಾದರೂ ಗೇಣಿಯನ್ನು ಸಂದಾಯ ಮಾಡುತ್ತಿದ್ದರೆ, ಆ ಗೇಣಿಯನ್ನು ಸಂದಾಯ ಮಾಡಲು [1][ಸತತವಾಗಿ ಮೂರು ವರ್ಷಗಳವರೆಗೆ ತಪ್ಪಿದ್ದ][1] ಹೊರತು

– ಅಂಥ ವಾಸದ ಮನೆಯಿಂದ (ಆ ವಾಸದ ಮನೆಯ ಸಾಮಗ್ರಿ ಸಹಿತ ಮತ್ತು ಆ ನಿವೇಶನದಿಂದ ಮತ್ತು ಅದಕ್ಕೆ ನಿಕಟವಾಗಿ ಲಗತ್ತಾಗಿರುವ ಭೂಮಿಯಿಂದ) ಹೊರದೂಡತಕ್ಕದ್ದಲ್ಲ.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಉಪಪ್ರಕರಣ (1)ರ ಉಪಬಂಧಗಳು ಕೃಷಿ ಉದ್ದೇಶಗಳಿಗಾಗಿ ಬಳಸಲಾದ ಯಾವ ಭೂಮಿಯಿಂದ [1][15ನೇ ಪ್ರಕರಣದ ಅಥವಾ 22ನೇ ಪ್ರಕರಣದ][1] ಮೇರೆಗೆ ಗೇಣಿದಾರನನ್ನು ಹೊರದೂಡಲಾಯಿತೋ ಆ ಭೂಮಿಯಲ್ಲಿರುವ ವಾಸದ ಮನೆಗೆ ಅನ್ವಯವಾಗತಕ್ಕದ್ದಲ್ಲ.

1. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**36. ವಾಸದ ಮನೆಯನ್ನು ಯಾವ ನಿವೇಶನದ ಮೇಲೆ ಕಟ್ಟಲಾಗಿದೆಯೋ ಆ ನಿವೇಶನವನ್ನು ಗೇಣಿದಾರನಿಗೆ ಮಾರುವುದು.**– (1) 35ನೇ ಪ್ರಕರಣದಲ್ಲಿ ಉಲ್ಲೇಖಿತವಾದ ನಿವೇಶನವು ಯಾವ ಭೂ ಮಾಲೀಕನಿಗೆ ಸೇರಿದೆಯೋ ಆ ಭೂ ಮಾಲೀಕನು ಅಂಥ ನಿವೇಶನವನ್ನು ಮಾರಲು ಇಚ್ಛಿಸಿದರೆ, ಯಾವ ಗೇಣಿದಾರನ ಅಥವಾ ಹಕ್ಕುಳ್ಳ ಅವನ ಪೂರ್ವಜರ ಪೈಕಿ ಯಾರೇ ಪೂರ್ವಜನ ವೆಚ್ಚದಲ್ಲಿ ವಾಸದ ಮನೆಯನ್ನು ಕಟ್ಟಲಾಗಿದೆಯೋ ಆ ಗೇಣಿದಾರನಿಗೆ ಮಾತ್ರ ಮಾರತಕ್ಕದ್ದು.

(2) ಅಂತಹ ನಿವೇಶನಕ್ಕೆ ಗೇಣಿದಾರನು ಸಂದಾಯ ಮಾಡಬೇಕಾದ ಬೆಲೆಯು ಅದಕ್ಕೆ ಸಂದಾಯ ಮಾಡಬೇಕಾದ ಭೂ ಕಂದಾಯದ ಹತ್ತು ಪಟ್ಟಿಗೆ ಸಮನಾದ ಮೊಬಲಗು ಆಗಿರತಕ್ಕದ್ದು ಮತ್ತು ಅಂಥ ನಿವೇಶನಕ್ಕೆ ಭೂ ಕಂದಾಯದ ನಿರ್ಧರಣೆಯಾಗಿರದಿದ್ದರೆ, ಅದನ್ನು ಕೃಷಿ ಉದ್ದೇಶಗಳಿಗಾಗಿ ಬಳಸಲಾಗದಿದ್ದರೆ ನಿರ್ಧರಿಸಬಹುದಾಗಿದ್ದ ಭೂಕಂದಾಯದ ಹತ್ತು ಪಟ್ಟಿಗೆ ಸಮನಾದ ಮೊಬಲಗು ಆಗಿರತಕ್ಕದ್ದು.

(3) ಈ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಮಾಡಿದ ಯಾವುದೇ ಮಾರಾಟವು ಅನೂರ್ಜಿತವಾಗತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**37. ನಿವೇಶನವನ್ನು ಕೊಳ್ಳಲು ಗೇಣಿದಾರನ ಹಕ್ಕು.**– (1) 35ನೇ ಪ್ರಕರಣದಲ್ಲಿ ಉಲ್ಲೇಖಿಸಿದ ಗೇಣಿದಾರನು, ವಾಸದ ಮನೆಯನ್ನು ಯಾವ ನಿವೇಶನದ ಮೇಲೆ ಕಟ್ಟಲಾಗಿದೆಯೋ ಆ ನಿವೇಶನವನ್ನು ಕೊಳ್ಳಲು ಉದ್ದೇಶಿಸಿದರೆ, ಆತನು ಆ ಬಗ್ಗೆ ಭೂ ಮಾಲೀಕನಿಗೆ ಲಿಖಿತದಲ್ಲಿ ನೋಟೀಸು ಕೊಡತಕ್ಕದ್ದು.

[1][(2) ಭೂ ಮಾಲೀಕನು ಆ ಪ್ರಸ್ತಾವನೆಯನ್ನು ಒಪ್ಪಲು ಮತ್ತು ಆ ದಿನಾಂಕದಿಂದ ಮೂರು ತಿಂಗಳೊಳಗೆ ಕ್ರಯ ಪತ್ರವನ್ನು ಬರೆದುಕೊಡಲು ನಿರಾಕರಿಸಿದರೆ ಅಥವಾ ತಪ್ಪಿದರೆ, ಗೇಣಿದಾರನು ತಹಸೀಲ್ದಾರನಿಗೆ ಅರ್ಜಿ ಸಲ್ಲಿಸಬಹುದು ಮತ್ತು ತಹಸೀಲ್ದಾರನು ಲಿಖಿತ ಆದೇಶದ ಮೂಲಕ ಆ ಆದೇಶದ ದಿನಾಂಕದಿಂದ ತೊಂಬತ್ತು ದಿನಗಳೊಳಗೆ ಮಾರಾಟದ ಬೆಲೆಯನ್ನು ತನ್ನ ಬಳಿ ಠೇವಣಿ ಇಡಬೇಕೆಂದು ಗೇಣಿದಾರನಿಗೆ ಅಗತ್ಯಪಡಿಸತಕ್ಕದ್ದು. ಅಂಥ ಠೇವಣಿಯನ್ನು ಇಟ್ಟಾಗ ನಿವೇಶನವು ಗೇಣಿದಾರನಿಗೆ ವರ್ಗಾವಣೆಯಾಗಿರುವುದಾಗಿ ಭಾವಿಸತಕ್ಕದ್ದು ಮತ್ತು ನಿಯಮಿಸಿದ ಫೀಜನ್ನು ಸಂದಾಯ ಮಾಡಿದ ಮೇಲೆ ತಹಸೀಲ್ದಾರನು, ನಿಯಮಿಸಿದ ನಮೂನೆಯಲ್ಲಿ ಗೇಣಿದಾರನಿಗೆ ಪ್ರಮಾಣ ಪತ್ರವನ್ನು ಕೊಡತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**38. ಕೃಷಿ ಕಾರ್ಮಿಕರು, ಇತ್ಯಾದಿಯವರ ವಾಸದ ಮನೆಗಳು.**– (1) (ಎ) ಯಾವುದೇ ಗ್ರಾಮದಲ್ಲಿ, ಕೃಷಿ ಕಾರ್ಮಿಕನು ತನಗೆ ಸೇರಿಲ್ಲದ ಜಮೀನಿನಲ್ಲಿರುವ, ವಾಸದ ಮನೆಯಲ್ಲಿ ಸಾಮಾನ್ಯವಾಗಿ ವಾಸಿಸುತ್ತಿದ್ದರೆ ಆಗ ಯಾವುದೇ ಇತರ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ ಆದರೆ (2)ನೇ ಮತ್ತು (3)ನೇ ಉಪಪ್ರಕರಣಗಳಿಗೊಳಪಟ್ಟು ಅಂಥ ಮನೆಯು ಅದರ ನಿವೇಶನದೊಂದಿಗೆ ಮತ್ತು ಆ ಮನೆಗೆ ನಿಕಟವಾಗಿ ಲಗತ್ತಾಗಿರುವ ಮತ್ತು ಅದರ ಅನುಭೋಗಕ್ಕೆ ಅಗತ್ಯವಾದ [2][xxx][2] ಜಮೀನು 1978ರ ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮವು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಂದು ಎಲ್ಲ ಪೂರ್ವಾಧಿಗಳಿಂದ ಮುಕ್ತವಾಗಿ ಸರ್ಕಾರದಲ್ಲಿ ನಿರುಪಾಧಿಕವಾಗಿ ನಿಹಿತವಾಗತಕ್ಕದ್ದು, ಮತ್ತು ಕೃಷಿ ಕಾರ್ಮಿಕನು ಅದರ ಒಡೆಯನಾಗಿ ನೋಂದಾಯಿತನಾಗಲು ಹಕ್ಕುಳ್ಳವನಾಗಿರತಕ್ಕದ್ದು.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**ವಿವರಣೆ.**– (ಎ) ಈ ಖಂಡದ ಉದ್ದೇಶಕ್ಕಾಗಿ, ಯಾವ ವಾಸದ ಮನೆಯು ಒಡೆಯನ ಮನೆಯ ಭಾಗವಾಗಿರುವುದೋ ಆ ವಾಸದ ಮನೆಯಲ್ಲಿ ಅಥವಾ ಅಂಥ ಜಮೀನಿನಲ್ಲಿನ ತಾತ್ಕಾಲಿಕ ವಾಸದ ಮನೆಯಲ್ಲಿ ವಾಸಿಸುವ, ಕೃಷಿ ಕಾರ್ಮಿಕನು ಆ ಮನೆಯಲ್ಲಿ ಸಾಮಾನ್ಯವಾಗಿ ವಾಸಿಸುತ್ತಿದ್ದಾನೆಂದು ಪರಿಗಣಿಸತಕ್ಕದ್ದಲ್ಲ.

(ಬಿ) ಖಂಡ (ಎ) ಮೇರೆಗೆ ಒಡೆಯನಾಗಿ ನೋಂದಾಯಿತನಾಗಲು ಹಕ್ಕುಳ್ಳ ಪ್ರತಿಯೊಬ್ಬ ಕೃಷಿ ಕಾರ್ಮಿಕನು, [1][[2][1983ರ ಮಾರ್ಚ್][2] 31ನೇ ದಿನಾಂಕದಂದು ಅಥವಾ ಅದಕ್ಕೂ ಮುಂಚೆ][1] ನಿಯಮಿಸಿದ ನಮೂನೆಯಲ್ಲಿ ಮತ್ತು ರೀತಿಯಲ್ಲಿ ನ್ಯಾಯಾಧಿಕರಣಕ್ಕೆ ಅರ್ಜಿಯನ್ನು ಸಲ್ಲಿಸಬಹುದು ಮತ್ತು ನ್ಯಾಯಾಧಿಕರಣವು 48ಎ ಪ್ರಕರಣದಲ್ಲಿ ಅಥವಾ ಅದರ ಮೇರೆಗೆ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವಿಚಾರಣೆ ನಡೆಸಿದ ತರುವಾಯ, ಯಾವ ವಾಸದ ಮನೆ ಮತ್ತು ಜಮೀನಿಗೆ ಸಂಬಂಧಿಸಿದಂತೆ ಒಡೆಯನೆಂದು ನೋಂದಾಯಿತನಾಗಲು ಹಕ್ಕುಳ್ಳವನಾಗಿರುವನೋ ಆ ವ್ಯಕ್ತಿಯನ್ನು, ಆ ವ್ಯಕ್ತಿಯು ಯಾವ ಆ ವಾಸದ ಮನೆ ಮತ್ತು ಜಮೀನಿಗೆ ಸಂಬಂಧಿಸಿದಂತೆ ನೋಂದಾಯಿತನಾಗಲು ಹಕ್ಕುಳ್ಳವನಾಗಿದ್ದಾನೋ ಆ ವಾಸದ ಮನೆಯನ್ನು ಮತ್ತು ಜಮೀನನ್ನು ಮತ್ತು ನಿಯಮಿಸಬಹುದಾದ ಇತರ ವಿಷಯಗಳನ್ನು ಆದೇಶದ ಮೂಲಕ ನಿರ್ಧರಿಸತಕ್ಕದ್ದು ಮತ್ತು ಆ ಆದೇಶದ ಒಂದು ಪ್ರತಿಯನ್ನು ತಹಸೀಲ್ದಾರನಿಗೆ ಕಳುಹಿಸತಕ್ಕದ್ದು.

1. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1983ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಸಿ) ಖಂಡ (ಬಿ) ಮೇರೆಗೆ ಮಾಡಿದ ಆದೇಶವು ತಲುಪಿದ ಮೇಲೆ 47ನೇ ಪ್ರಕರಣದ (1) ನೇ ಮತ್ತು (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ಭೂ ಒಡೆಯನು ಅಂಥ ಜಮೀನಿನಲ್ಲಿಯ ಅವನ ಹಕ್ಕುಗಳು ಅಂತ್ಯಗೊಂಡಿದ್ದಕ್ಕಾಗಿ ಪಡೆಯಲು ಹಕ್ಕುಳ್ಳ ಮೊಬಲಗನ್ನು ತಹಸೀಲ್ದಾರರು ನಿರ್ಧರಿಸತಕ್ಕದ್ದು. ಹಾಗೆ ನಿರ್ಧರಿಸಿದ ಮೊಬಲಗನ್ನು ಕೃಷಿ ಕಾರ್ಮಿಕನು ಸರ್ಕಾರಕ್ಕೆ ಸಂದಾಯ ಮಾಡಿದ ಮೇಲೆ ತಹಸೀಲ್ದಾರನು ಅಂಥ ಕೃಷಿ ಕಾರ್ಮಿಕನಿಗೆ ಅಂಥ ವಾಸದ ಮನೆಗೆ ಮತ್ತು ಜಮೀನಿಗೆ ಸಂಬಂಧಿಸಿದಂತೆ ವಿಸ್ತೀರ್ಣವನ್ನು ಮತ್ತು ನಿಯಮಿಸಬಹುದಾದಂಥ ಇತರೆ ವಿವರಗಳನ್ನು ಮತ್ತು ಅವನು ಅದರ ಒಡೆಯನಾಗಿ ನೋಂದಾಯಿತನಾಗಿರುವುದನ್ನು ನಿರ್ದಿಷ್ಟಪಡಿಸಿರುವ ಪ್ರಮಾಣ ಪತ್ರವನ್ನು ಕೃಷಿ ಕಾರ್ಮಿಕನಿಗೆ ತಹಸೀಲ್ದಾರನು ಕೊಡತಕ್ಕದ್ದು. ಪ್ರಮಾಣ ಪತ್ರದ ಒಂದು ಪ್ರತಿಯನ್ನು ತಹಸೀಲ್ದಾರನು ಸಬ್–ರಿಜಿಸ್ಟ್ರಾರನಿಗೆ ಕಳುಹಿಸತಕ್ಕದ್ದು. ಅದನ್ನು ಅವನು ನೋಂದಣಿ ಅಧಿನಿಯಮ, 1908ರಲ್ಲಿ (1908ರ ಕೇಂದ್ರ ಅಧಿನಿಯಮ 16) ಏನೇ ಒಳಗೊಂಡಿದ್ದರೂ ಅದನ್ನು ನೋಂದಾಯಿಸತಕ್ಕದ್ದು. ಕೃಷಿ ಕಾರ್ಮಿಕನು ಸಂದಾಯ ಮಾಡಿದ ಮೊಬಲಗನ್ನು ಭೂ ಒಡೆಯನಿಗೆ ನಗದಾಗಿ ಒಂದೇ ಮೊತ್ತದಲ್ಲಿ ಸಂದಾಯ ಮಾಡತಕ್ಕದ್ದು.

(2) ವಾಸದ ಮನೆಯನ್ನು ಸ್ವಂತ ಬಳಕೆಗಾಗಿ ಅಥವಾ ಇತರೆ ಯಾವುದೇ ಉದ್ದೇಶಕ್ಕಾಗಿ ಭೂ ಒಡೆಯನಿಗೆ ನಿಜವಾಗಿಯೂ ಬೇಕಾಗಿದ್ದರೆ ಅಥವಾ ವಾಸದ ಮನೆಯು ಕೃಷಿ ಕಾರ್ಮಿಕನಿಗೆ ಅನಾನುಕೂಲವಾಗುವಂತಹ ಸ್ಥಳದಲ್ಲಿ ಇದೆ ಎಂದು ಭೂ ಒಡೆಯನು ಭಾವಿಸಿದರೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ತನಗೆ ಸೇರಿದ ಹೊಸ ನಿವೇಶನಕ್ಕೆ ಸ್ಥಳಾಂತರ ಆಗುವಂತೆ ಕೃಷಿ ಕಾರ್ಮಿಕನನ್ನು ಅಗತ್ಯಪಡಿಸಬಹುದು ಎಂದರೆ:–

(i) ಕೃಷಿ ಕಾರ್ಮಿಕನು ವಾಸದ ಮನೆಯನ್ನು ಕಟ್ಟಿದ್ದರೆ ಒಡೆಯನು ಅದರ ಬೆಲೆಯನ್ನು ಕೃಷಿ ಕಾರ್ಮಿಕನಿಗೆ ಸಂದಾಯ ಮಾಡತಕ್ಕದ್ದು;

(ii) ಹೊಸ ನಿವೇಶನವು ವಾಸದ ಮನೆಯನ್ನು ಕಟ್ಟಲು ಯೋಗ್ಯವಾದುದಾಗಿರತಕ್ಕದ್ದು ಮತ್ತು ಈಗಿರುವ ವಾಸದ ಮನೆಯಿಂದ ಒಂದು ಕಿಲೋಮೀಟರ್ ಅಂತರದೊಳಗಿರತಕ್ಕದ್ದು;

(iii) ಹೊಸ ನಿವೇಶನದ ವಿಸ್ತೀರ್ಣವು ಆ ನಿವೇಶನಕ್ಕೆ ನಿಕಟವಾಗಿ ಜಮೀನಿಗೆ ಲಗತ್ತಾಗಿರುವ ಮತ್ತು ಅದರ ಅನುಭೋಗಕ್ಕೆ ಅವಶ್ಯಕವಾದ ಜಮೀನನ್ನು ಒಳಗೊಂಡಂತೆ ವಾಸದ ಮನೆಯ ವಿಸ್ತೀರ್ಣಕ್ಕಿಂತ ಕಡಿಮೆಯಾಗಿರತಕ್ಕದ್ದಲ್ಲ; ಮತ್ತು

(iv) ಒಡೆಯನು ಹೊಸ ನಿವೇಶನದ ಒಡೆತನವನ್ನು ಮತ್ತು ಸ್ವಾಧೀನತೆಯನ್ನು ಕೃಷಿ ಕಾರ್ಮಿಕನಿಗೆ ವರ್ಗಾಯಿಸತಕ್ಕದ್ದು ಮತ್ತು ಹೊಸ ನಿವೇಶನಕ್ಕೆ ಸ್ಥಳಾಂತರ ಆಗಲು ತಗುಲಿದ ಯುಕ್ತ ಖರ್ಚನ್ನು ಅವನಿಗೆ ಸಂದಾಯ ಮಾಡತಕ್ಕದ್ದು.

(3) (ಎ) ಕೃಷಿ ಕಾರ್ಮಿಕನು (2)ನೇ ಉಪಪ್ರಕರಣದ ಮೇರೆಗೆ ಹೊಸ ನಿವೇಶನಕ್ಕೆ ಸ್ಥಳಾಂತರ ಆಗುವಂತೆ ಜಮೀನಿನ ಒಡೆಯನು ಮಾಡಿದ ಕೋರಿಕೆಯನ್ನು ಪಾಲಿಸದಿದ್ದರೆ, ಅಂಥ ಒಡೆಯನು ಹಾಗೆ ತಾನು ಮಾಡಿದ ಕೋರಿಕೆಯ ಪಾಲನೆ ಆಗುವಂತೆ ಮಾಡಲು ನ್ಯಾಯಾಧಿಕರಣಕ್ಕೆ ಅರ್ಜಿಯನ್ನು ಸಲ್ಲಿಸಬಹುದು:

ಪರಂತು (1)ನೇ ಉಪಪ್ರಕರಣದ (ಬಿ) ಖಂಡದ ಮೇರೆಗೆ ಆದೇಶವನ್ನು ಮಾಡಿದ ತರುವಾಯ ಮತ್ತು ಕೃಷಿ ಕಾರ್ಮಿಕನಿಗೆ ರಿಜಿಸ್ಟರ್ ಅಂಚೆ ಮೂಲಕ ಒಂದು ತಿಂಗಳ ನೋಟೀಸನ್ನು ಕೊಡದೆಯೇ ಅಂಥ ಯಾವ ಅರ್ಜಿಯನ್ನು ಸಲ್ಲಿಸತಕ್ಕದ್ದಲ್ಲ.

(ಬಿ) ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು, ನ್ಯಾಯಾಧಿಕರಣವು ಅದು ಸೂಕ್ತವೆಂದು ಭಾವಿಸುವಂಥ ವಿಚಾರಣೆ ನಡೆಸಿದ ತರುವಾಯ ಮತ್ತು ಅರ್ಜಿದಾರನು (2)ನೇ ಉಪಪ್ರಕರಣದಲ್ಲಿ ಹೇಳಿದ ಎಲ್ಲಾ ಷರತ್ತುಗಳನ್ನು ಪಾಲಿಸಿದ್ದಾನೆಂದು ಅದಕ್ಕೆ ಮನದಟ್ಟಾದರೆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕಕ್ಕೆ ಮುಂಚೆ ಹೊಸ ನಿವೇಶನಕ್ಕೆ ಸ್ಥಳಾಂತರಿಸಲು ಕೃಷಿ ಕಾರ್ಮಿಕನನ್ನು ಅಗತ್ಯಪಡಿಸುವ ಆದೇಶವನ್ನು ಮಾಡಬಹುದು.

(ಸಿ) ಕೃಷಿ ಕಾರ್ಮಿಕನು (ಬಿ) ಖಂಡದ ಮೇರೆಗಿನ ಆದೇಶದಲ್ಲಿ ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮುಂಚೆ ಹೊಸ ನಿವೇಶನಕ್ಕೆ ಸ್ಥಳಾಂತರ ಆಗದಿದ್ದರೆ ನ್ಯಾಯಾಧಿಕರಣವು ಕೃಷಿ ಕಾರ್ಮಿಕನನ್ನು ವಾಸದ ಮನೆಯಿಂದ ಹೊರಹಾಕಿಸತಕ್ಕದ್ದು.

(ಡಿ) (1)ನೇ ಉಪಪ್ರಕರಣದ ಮೇರೆಗೆ ಅನುಮತಿಸಿದ ಕಾಲದೊಳಗೆ ಅರ್ಜಿಯನ್ನು ಸಲ್ಲಿಸದಿದ್ದರೆ ಒಡೆಯನಾಗಿ ನೋಂದಾಯಿತನಾಗುವ ಕೃಷಿ ಕಾರ್ಮಿಕನ ಹಕ್ಕು ಪರಿಣಾಮಕಾರಿಯಾದುದು ಆಗಿರತಕ್ಕದ್ದಲ್ಲ ಮತ್ತು ವಾಸದ ಮನೆಯು ಮತ್ತು ಜಮೀನು ರಾಜ್ಯ ಸರ್ಕಾರದಲ್ಲಿ ನಿಹಿತವಾಗಿಲ್ಲವೆಂದು ಭಾವಿಸತಕ್ಕದ್ದು.

(4) 61ನೇ ಪ್ರಕರಣದ ಉಪಬಂಧಗಳು ಕೃಷಿ ಕಾರ್ಮಿಕನಿಗೆ ಈ ಪ್ರಕರಣದ ಮೇರೆಗೆ ಮಂಜೂರಾದ ವಾಸದ ಮನೆಗೆ ಅಥವಾ ನಿವೇಶನಕ್ಕೆ ಯಾವ ಭೂಮಿಗೆ ಸಂಬಂಧಿಸಿದಂತೆ ಗೇಣಿದಾರನು ಅಧಿಭೋಗದಾರನಾಗಿ ನೋಂದಾಯಿತನಾಗಿರುವನೋ ಆ ಜಮೀನಿಗೆ ಸಂಬಂಧಿಸಿದಂತೆ ಅವು ಅನ್ವಯವಾಗುವಂತೆಯೇ ಅನ್ವಯವಾಗತಕ್ಕದ್ದು.][1]

1. 1979 ರ ಅಧಿನಿಯಮ ಸಂಖ್ಯೆ 1ರ ಮೂಲಕ 1.1.1979ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**39. ಭೂಮಿಯನ್ನು ಕೊಂಡುಕೊಳ್ಳಲು ಪ್ರಥಮಾವಕಾಶ.–** (1) ಗೇಣಿದಾರನು ಧಾರಣ ಮಾಡಿದ ಭೂಮಿಯನ್ನು ಭೂ ಮಾಲೀಕನು ಯಾವುದೇ ಕಾಲದಲ್ಲಿ ಮಾರಲು ಉದ್ದೇಶಿಸಿದರೆ ಆತನು ತನ್ನ ಈ ಉದ್ದೇಶದ ಬಗ್ಗೆ ಅಂಥ ಗೇಣಿದಾರನಿಗೆ ಲಿಖಿತ ನೋಟೀಸನ್ನು ಕೊಡತಕ್ಕದ್ದು ಮತ್ತು ಭೂಮಿಯು ಗೇಣಿದಾರನಿಗೆ ಬೇಕಿದ್ದರೆ ಆತನಿಗೇ ಮಾರುವುದಾಗಿ ತಿಳಿಸತಕ್ಕದ್ದು, ಗೇಣಿದಾರನು ಭೂಮಿಯನ್ನು ಕೊಳ್ಳಲು ಉದ್ದೇಶಿಸಿದ ಸಂದರ್ಭದಲ್ಲಿ ತಾನು ಕೊಳ್ಳಲು ಸಿದ್ಧನಿರುವುದಾಗಿ ಲಿಖಿತದಲ್ಲಿ ಅಂಥ ನೋಟಿಸು ತಲುಪಿದ ದಿನಾಂಕದಿಂದ ಎರಡು ತಿಂಗಳೊಳಗಾಗಿ ತಿಳಿಸತಕ್ಕದ್ದು.

(2) ಭೂಮಿಗೆ ಸಂದಾಯ ಮಾಡಬೇಕಾದ ಯುಕ್ತ ಬೆಲೆಯ ಬಗ್ಗೆ ವಿವಾದವೇನಾದರೂ ಇದ್ದರೆ, ಭೂ ಮಾಲೀಕನು ಅಥವಾ ಗೇಣಿದಾರನು [1][ತಹಶೀಲ್ದಾರ][1]ನಿಗೆ ಯುಕ್ತ ಬೆಲೆಯನ್ನು ನಿರ್ಧರಿಸಲು ಲಿಖಿತದಲ್ಲಿ ಅರ್ಜಿ ಸಲ್ಲಿಸಬಹುದು; ಮತ್ತು [1][ತಹಶೀಲ್ದಾರ][1]ನು ಇನ್ನೊಬ್ಬ ಪಕ್ಷಕಾರನಿಗೆ ಮತ್ತು ಭೂಮಿಯಲ್ಲಿ ಹಿತಾಸಕ್ತಿಯುಳ್ಳ ಇತರ ಎಲ್ಲ ವ್ಯಕ್ತಿಗಳಿಗೆ ನೋಟೀಸನ್ನು ಕೊಟ್ಟ ತರುವಾಯ ಸೂಕ್ತವೆಂದು ತಾನು ಯೋಚಿಸುವಂಥ ವಿಚಾರಣೆ ನಡೆಸಿದ ತರುವಾಯ ಆ ಭೂಮಿಯ ಯುಕ್ತ ಬೆಲೆಯನ್ನು ನಿಗದಿ ಮಾಡತಕ್ಕದ್ದು ಆ ಬೆಲೆಯು, ಅರ್ಜಿಯನ್ನು ಯಾವ ದಿನಾಂಕದಂದು ಸಲ್ಲಿಸಲಾಯಿತೋ ಆ ದಿನಾಂಕದಿಂದ ನಿಕಟ ಪೂರ್ವದ ಹತ್ತು ವರ್ಷಗಳ ಅವಧಿಯಲ್ಲಿ ಆ ಸ್ಥಳದಲ್ಲಿ ಅದೇ ಬಗೆಯ ಭೂಮಿಗಳಿಗೆ ಇದ್ದ ಸರಾಸರಿ ಬೆಲೆಯಾಗಿರತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಉಪಪ್ರಕರಣ (2)ರ ಮೇರೆಗೆ ನಿರ್ಧರಿಸಿದ ಬೆಲೆಯ ಮೊಬಲಗನ್ನು ಗೇಣಿದಾರನು ನಿಯಮಿಸಬಹುದಾದ ಅವಧಿಯೊಳಗಾಗಿ [1][ತಹಸೀಲ್ದಾರ][1]ನಲ್ಲಿ ಠೇವಣಿ ಇಡತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(4) ಯುಕ್ತ ಬೆಲೆಯ ಪೂರ್ಣ ಮೊಬಲಗನ್ನು ಠೇವಣಿ ಇಟ್ಟ ಮೇಲೆ ತಹಸೀಲ್ದಾರನು ಗೇಣಿದಾರನಿಗೆ, ಅವನು ಆ ಭೂಮಿಯ ಖರೀದಿದಾರನೆಂದು ಘೋಷಿಸಿರುವ ಪ್ರಮಾಣ ಪತ್ರವನ್ನು ನಿಯಮಿಸಿದ ನಮೂನೆಯಲ್ಲಿ ನೀಡತಕ್ಕದ್ದು, ಠೇವಣಿ ಇಟ್ಟ ಯುಕ್ತ ಬೆಲೆಯ ಮೊಬಲಗನ್ನು ಭೂ ಮಾಲೀಕನಿಗೆ ಸಂದಾಯ ಮಾಡತಕ್ಕದ್ದೆಂದೂ ಸಹ [1][ತಹಸೀಲ್ದಾರ][1]ನು ನಿರ್ದೇಶಿಸತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(5) ಉಪ ಪ್ರಕರಣ (1)ರ ಮೇರೆಗೆ ಭೂ ಮಾಲೀಕನು ಕೊಟ್ಟ ನೋಟಿಸಿಗೆ ಪ್ರತಿಯಾಗಿ ಗೇಣಿದಾರನು ಭೂಮಿಯನ್ನು ಕೊಳ್ಳುವ ತನ್ನ ಹಕ್ಕನ್ನು ಚಲಾಯಿಸದಿದ್ದರೆ ಅಥವಾ (3)ನೇ ಉಪ ಪ್ರಕರಣದ ಮೇರೆಗೆ ಅಗತ್ಯಪಡಿಸಿರುವಂತೆ ಬೆಲೆಯ ಮೊಬಲಗನ್ನು ಠೇವಣಿ ಇಡಲು ತಪ್ಪಿದರೆ, ಅಂಥ ಗೇಣಿದಾರನು ಭೂಮಿಯನ್ನು ಕೊಳ್ಳುವ ತನ್ನ ಅಧಿಕಾರವನ್ನು ಕಳೆದುಕೊಳ್ಳತಕ್ಕದ್ದು ಮತ್ತು ಭೂಮಾಲೀಕನು ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಅಂಥ ಭೂಮಿಯನ್ನು ಇತರ ಯಾರೇ ವ್ಯಕ್ತಿಗೆ ಮಾರಲು ಹಕ್ಕುಳ್ಳವನಾಗಿರತಕ್ಕದ್ದು.

(6) ಈ ಪ್ರಕರಣದ ಮೇರೆಗೆ ಯಾವುದೇ ಭೂಮಿಯನ್ನು ಕೊಳ್ಳುವ ಹಕ್ಕನ್ನು ಕಳೆದುಕೊಂಡದ್ದರಿಂದಲೇ ಗೇಣಿದಾರನಿಗೆ ಅಂಥ ಭೂಮಿಯಲ್ಲಿರುವ ಇತರ ಹಕ್ಕುಗಳಿಗೆ ಬಾಧಕ ಆಗತಕ್ಕದ್ದಲ್ಲ.

**40. ಗೇಣಿದಾರನು ಮಾಡಿದ ಅಭಿವೃದ್ಧಿಗಾಗಿ ಪರಿಹಾರ.–** (1) ಗೇಣಿದಾರನು ತಾನು ಧಾರಣ ಮಾಡಿರುವ ಭೂಮಿಯನ್ನು ಅಭಿವೃದ್ಧಿಗೊಳಿಸಿದ್ದರೆ, ಈ ಅಧಿನಿಯಮದ ಉಪಬಂಧಗಳ ಮೇರೆಗೆ ಆತನ ಗೇಣಿದಾರಿಕೆಯನ್ನು ಮುಕ್ತಾಯಗೊಳಿಸಿದ್ದರೆ ಅಂಥ ಅಭಿವೃದ್ಧಿಗಾಗಿ ಪರಿಹಾರವನ್ನು ಪಡೆಯಲು ಅವನು ಹಕ್ಕುಳ್ಳವನಾಗಿರತಕ್ಕದ್ದು. ಪರಿಹಾರದ ಮೊಬಲಗನ್ನು ನಿರ್ಧರಿಸುವುದಕ್ಕಾಗಿ ಗೇಣಿದಾರನು ನಿಯಮಿಸಿದ ನಮೂನೆಯಲ್ಲಿ [1][ತಹಸೀಲ್ದಾರ][1]ನಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಉಪಪ್ರಕರಣ (1)ರ ಮೇರೆಗೆ ಗೇಣಿದಾರನು ಯಾವ ಪರಿಹಾರವನ್ನು ಪಡೆಯಲು ಹಕ್ಕುಳ್ಳವನಾಗಿರುವನೋ ಆ ಪರಿಹಾರವು ಅವನ ಗೇಣಿದಾರಿಕೆಯು ಮುಕ್ತಾಯಗೊಂಡ ಕಾಲದಲ್ಲಿ ಇದ್ದ ಅಂಥ ಅಭಿವೃದ್ಧಿಯ ಅಂದಾಜು ಮೌಲ್ಯದಷ್ಟಾಗಿರತಕ್ಕದ್ದು. ಅಂಥ ಮೌಲ್ಯವನ್ನು ಅಂದಾಜು ಮಾಡುವಾಗ,–

(ಎ) ಆ ಅಭಿವೃದ್ಧಿಯಿಂದ ಭೂಮಿಯ ಮೌಲ್ಯವು ಎಷ್ಟು ಹೆಚ್ಚಿದೆಯೋ ಆ ಮೊಬಲಗನ್ನು;

(ಬಿ) ಆ ಅಭಿವೃದ್ಧಿಯ ಪ್ರಸ್ತುತ ಸ್ಥಿತಿಯನ್ನು ಮತ್ತು ಅದರಿಂದಾಗಿರುವ ಪರಿಣಾಮವು ಎಷ್ಟು ಕಾಲಾವಧಿಯವರೆಗೆ ಇರಬಹುದಾಗಿದೆಯೋ ಆ ಕಾಲಾವಧಿಯನ್ನು;

(ಸಿ) ಆ ಅಭಿವೃದ್ಧಿಯನ್ನು ಮಾಡಲು ಗೇಣಿದಾರನು ಮಾಡಿದ ದುಡಿಮೆಯನ್ನು ಅಥವಾ ಖರ್ಚು ಮಾಡಿದ ಹಣವನ್ನು; ಮತ್ತು

(ಡಿ) ಸ್ಥಿರಜೋಡಣೆಗಳು ಒಳಗೊಂಡಂತೆ ಅಭಿವೃದ್ಧಿಯ ಪ್ರತಿಫಲವಾಗಿ ಭೂ ಮಾಲೀಕನು ಗೇಣಿಯಲ್ಲಿ, ಗೇಣಿದಾರನಿಗೆ ಕೊಟ್ಟ ಯಾವುದೇ ರಿಯಾಯಿತಿಯನ್ನು ಅಥವಾ ಗೇಣಿ ಮಾಫಿ ಮಾಡಿರುವುದನ್ನು ಅಥವಾ ಒದಗಿಸಿದ ಇತರ ಅನುಕೂಲವನ್ನು

– ಗಣನೆಗೆ ತೆಗೆದುಕೊಳ್ಳತಕ್ಕದ್ದು.

[1][(3) ಅಂಥ ಭೂಮಿಯು ಗೇಣಿದಾರನು ಸೃಜಿಸಿದ ಮತ್ತು ಕಾನೂನುಬದ್ಧವಾಗಿ ಅಸ್ತಿತ್ವದಲ್ಲಿರುವ ಅಡಮಾನಕ್ಕೆ ಅಥವಾ ಇತರ ಋಣ ಭಾರಕ್ಕೆ ಒಳಪಟ್ಟಿದ್ದರೆ, ಪರಿಹಾರದ ಮೊಬಲಗನ್ನು ಅಂಥ ಅಡಮಾನದ ಅಥವಾ ಋಣ ಭಾರದ ವಿಮೋಚನೆಗಾಗಿ ಮೊದಲು ವಿನಿಯೋಗಿಸತಕ್ಕದ್ದು ಮತ್ತು ಪರಿಹಾರದ ಮೊಬಲಗಿನಲ್ಲಿ ಏನಾದರು ಉಳಿದಿದ್ದರೆ ಅದನ್ನು ಗೇಣಿದಾರನಿಗೆ ಸಂದಾಯ ಮಾಡತಕ್ಕದ್ದು. ಅಡಮಾನ ಪಡೆದವರಿಗೆ ಅಥವಾ ಇತರ ಋಣ ಭಾರಗಳ ಧಾರಕರಿಗೆ ಆಯಾಯ ಅಡಮಾನಗಳ ಮತ್ತು ಇತರ ಋಣ ಭಾರಗಳ ಆದ್ಯತೆಯ ಪ್ರಕಾರ ಹಣ ಸಂದಾಯ ಮಾಡತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**41. ಸ್ವಾಧೀನಕ್ಕೆ ತೆಗೆದುಕೊಳ್ಳಲು ಕಾರ್ಯವಿಧಾನ.–** (1) ಈ ಅಧಿನಿಯಮದ ಉಪಬಂಧಗಳ ಪೈಕಿ ಯಾವುದೇ ಉಪಬಂಧದ ಮೇರೆಗೆ ಅಥವಾ (2)ನೇ ಉಪ ಪ್ರಕರಣವನ್ನು ಉಲ್ಲಂಘಿಸಿ ಒಕ್ಕಲೆಬ್ಬಿಸಿದ ಪರಿಣಾಮವಾಗಿ ಯಾವುದೇ ಭೂಮಿಯ ಅಥವಾ ವಾಸದ ಮನೆಯ ಅಥವಾ ನಿವೇಶನದ ಸ್ವಾಧೀನವನ್ನು ಪಡೆಯಲು ಹಕ್ಕುಳ್ಳ ಗೇಣಿದಾರನು ಅಥವಾ ಕೃಷಿ ಕಾರ್ಮಿಕನು [1][xxx][1] ಅಂಥ ಸ್ವಾಧೀನಕ್ಕಾಗಿ ಲಿಖಿತದಲ್ಲಿ [2][ತಹಶೀಲ್ದಾರ][2]ನಿಗೆ ಅರ್ಜಿಸಲ್ಲಿಸಬಹುದು. ಅರ್ಜಿಯನ್ನು ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಸಂದರ್ಭಾನುಸಾರ, ಗೇಣಿದಾರನಿಗೆ, ಕೃಷಿಕಾರ್ಮಿಕನಿಗೆ [1][xxx][1] ಭೂಮಿಯ, ವಾಸದ ಮನೆಯ ಅಥವಾ ನಿವೇಶನದ ಸ್ವಾಧೀನವನ್ನು ಪಡೆಯಲು ಹಕ್ಕು ಯಾವ ದಿನಾಂಕದಿಂದ ಪ್ರಾಪ್ತವಾಗಿದೆಯೆಂದು ಭಾವಿಸಲಾಗಿದೆಯೋ ಆ ದಿನಾಂಕದಿಂದ ಎರಡು ವರ್ಷಗಳ ಅವಧಿಯೊಳಗಾಗಿ ಸಲ್ಲಿಸತಕ್ಕದ್ದು.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, ಯಾರೇ ಭೂ ಮಾಲೀಕನು ಗೇಣಿದಾರನು ಧಾರಣ ಮಾಡಿರುವ ಯಾವುದೇ ಭೂಮಿಯ, ವಾಸದ ಮನೆಯ ಅಥವಾ ನಿವೇಶನದ ಸ್ವಾಧೀನವನ್ನು [1][ತಹಸೀಲ್ದಾರ][1]ನ ಆದೇಶದ ಮೇರೆಗಲ್ಲದೆ ಪಡೆದುಕೊಳ್ಳತಕ್ಕದ್ದಲ್ಲ. ಅಂಥ ಆದೇಶವನ್ನು ಪಡೆಯಲು ಆತನು ನಿಯಮಿಸಿದ ನಮೂನೆಯಲ್ಲಿ ಮತ್ತು ಸಂದರ್ಭಾನುಸಾರ ಭೂಮಿಯ, ವಾಸದ ಮನೆಯ ಅಥವಾ ನಿವೇಶನದ ಸ್ವಾಧೀನವನ್ನು ಪಡೆಯಲು ಹಕ್ಕು ಆತನಿಗೆ ಯಾವ ದಿನಾಂಕದಿಂದ ಪ್ರಾಪ್ತವಾಗಿದೆಯೆಂದು ಭಾವಿಸಲಾಗಿದೆಯೋ ಆ ದಿನಾಂಕದಿಂದ ಎರಡು ವರ್ಷಗಳ ಅವಧಿಯೊಳಗಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಉಪಪ್ರಕರಣ (1)ರ ಅಥವಾ (2)ರ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದ ಮೇಲೆ [1][ತಹಸೀಲ್ದಾರ][1]ನು ವಿಚಾರಣೆ ನಡೆಸಿದ ತರುವಾಯ, ಆ ಅರ್ಜಿಯ ಮೇಲೆ ಸೂಕ್ತವೆಂದು ತಾನು ಭಾವಿಸುವಂಥ ಆದೇಶವನ್ನು ಹೊರಡಿಸತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(4) ಸಂದರ್ಭಾನುಸಾರ, (1)ನೇ ಅಥವಾ (2)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಹೊರತು ಯಾವುದೇ ಭೂಮಿಯನ್ನು, ವಾಸದ ಮನೆಯನ್ನು ಅಥವಾ ನಿವೇಶನವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವ ಯಾರೇ ವ್ಯಕ್ತಿಯು [1][ತಹಸೀಲ್ದಾರ][1]ನು ನಿರ್ದೇಶಿಸಬಹುದಾದಂಥ ಖರ್ಚುಗಳನ್ನು ಸಂದಾಯ ಮಾಡುವುದರ ಜೊತೆಗೆ ಭೂಮಿಯಲ್ಲಿ ಯಾವುದಾದರೂ ಫಸಲು ಬೆಳೆದಿದ್ದರೆ ಅದರ ಮುಟ್ಟುಗೋಲಿಗೂ ಮತ್ತು 125ನೇ ಪ್ರಕರಣದಲ್ಲಿ ನಿಯಮಿಸಿದ ದಂಡಕ್ಕೂ ಗುರಿಯಾಗತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**42. ಗೇಣಿ ವಸೂಲಿ ಕಾರ್ಯವಿಧಾನ.–** (1) ಯಾವುದೇ ಒಪ್ಪಂದದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಗೇಣಿದಾರನು ಸಂದಾಯ ಮಾಡಬೇಕಾಗಿರುವ ಯಾವುದೇ ಗೇಣಿಯ ವಸೂಲಿಗಾಗಿ ಈ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಹೊರತು ಯಾವುದೇ ನ್ಯಾಯಾಲಯದಲ್ಲಿ ಅಥವಾ ಇತರ ಯಾರೇ ಪ್ರಾಧಿಕಾರಿಯ ಮುಂದೆ ಯಾವುದೇ ದಾವೆಯನ್ನು ಅಥವಾ ಇತರ ವ್ಯವಹರಣೆಯನ್ನು ಹೂಡಲು ಅವಕಾಶ ನೀಡತಕ್ಕದ್ದಲ್ಲ.

(2) ಗೇಣಿದಾರನಿಂದ ಗೇಣಿ ಸಂದಾಯವಾಗಬೇಕೆಂದು ಕ್ಲೇಮು ಮಾಡುವ ಭೂ ಮಾಲೀಕನು ತನಗೆ ಬರಬೇಕಾದ ಗೇಣಿಯನ್ನು ಸಂದಾಯ ಮಾಡುವಂತೆ ಗೇಣಿದಾರನಿಗೆ ನಿರ್ದೇಶಿಸಿ ಆದೇಶ ಹೊರಡಿಸುವುದಕ್ಕಾಗಿ [1][ತಹಸೀಲ್ದಾರ][1]ನಿಗೆ ನಿಯಮಿಸಿದ ನಮೂನೆಯಲ್ಲಿ ಅರ್ಜಿಯನ್ನು ಸಲ್ಲಿಸಬಹುದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಉಪಪ್ರಕರಣ (2)ರ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದ ಮೇಲೆ [1][ತಹಸೀಲ್ದಾರ][1]ನು ವಿಚಾರಣೆ ನಡೆಸಿ ಆ ಬಗ್ಗೆ [1][ಸೂಕ್ತವೆಂದು ತಾನು ಭಾವಿಸುವಂಥ][1] ಆದೇಶವನ್ನು ಹೊರಡಿಸತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(4) ಈ ಪ್ರಕರಣದ ಮೇರೆಗೆ ಅರ್ಜಿಯನ್ನು, ಗೇಣಿಯು ಬಾಕಿಯಾದ ದಿನಾಂಕದಿಂದ ಒಂದು ವರ್ಷದೊಳಗೆ ಸಲ್ಲಿಸತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ, ಯಾವುದೇ ವರ್ಷದ ಗೇಣಿಯು ಆ ವರ್ಷದ ಜೂನ್ ತಿಂಗಳಿನ ಕೊನೆಯ ದಿನದಂದು ಬಾಕಿಯಾಗುತ್ತದೆಂದು ಭಾವಿಸತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**43. ಗೇಣಿದಾರನ ಹಕ್ಕುಗಳಿಗೆ ಅಥವಾ ವಿಶೇಷಾಧಿಕಾರಗಳಿಗೆ ಬಾಧಕವಾಗದಿರುವುದು.–** ಈ ಅಧಿನಿಯಮದಲ್ಲಿ ಉಪಬಂಧಿಸಿರುವಂತೆ ಹೊರತು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಆಚರಣೆಯ ಅಥವಾ ಕಾನೂನಿನ ಮೇರೆಗೆ ಯಾರೇ ಗೇಣಿದಾರನಿಗೆ ಇರುವ ಅಥವಾ ಯಾವುದೇ ಕರಾರಿನಿಂದ, ಮಂಜೂರಾತಿಯಿಂದ, ನ್ಯಾಯಾಲಯದ ಡಿಕ್ರಿಯಿಂದ ಅಥವಾ ಆದೇಶದಿಂದ ಉದ್ಭವಿಸುವ ಹಕ್ಕುಗಳನ್ನು ಅಥವಾ ವಿಶೇಷಾಧಿಕಾರಗಳನ್ನು ಮಿತಿಗೊಳಿಸತಕ್ಕದ್ದಲ್ಲ ಅಥವಾ ಮೊಟಕುಗೊಳಿಸತಕ್ಕದ್ದಲ್ಲ.

## ಅಧ್ಯಾಯ – III

## ಗೇಣಿದಾರರಿಗೆ ಒಡೆತನದ ಪ್ರದಾನ

[1][**44. ಭೂಮಿಗಳು ರಾಜ್ಯ ಸರ್ಕಾರದಲ್ಲಿ ನಿಹಿತವಾಗುವುದು.–** (1) ತಿದ್ದುಪಡಿ ಅಧಿನಿಯಮವು ಪ್ರಾರಂಭವಾಗುವ ದಿನಾಂಕಕ್ಕೆ ನಿಕಟ ಪೂರ್ವದಲ್ಲಿ ಗೇಣಿದಾರರು, (ಯಾವ ಗೇಣಿದಾರರನ್ನು ಹೊರದೂಡಲು ಡಿಕ್ರಿಯನ್ನು ಅಥವಾ ಆದೇಶವನ್ನು ಮಾಡಲಾಗಿದೆಯೋ ಅಥವಾ ಪುನಃ ವಶಕ್ಕೆ ಪಡೆದುಕೊಳ್ಳಲು ಯಾವ ಗೇಣಿದಾರರಿಗೆ ಪ್ರಮಾಣ ಪತ್ರವನ್ನು ನೀಡಲಾಗಿದೆಯೋ ಆ ಗೇಣಿದಾರರು ಒಳಗೊಂಡಂತೆ) ಧಾರಣ ಮಾಡಿರುವ ಅಥವಾ ಅವರ ಸ್ವಾಧೀನದಲ್ಲಿರುವ, 5ನೇ ಪ್ರಕರಣದ ಮೇರೆಗೆ ಅನುಮತಿಸಲಾದ ಗುತ್ತಿಗೆಗಳ ಮೇರೆಗೆ ಅವರು ಧಾರಣ ಮಾಡಿರುವ ಭೂಮಿಗಳನ್ನು ಹೊರತುಪಡಿಸಿ, ಎಲ್ಲಾ ಭೂಮಿಗಳು ಸದರಿ ದಿನಾಂಕದಂದು ಮತ್ತು ಆ ದಿನಾಂಕದಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಕ್ಕೆ ವರ್ಗಾವಣೆಯಾಗತಕ್ಕದ್ದು ಮತ್ತು ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ 44 ಮತ್ತು 45ನೇ ಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ.

(2) ಯಾವ ಭೂಮಿಗಳನ್ನು ಪುನಃ ವಶಕ್ಕೆ ತೆಗೆದುಕೊಳ್ಳಬಹುದೋ ಆ ಭೂಮಿಗಳನ್ನು ನಿರ್ದೇಶಿಸಿ ಅಥವಾ ನಿರ್ದಿಷ್ಟಪಡಿಸಿ ಯಾವುದೇ ನ್ಯಾಯಾಲಯವು ಅಥವಾ ಪ್ರಾಧಿಕಾರಿಯು ಹೊರಡಿಸಿದ ಯಾವುದೇ ಡಿಕ್ರಿಯಲ್ಲಿ ಅಥವಾ ಆದೇಶದಲ್ಲಿ ಅಥವಾ ನೀಡಿದ ಪ್ರಮಾಣ ಪತ್ರದಲ್ಲಿ ಅಥವಾ ಯಾವುದೇ ಕರಾರಿನಲ್ಲಿ, ಮಂಜೂರಾತಿಯಲ್ಲಿ ಅಥವಾ ಇತರ ಸುಲೇಖದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ನಿಹಿತವಾಗುವ ದಿನಾಂಕದಂದು ಮತ್ತು ದಿನಾಂಕದಿಂದ ಜಾರಿಗೆ ಬರುವಂತೆ ಮತ್ತು ಈ ಅಧಿನಿಯಮದಲ್ಲಿ ಅನ್ಯಥಾ ಸ್ಪಷ್ಟವಾಗಿ ಉಪಬಂಧಿಸಿರುವಂತೆ ಹೊರತು, ಈ ಕೆಳಕಂಡ ಪರಿಣಾಮಗಳುಂಟಾಗತಕ್ಕದ್ದು, ಎಂದರೆ:–

(ಎ) ಅಂತಹ ಭೂಮಿಗಳ ಒಡೆಯರಲ್ಲಿ ಮತ್ತು ಅಂತಹ ಭೂಮಿಗಳಲ್ಲಿ ಹಿತಾಸಕ್ತಿಯುಳ್ಳ ಇತರ ವ್ಯಕ್ತಿಗಳಲ್ಲಿ ನಿಹಿತವಾಗಿರುವ ಎಲ್ಲ ಹಕ್ಕುಗಳು, ಹಕ್ಕು ಸ್ವಾಮ್ಯವು ಮತ್ತು ಹಿತಾಸಕ್ತಿಯು ಕೊನೆಗೊಳ್ಳತಕ್ಕದ್ದು ಮತ್ತು ಆ ಭೂಮಿಗಳು ಎಲ್ಲ ಋಣಭಾರಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರದಲ್ಲಿ ಸಂಪೂರ್ಣವಾಗಿ ನಿಹಿತವಾಗತಕ್ಕದ್ದು;

(ಬಿ) ನಿಹಿತವಾಗುವ ದಿನಾಂಕದಂದು ಅಥವಾ ತರುವಾಯ ಅಂಥ ಭೂಮಿಗಳ ಸಂಬಂಧದಲ್ಲಿ ಬಾಕಿಯಾಗುವ ಎಲ್ಲಾ [1][xxx][1] ಮೊಬಲಗುಗಳು ರಾಜ್ಯ ಸರ್ಕಾರಕ್ಕೆ ಸಂದಾಯವಾಗತಕ್ಕದ್ದೇ ಹೊರತು ಭೂಮಿಯ ಒಡೆಯನಿಗಾಗಲಿ, ಭೂಮಾಲೀಕನಿಗಾಗಲಿ, ಅಥವಾ ಇತರ ಯಾರೇ ವ್ಯಕ್ತಿಗಾಗಲಿ ಅಲ್ಲ ಮತ್ತು ಈ ಖಂಡವನ್ನು ಉಲ್ಲಂಘಿಸಿ ಮಾಡಿದ ಯಾವುದೇ ಸಂದಾಯವು ಸಿಂಧುವಾದುದಾಗಿರತಕ್ಕದ್ದಲ್ಲ;

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಸಿ) ಅಂತಹ ಭೂಮಿಗಳ ಸಂಬಂಧದಲ್ಲಿ, ನಿಹಿತವಾಗುವ ದಿನಾಂಕದಂದು ಕಾನೂನುಬದ್ಧವಾಗಿ ಸಂದಾಯ ಮಾಡಬೇಕಾಗಿರುವ ಭೂಕಂದಾಯದ, ಉಪಕರದ, ನೀರು ದರದ ಎಲ್ಲಾ ಬಾಕಿಗಳನ್ನು ಅಥವಾ ಇತರ ಬಾಕಿಗಳನ್ನು, ಅವುಗಳನ್ನು ಸಂದಾಯ ಮಾಡಬೇಕಾಗಿರುವ ಭೂಒಡೆಯನಿಂದ, ಭೂ ಮಾಲೀಕನಿಂದ ಅಥವಾ ಇತರ ವ್ಯಕ್ತಿಯಿಂದ ಅಂತಹ ದಿನಾಂಕದ ತರುವಾಯ ವಸೂಲು ಮಾಡುವುದನ್ನು ಮುಂದುವರಿಸತಕ್ಕದ್ದು ಮತ್ತು ವಸೂಲಿಯ ಇತರ ಯಾವುದೇ ವಿಧಾನಕ್ಕೆ ಬಾಧಕ ಉಂಟಾಗದಂತೆ ಅಂತಹ ಬಾಕಿಗಳ ಮೊಬಲಗನ್ನು ಈ ಅಧ್ಯಾಯದ ಮೇರೆಗೆ ಯಾರೇ ವ್ಯಕ್ತಿಗೆ ಸಂದಾಯ ಮಾಡಬೇಕಾದ ಮೊಬಲಗಿನಿಂದ ಮುರಿದುಕೊಳ್ಳುವ ಮೂಲಕ ವಸೂಲು ಮಾಡತಕ್ಕದ್ದು;

(ಡಿ) ಅಂಥ ಯಾವುದೇ ಭೂಮಿಗಳು ಯಾವುದೇ ನ್ಯಾಯಾಲಯದ ಯಾವುದೇ ಡಿಕ್ರಿಯನ್ನು ಅಥವಾ ಇತರ ಪ್ರೊಸೆಸನ್ನು ಜಾರಿ ಮಾಡುವಾಗ ಜಪ್ತಿಗೆ ಗುರಿಯಾಗತಕ್ಕದ್ದಲ್ಲ ಮತ್ತು ಅಂಥ ಭೂಮಿಗಳ ಸಂಬಂಧದಲ್ಲಿ ನಿಹಿತವಾಗುವ ದಿನಾಂಕದಂದು ಇರುವ ಯಾವುದೇ ಜಪ್ತಿಯು ಅಥವಾ ಅಂತಹ ದಿನಾಂಕಕ್ಕೆ ಮೊದಲು ಜಪ್ತಿಗಾಗಿ ಹೊರಡಿಸಿದ ಯಾವುದೇ ಆದೇಶವು ಜಾರಿಯಲ್ಲಿರುವುದು ನಿಂತುಹೋಗತಕ್ಕದ್ದು;

(ಇ) ರಾಜ್ಯ ಸರ್ಕಾರವು, ಎದುರಾಗಬಹುದಾದ ಯಾವುದೇ ಅಡ್ಡಿಅಡಚಣೆಗಳನ್ನು ನಿವಾರಿಸಿದ ತರುವಾಯ, ಅಂಥ ಭೂಮಿಗಳನ್ನು ಕೂಡಲೇ ಸ್ವಾಧೀನಕ್ಕೆ ತೆಗೆದುಕೊಳ್ಳತಕ್ಕದ್ದು:

ಪರಂತು, ರಾಜ್ಯ ಸರ್ಕಾರವು, ನಿಯಮಿಸಬಹುದಾದ ವಿಚಾರಣೆಯನ್ನು ನಡೆಸಿದ ತರುವಾಯ ಯಾವುದೇ ಭೂಮಿಯ ಸಂಬಂಧದಲ್ಲಿ ಯಾರೇ ವ್ಯಕ್ತಿಯು ಈ ಅಧ್ಯಾಯದ ಮೇರೆಗೆ ಅಧಿಭೋಗದಾರನೆಂದು ನೋಂದಾಯಿತನಾಗಲು ಮೇಲ್ನೋಟಕ್ಕೆ ಹಕ್ಕುಳ್ಳವನಾಗಿದ್ದಾನೆಂದು ಪರಿಗಣಿಸಿದರೆ ಆ ಭೂಮಿಯನ್ನು ಅಂತಹ ವ್ಯಕ್ತಿಯ ಸ್ವಾಧೀನದಿಂದ ತಪ್ಪಿಸತಕ್ಕದ್ದಲ್ಲ;

(ಎಫ್) ಖಂಡ (ಎ) ಮೇರೆಗೆ ಯಾರ ಹಕ್ಕುಗಳು ರಾಜ್ಯ ಸರ್ಕಾರದಲ್ಲಿ ನಿಹಿತವಾಗಿವೆಯೋ ಆ ಭೂಒಡೆಯರು, ಭೂಮಾಲೀಕನು ಮತ್ತು ಭೂಮಿಯಲ್ಲಿ ಹಿತಾಸಕ್ತಿಯುಳ್ಳ ಪ್ರತಿಯೊಬ್ಬ ವ್ಯಕ್ತಿಯು ರಾಜ್ಯ ಸರ್ಕಾರದಿಂದ ಈ ಅಧ್ಯಾಯದಲ್ಲಿ ಉಪಬಂಧಿಸಿದಂಥ ಮೊಬಲಗನ್ನು ಪಡೆಯಲು ಮಾತ್ರವೇ ಹಕ್ಕುಳ್ಳವನಾಗಿರತಕ್ಕದ್ದು;

(ಜಿ) ಅಂತಹ ಭೂಮಿಗಳನ್ನು ಧಾರಣ ಮಾಡಿರುವ ಖಾಯಂ ಗೇಣಿದಾರರು, ರಕ್ಷಿತ ಗೇಣಿದಾರರು ಮತ್ತು ಇತರ ಗೇಣಿದಾರರು, ರಾಜ್ಯ ಸರ್ಕಾರಕ್ಕೆ ಹೋಲಿಸಿದಾಗ, ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಉಪಬಂಧಿಸಿರುವಂಥ ಹಕ್ಕುಗಳಿಗೆ ಅಥವಾ ವಿಶೇಷಾಧಿಕಾರಗಳಿಗೆ ಮಾತ್ರ ಹಕ್ಕುಳ್ಳವರಾಗಿರತಕ್ಕದ್ದು ಮತ್ತು ಅಂತಹ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು ಮತ್ತು ಭೂ ಮಾಲೀಕನಲ್ಲಿ ಅಥವಾ ಇತರ ವ್ಯಕ್ತಿಯಲ್ಲಿ, ನಿಹಿತವಾಗಿರುವ ದಿನಾಂಕಕ್ಕೆ ಮೊದಲು ಅಂಥ ಭೂಮಿಗಳಲ್ಲಿ ಅವರಿಗೆ ಪ್ರಾಪ್ತವಾಗಿರಬಹುದಾದ ಇತರ ಯಾವುವೇ ಹಕ್ಕುಗಳು ಮತ್ತು ವಿಶೇಷಾಧಿಕಾರಗಳು ನಿಂತು ಹೋಗತಕ್ಕದ್ದು ಮತ್ತು ಕೊನೆಗೊಳ್ಳತಕ್ಕದ್ದು ಮತ್ತು ಅವುಗಳು ರಾಜ್ಯ ಸರ್ಕಾರದ ವಿರುದ್ಧ ಜಾರಿಗೊಳಿಸತಕ್ಕಂತವುಗಳು ಆಗಿರತಕ್ಕದ್ದಲ್ಲ.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ 44 ಮತ್ತು 45ನೇ ಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ.

**45. ಕೆಲವು ಷರತ್ತುಗಳ ಮೇಲೆ ಗೇಣಿದಾರರನ್ನು ಭೂಮಿಯ ಅಧಿಭೋಗದಾರರನ್ನಾಗಿ ನೋಂದಾಯಿಸುವುದು.–** (1) ಈ ಅಧ್ಯಾಯದ ಮುಂದಿನ ಪ್ರಕರಣಗಳ ಉಪಬಂಧಗಳಿಗೊಳಪಟ್ಟು, ಖಾಯಂ ಗೇಣಿದಾರನಾಗಿದ್ದ, ರಕ್ಷಿತ ಗೇಣಿದಾರನಾಗಿದ್ದ ಅಥವಾ ಇತರ ಗೇಣಿದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯು ಅಥವಾ ಗೇಣಿದಾರನು ವಿಧಿಬದ್ಧವಾಗಿ ಒಳಗೇಣಿಗೆ ಕೊಟ್ಟಿದ್ದರೆ, ಅಂಥ ಒಳಗೇಣಿದಾರನು, ನಿಹಿತವಾಗುವ ದಿನಾಂಕಕ್ಕೆ ಮೊದಲು ಅವನು ಯಾವ ಭೂಮಿಗಳ ಸಂಬಂಧದಲ್ಲಿ ಖಾಯಂ ಗೇಣಿದಾರನಾಗಿದ್ದನೋ, ರಕ್ಷಿತ ಗೇಣಿದಾರನಾಗಿದ್ದನೋ ಅಥವಾ ಇತರ ಗೇಣಿದಾರನಾಗಿದ್ದನೋ ಅಥವಾ ಒಳಗೇಣಿದಾರನಾಗಿದ್ದನೋ ಮತ್ತು ಯಾವ ಭೂಮಿಗಳನ್ನು ಅವನು ಸ್ವತಃ ಸಾಗುವಳಿ ಮಾಡುತ್ತಿದ್ದನೋ ಆ ಭೂಮಿಗಳ ಸಂಬಂಧದಲ್ಲಿ ಅಧಿಭೋಗದಾರನಾಗಿ ನಿಹಿತವಾಗುವ ದಿನಾಂಕದಂದು ಮತ್ತು ಆ ದಿನಾಂಕದಿಂದ ನೋಂದಾಯಿತನಾಗಲು ಹಕ್ಕುಳ್ಳವನಾಗಿರತಕ್ಕದ್ದು.

(2) ಉಪಪ್ರಕರಣ (1)ರಲ್ಲಿ ಉಲ್ಲೇಖಿಸಿರುವ ಗೇಣಿದಾರನು ಅಥವಾ ಇತರ ವ್ಯಕ್ತಿಯು,–

(i) ಭೂಮಿಯನ್ನು ಭಾಗಶಃ ಒಡೆಯನಾಗಿ ಮತ್ತು ಭಾಗಶಃ ಗೇಣಿದಾರನಾಗಿ ಧಾರಣ ಮಾಡಿದ್ದು, ಅವನು ಒಡೆಯನಾಗಿ ಧಾರಣ ಮಾಡಿರುವ ಭೂಮಿಯ ವಿಸ್ತೀರ್ಣವು ಗರಿಷ್ಠ ಮಿತಿ ವಿಸ್ತೀರ್ಣಕ್ಕೆ ಸಮನಾಗಿದ್ದರೆ ಅಥವಾ ಮೀರಿದ್ದರೆ, ನಿಹಿತವಾಗುವ ದಿನಾಂಕಕ್ಕೆ ಮೊದಲು, ಗೇಣಿದಾರನಾಗಿ ಅವನು ಧಾರಣ ಮಾಡಿದ್ದ ಭೂಮಿಯ ಅಧಿಭೋಗದಾರನಾಗಿ ನೋಂದಾಯಿತನಾಗಲು ಅವನು ಹಕ್ಕುಳ್ಳವನಾಗಿರತಕ್ಕದ್ದಲ್ಲ;

(ii) ಒಡೆಯನಾಗಿ ಯಾವುದೇ ಭೂಮಿಯನ್ನು ಧಾರಣ ಮಾಡಿರದಿದ್ದರೆ ಮತ್ತು ಸ್ವತಃ ಸಾಗುವಳಿ ಮಾಡದಿದ್ದರೆ, ಆದರೆ ಗರಿಷ್ಠ ಮಿತಿ ವಿಸ್ತೀರ್ಣವನ್ನು ಮೀರಿದ ಭೂಮಿಯನ್ನು ಗೇಣಿದಾರನಾಗಿ ಅವನು ಧಾರಣ ಮಾಡಿದ್ದು, ಅದನ್ನು ಸ್ವತಃ ಸಾಗುವಳಿ ಮಾಡುತ್ತಿದ್ದರೆ, ಗರಿಷ್ಠ ಮಿತಿ ವಿಸ್ತೀರ್ಣದಷ್ಟರ ಮಟ್ಟಿಗೆ ಅಧಿಭೋಗದಾರನಾಗಿ ನೋಂದಾಯಿತನಾಗಲು ಅವನು ಹಕ್ಕುಳ್ಳವನಾಗಿರತಕ್ಕದ್ದು;

(iii) ಗರಿಷ್ಠ ಮಿತಿ ವಿಸ್ತೀರ್ಣಕ್ಕಿಂತ ಕಡಿಮೆ ವಿಸ್ತೀರ್ಣದ ಯಾವುದೇ ಭೂಮಿಯನ್ನು ಒಡೆಯನಾಗಿ ಧಾರಣ ಮಾಡಿದ್ದರೆ ಮತ್ತು ಸ್ವತಃ ಸಾಗುವಳಿ ಮಾಡುತ್ತಿದ್ದರೆ, ಅವನ ಹಿಡುವಳಿಯನ್ನು ಗರಿಷ್ಠ ಮಿತಿ ವಿಸ್ತೀರ್ಣಕ್ಕೆ ಸಮನಾಗಿಸಲು ಸಾಕಾಗುವಷ್ಟು ವಿಸ್ತೀರ್ಣದ ಭೂಮಿಯ ಮಟ್ಟಿಗೆ ಅಧಿಭೋಗದಾರನೆಂದು ನೋಂದಾಯಿತನಾಗಲು ಅವನು ಹಕ್ಕುಳ್ಳವನಾಗಿರತಕ್ಕದ್ದು.

(3) ನಿಹಿತವಾಗುವ ದಿನಾಂಕಕ್ಕೆ ಮೊದಲು [1][ವ್ಯಕ್ತಿಯು][1] ಧಾರಣ ಮಾಡಿದ್ದ ಭೂಮಿಯನ್ನು ಮತ್ತು ಯಾವ ಭೂಮಿಯ ಸಂಬಂಧದಲ್ಲಿ ಈ ಪ್ರಕರಣದ ಮೇರೆಗೆ ಅಧಿಭೋಗದಾರನೆಂದು ನೋಂದಾಯಿತನಾಗಲು ಅವನು ಹಕ್ಕುಳ್ಳವನಾಗಿಲ್ಲವೊ ಆ ಭೂಮಿಯನ್ನು [2][ಅಂತಹ ವ್ಯಕ್ತಿಯನ್ನು ಒಕ್ಕಲೆಬ್ಬಿಸಿದ ನಂತರ][2] 77ನೇ ಪ್ರಕರಣದಲ್ಲಿ ಉಪಬಂಧಿಸಿದ ರೀತಿಯಲ್ಲಿ ವಿಲೇ ಮಾಡತಕ್ಕದ್ದು.][1]

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**46. ಭೂಮಿಯನ್ನು ಆಯ್ಕೆ ಮಾಡಿಕೊಳ್ಳಲು ಗೇಣಿದಾರನು ಯಾವಾಗ ಹಕ್ಕುಳ್ಳವನಾಗುವನು.–** 45ನೇ ಪ್ರಕರಣದ (1)ನೇ ಉಪ ಪ್ರಕರಣದ [1][ಮೇರೆಗೆ ಅಧಿಭೋಗದಾರನಾಗಿ ನೋಂದಾಯಿತನಾಗಲು ಹಕ್ಕುಳ್ಳ][1] ಯಾರೇ ಗೇಣಿದಾರನು ಒಬ್ಬ ಭೂ ಮಾಲೀಕನ ಅಥವಾ ಒಬ್ಬನಿಗಿಂತ ಹೆಚ್ಚು ಭೂಮಾಲೀಕರ ಭೂಮಿಯನ್ನು ಧಾರಣ ಮಾಡಿದ್ದರೆ, ಅಂತಹ ಗೇಣಿದಾರನು, ರಾಜ್ಯ ಸರ್ಕಾರವು ರಚಿಸಬಹುದಾದಂಥ ನಿಯಮಗಳಿಗೊಳಪಟ್ಟು, ತಾನು ಯಾವ ಭೂಮಿಯ ನೋಂದಾಯಿತ ಅಧಿಭೋಗದಾರನಾಗಲು [2][xxx][2] ಇಚ್ಛಿಸುವನೋ ಆ ಭೂಮಿಯ ವಿಸ್ತೀರ್ಣವನ್ನು ಮತ್ತು ಅದರ ಸ್ಥಳವನ್ನು ಆಯ್ಕೆ ಮಾಡಿಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು:

ಪರಂತು, ಹಾಗೆ ಆಯ್ಕೆ ಮಾಡಿಕೊಂಡ ವಿಸ್ತೀರ್ಣವು ಸಾಧ್ಯವಾಗಬಹುದಾದಷ್ಟರ ಮಟ್ಟಿಗೆ, ಸರ್ವೆ ನಂಬರಿನಲ್ಲಿ ಅಥವಾ ಸರ್ವೆ ನಂಬರಿನ ಒಳ ವಿಂಗಡಣೆಯಲ್ಲಿ ಅಥವಾ ಮಾನ್ಯ ಮಾಡಿದ ಹಿಸ್ಸೆಯಲ್ಲಿ ಸೇರಿದ ವಿಸ್ತೀರ್ಣವಲ್ಲ ವಿಸ್ತೀರ್ಣವಾಗಿರತಕ್ಕದ್ದು.

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**47. ಸಂದಾಯ ಮಾಡಬೇಕಾದ ಮೊಬಲಗು.**–(1) [2][106ನೇ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಹೊರತು][2] ಪ್ರತಿಯೊಬ್ಬ ಭೂ ಒಡೆಯನು, ಭೂ ಮಾಲೀಕನು ಮತ್ತು ಭೂಮಿಯಲ್ಲಿ ಹಿತಾಸಕ್ತಿಯುಳ್ಳ ಇತರ ಎಲ್ಲ ವ್ಯಕ್ತಿಗಳು, 15ನೇ ಪ್ರಕರಣದ (6)ನೇ ಉಪಪ್ರಕರಣದ ಅಥವಾ 20ನೇ ಪ್ರಕರಣದ ಅಥವಾ 44ನೇ ಪ್ರಕರಣದ ಮೇರೆಗೆ, ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವ ಭೂಮಿಗಳಲ್ಲಿನ ತಮ್ಮ ಹಕ್ಕುಗಳು ಕೊನೆಗೊಂಡದ್ದಕ್ಕಾಗಿ, ಭೂಮಿಯಿಂದ ಅಥವಾ ಸಂದರ್ಭಾನುಸಾರ ಎಲ್ಲ ಭೂಮಿಗಳಿಂದ ದೊರೆಯುಬಹುದಾದ ನಿವ್ವಳ ವಾರ್ಷಿಕ ವರಮಾನವನ್ನು ಆಧಾರವಾಗಿ ಇಟ್ಟುಕೊಂಡು ಈ ಮುಂದಿನ ಪ್ರಮಾಣಕ್ಕನುಸಾರವಾಗಿ ನಿರ್ಧರಿಸಿದ ಮೊಬಲಗಿಗೆ ಹಕ್ಕುಳ್ಳವರಾಗಿರತಕ್ಕದ್ದು, ಎಂದರೆ:–

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ 47ನೇ ಪ್ರಕರಣವನ್ನು ಪ್ರತ್ಯಾಯೋಜಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(i) ಭೂಮಿಯಿಂದ ಬರುವ ನಿವ್ವಳ ವಾರ್ಷಿಕ ವರಮಾನದ ಮೊದಲ ಐದು ಸಾವಿರ ರೂಪಾಯಿ ಮೊಬಲಗಿಗೆ ಅಥವಾ ಅದರ ಯಾವುದೇ ಭಾಗಕ್ಕೆ ಅಂತಹ ಮೊಬಲಗಿನ ಅಥವಾ ಭಾಗದ ಹದಿನೈದರಷ್ಟು;

(ii) ಭೂಮಿಯಿಂದ ಬರುವ ನಿವ್ವಳ ವಾರ್ಷಿಕ ವರಮಾನದ ಆನಂತರದ ಐದು ಸಾವಿರ ರೂಪಾಯಿಗಳ ಮೊಬಲಗಿಗೆ ಅಥವಾ ಅದರ ಯಾವುದೇ ಭಾಗಕ್ಕೆ ಅಂಥ ಮೊಬಲಗಿನ ಅಥವಾ ಭಾಗದ ಹನ್ನೆರಡರಷ್ಟು;

(iii) ಭೂಮಿಯಿಂದ ಬರುವ ನಿವ್ವಳ ವಾರ್ಷಿಕ ವರಮಾನದ ಉಳಿದ ಭಾಗಕ್ಕೆ ಅಂಥ ಉಳಿದ ಭಾಗದ ಹತ್ತರಷ್ಟು:

ಪರಂತು,–

(i) ಗೇಣಿದಾರನು ಆ ಭೂಮಿಯ ಖಾಯಂ ಗೇಣಿದಾರನಾಗಿದ್ದರೆ, ಅವನಿಗೆ ಸಂದಾಯ ಮಾಡಬೇಕಾದ ಮೊಬಲಗು, ಅಂಥ ಭೂಮಿಯ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಗೇಣಿಯ ಮತ್ತು ಭೂಕಂದಾಯದ ನಡುವಿನ ವ್ಯತ್ಯಾಸದ ಆರರಷ್ಟು ಆಗಿರತಕ್ಕದ್ದು;

(ii) ಗೇಣಿದಾರನು ಮಧ್ಯವರ್ತಿಗಳ ಮುಖಾಂತರವಾಗಿ ಭೂಮಿಯನ್ನು ಧಾರಣ ಮಾಡಿದ್ದರೆ, ನಿಹಿತಗೊಳಿಸಿದ ದಿನಾಂಕಕ್ಕೆ ನಿಕಟ ಪೂರ್ವದಲ್ಲಿ ಆ ಭೂಮಿಗಾಗಿ ಗೇಣಿದಾರನು ಸಂದಾಯ ಮಾಡಿದ ಗೇಣಿಯನ್ನು ಭೂ ಒಡೆಯನು ಮತ್ತು ಮಧ್ಯವರ್ತಿಗಳು ಯಾವ ಪ್ರಮಾಣದಲ್ಲಿ ಹಂಚಿಕೊಳ್ಳುತ್ತಿದ್ದರೋ, ಅದೇ ಪ್ರಮಾಣದಲ್ಲಿ ಅವರಿಗೆ ಮೊಬಲಗನ್ನು ಸಂದಾಯ ಮಾಡತಕ್ಕದ್ದು;

(iii) ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವ ಭೂಮಿಯು ೫ನೇ ಅನುಸೂಚಿಯ ಎ ಭಾಗದಲ್ಲಿ ಉಲ್ಲೇಖಿಸಿರುವ ಡಿ ದರ್ಜೆಯ ಭೂಮಿಯಾಗಿದ್ದರೆ ಅಥವಾ ಭೂಮಾಲೀಕನು,–

(1) ಸಣ್ಣ ಹಿಡುವಳಿದಾರನಾಗಿದ್ದರೆ;

(2) ಅಪ್ರಾಪ್ತ ವಯಸ್ಕನಾಗಿದ್ದರೆ;

(3) ವಿಧವೆಯಾಗಿದ್ದರೆ;

(4) ಮದುವೆಯನ್ನೇ ಆಗದ ಮಹಿಳೆ ಆಗಿದ್ದರೆ;

(5) [1][ನಿಯಮಿಸಬಹುದಾದಂಥ ದೈಹಿಕ ಅಥವಾ ಮಾನಸಿಕ ವಿಕಲತೆಗೆ][1] ಒಳಗಾಗಿರುವ ವ್ಯಕ್ತಿಯಾಗಿದ್ದರೆ; ಅಥವಾ

1. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 25.11.1980 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(6) 44ನೇ ಪ್ರಕರಣದ ಮೇರೆಗೆ ಯಾವ ಸೈನಿಕನ ಅಥವಾ ನಾವಿಕನ ಭೂಮಿಗಳು ರಾಜ್ಯ ಸರ್ಕಾರದಲ್ಲಿ ನಿಹಿತವಾಗಿವೆಯೋ ಆ ಸೈನಿಕನಾಗಿದ್ದರೆ ಅಥವಾ ನಾವಿಕನಾಗಿದ್ದರೆ

– ಅಂತಹ ಭೂಮಿಯಿಂದ ಬರುವ ನಿವ್ವಳ ವಾರ್ಷಿಕ ವರಮಾನದ ಇಪ್ಪತ್ತರಷ್ಟಕ್ಕೆ ಸಮನಾದ ಮೊಬಲಗನ್ನು ಅವರಿಗೆ ಸಂದಾಯ ಮಾಡತಕ್ಕದ್ದು.

(2) ಉಪ ಪ್ರಕರಣ (1)ರ ಉದ್ದೇಶಕ್ಕಾಗಿ ಭೂಮಿಯಿಂದ ಬರುವ ನಿವ್ವಳ ವಾರ್ಷಿಕ ವರಮಾನವನ್ನು, 8ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದಂತೆ ಭೂಮಿಯ ಸಂಬಂಧದಲ್ಲಿ ವಾರ್ಷಿಕ ಗೇಣಿಯಾಗಿ ಸಂದಾಯ ಮಾಡಬೇಕಾದ ಮೊಬಲಗೆಂದು ಭಾವಿಸತಕ್ಕದ್ದು. ಆದರೆ ತರಿ ಭೂಮಿ ಎಂದು ಅಥವಾ ಖುಷ್ಕಿ ಭೂಮಿ ಎಂದು ಕಂದಾಯ ನಿರ್ಧರಣೆ ಮಾಡಿರುವ ಭೂಮಿಯಲ್ಲಿ ಭೂಮಾಲೀಕನು ಹಣ್ಣಿನ ಮರಗಳನ್ನು ಬೆಳಸಿದರೆ ಹಣ್ಣಿನ ಮರಗಳ ಬಗೆಗಳನ್ನು ಗಮನಿಸಿ ಬಾಗಾಯತು ಭೂಮಿಗೆ ವಿಧಿಸಬಹುದಾದ ಕಂದಾಯ ನಿರ್ಧರಣೆಯ ಆಧಾರದ ಮೇಲೆ (1)ನೇ ಉಪಪ್ರಕರಣದ ಉದ್ದೇಶಗಳಿಗಾಗಿ ವಾರ್ಷಿಕ ವರಮಾನವನ್ನು [1][ನಿಯಮಿಸಬಹುದಾದ ನಿಯಮಗಳಿಗೆ ಒಳಪಟ್ಟು ನಿರ್ಧರಿಸತಕ್ಕದ್ದು.][1]

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಭೂಮಾಲೀಕನು ಬಾವಿಗಳನ್ನು ಅಥವಾ ಖಾಯಂ ಸ್ವರೂಪದ ಇತರ ಕಟ್ಟಡಗಳನ್ನು ಭೂಮಿಯಲ್ಲಿ ನಿರ್ಮಿಸಿದ್ದರೆ, ನಿಯಮಿಸಿದ ರೀತಿಯಲ್ಲಿ ಲೆಕ್ಕ ಹಾಕಲಾದ ಅವುಗಳ ಮೌಲ್ಯವನ್ನೂ ಸಹ ಸಂದಾಯ ಮಾಡತಕ್ಕದ್ದು.

(4) ಉಪ ಪ್ರಕರಣ (1) ಮತ್ತು (3)ರಲ್ಲಿ ಏನೇ ಇದ್ದರೂ, ಸದರಿ ಉಪಪ್ರಕರಣಗಳಿಗೆ ಅನುಸಾರವಾಗಿ ಸಂದಾಯ ಮಾಡಬೇಕಾದ ಒಟ್ಟು ಮೊಬಲಗು ಎರಡು ಲಕ್ಷ ರೂಪಾಯಿಗಳನ್ನು ಮೀರತಕ್ಕದ್ದಲ್ಲ.][1]

1. 1974ರ ಅಧಿನಿಯಮ ಸಂಖ್ಯೆ ರ ಮೂಲಕ ದಿನಾಂಕ 1–3–1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**48. ನ್ಯಾಯಾಧಿಕರಣಗಳ ರಚನೆ.**– (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಈ ಅಧಿನಿಯಮದ ಉದ್ದೇಶಗಳಿಗಾಗಿ ಪ್ರತಿಯೊಂದು ತಾಲ್ಲೂಕಿಗೆ ಈ ಕೆಳಕಂಡ ಸದಸ್ಯರನ್ನೊಳಗೊಂಡ ನ್ಯಾಯಾಧಿಕರಣವನ್ನು ರಚಿಸತಕ್ಕದ್ದು, ಎಂದರೆ:–

(i) ತಾಲ್ಲೂಕಿನ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ರೆವಿನ್ಯೂ ಉಪ ವಿಭಾಗದ ಅಸಿಸ್ಟೆಂಟ್ ಕಮೀಷನರ್ ಅಥವಾ ಈ ಉದ್ದೇಶಕ್ಕಾಗಿ ರಾಜ್ಯ ಸರ್ಕಾರದಿಂದ ವಿಶೇಷವಾಗಿ ನೇಮಕಗೊಂಡ ಅಸಿಸ್ಟೆಂಟ್ ಕಮೀಷನರ್;

(ii)ರಾಜ್ಯ ಸರ್ಕಾರದಿಂದ ನಾಮನಿರ್ದೇಶನಗೊಂಡ ಇತರ ನಾಲ್ಕು ಮಂದಿ, ಅವರಲ್ಲಿ ಕೊನೆಯ ಪಕ್ಷ ಒಬ್ಬ ಸದಸ್ಯನು [2][xxx][2] ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ [2][xxx][2] ಸೇರಿದವನಾಗಿರತಕ್ಕದ್ದು:

[3][ಪರಂತು, ಯಾವುದೇ ತಾಲ್ಲೂಕಿಗೆ ಹೆಚ್ಚುವರಿ ನ್ಯಾಯಾಧಿಕರಣಗಳನ್ನು ರಚಿಸುವ ಅವಶ್ಯಕತೆ ಇದೆ ಎಂದು ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟರೆ ಹಾಗೆ ಮಾಡಬಹುದು ಹಾಗೂ ಡೆಪ್ಯುಟಿ ಕಮೀಷನರ್‌ರವರು ರಾಜ್ಯ ಸರ್ಕಾರದ ಯಾವುದೇ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೊಳಪಟ್ಟು, ಯಾವುದೇ ತಾಲ್ಲೂಕಿನಲ್ಲಿನ ನ್ಯಾಯಾಧಿಕರಣಗಳಿಗೆ ಕೆಲಸವನ್ನು ಹಂಚಿಕೆ ಮಾಡಬಹುದು.][3]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ 48, 48ಎ, ಮತ್ತು 48ಬಿ ಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ.

2. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಅಸಿಸ್ಟೆಂಟ್ ಕಮೀಷನರವರು ನ್ಯಾಯಾಧಿಕರಣದ ಅಧ್ಯಕ್ಷರಾಗಿರತಕ್ಕದ್ದು.

(3) ರಾಜ್ಯ ಸರ್ಕಾರವು ಅದೇ ರೀತಿ ಕಾಲಕಾಲಕ್ಕೆ ನ್ಯಾಯಾಧಿಕರಣವನ್ನು ಪುನರ್‌ರಚಿಸಬಹುದು [1][ನ್ಯಾಯಾಧಿಕರಣದ ಮುಂದೆ ಬಾಕಿಯಿರುವ ಯಾವುದೇ ವ್ಯವಹರಣೆಗಳನ್ನು ಪುನರ್‌ರಚಿತ ನ್ಯಾಯಾಧಿಕರಣವು, ತನ್ನ ಮುಂದೆ ಅವುಗಳನ್ನು ಹೂಡಿದ್ದರೆ ಹೇಗೋ ಹಾಗೆ ಮುಂದುವರೆಸತಕ್ಕದ್ದು.

**ವಿವರಣೆ.**– ಈ ಉಪಪ್ರಕರಣದ ಉದ್ದೇಶಕ್ಕಾಗಿ 'ಪುನರ್‌ರಚನೆ'ಯು ನ್ಯಾಯಾಧಿಕರಣದಿಂದ ಸದಸ್ಯರನ್ನು ತೆಗೆದುಹಾಕುವುದು ಅಥವಾ ನ್ಯಾಯಾಧಿಕರಣಕ್ಕೆ ಹೊಸ ಸದಸ್ಯರನ್ನು ನಾಮನಿರ್ದೇಶನ ಮಾಡುವುದು ಒಳಗೊಳ್ಳತಕ್ಕದ್ದು.][1]

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) ನ್ಯಾಯಾಧಿಕರಣದ ಸಭೆಗೆ ಅಗತ್ಯವಾದ ಕೋರಂ ಮತ್ತು ಅದು ಅನುಸರಿಸಬೇಕಾದ ಕಾರ್ಯವಿಧಾನವು ನಿಯಮಿಸಬಹುದಾದಂತೆ ಇರತಕ್ಕದ್ದು.

(5) ನ್ಯಾಯಾಧಿಕರಣದ ಯಾವುವೇ ಕಾರ್ಯವನ್ನು ಅಥವಾ ವ್ಯವಹರಣೆಯನ್ನು ಅದರ ಸದಸ್ಯ ಸ್ಥಾನಗಳಲ್ಲಿ ಯಾವುದೇ ಸ್ಥಾನವು ಖಾಲಿ ಇರುವ ಅಥವಾ ಅದರ ರಚನೆಯಲ್ಲಿ ಅಥವಾ ಅದರ ಪುನರ್‌ರಚನೆಯಲ್ಲಿ ಯಾವುದೇ ದೋಷವು ಇರುವ ಕಾರಣ ಮಾತ್ರದಿಂದಲೇ ಅಸಿಂಧುವೆಂದು ಭಾವಿಸತಕ್ಕದ್ದಲ್ಲ.

(6) ನ್ಯಾಯಾಧಿಕರಣದ ಅಧಿಕಾರೇತರ ಸದಸ್ಯರು ನಿಯಮಿಸಬಹುದಾದಂತಹ ಪ್ರಯಾಣ ಭತ್ಯೆಗೆ ಮತ್ತು ಇತರ ಭತ್ಯೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು.

(7) ತಹಸೀಲ್ದಾರನು [1][ಅಥವಾ ರಾಜ್ಯ ಸರ್ಕಾರವು ಈ ಉದ್ದೇಶಕ್ಕಾಗಿ ವಿಶೇಷವಾಗಿ ನೇಮಕ ಮಾಡಿದ ಯಾರೇ ಅಧಿಕಾರಿಯು][1] ನ್ಯಾಯಾಧಿಕರಣದ ಕಾರ್ಯದರ್ಶಿಯಾಗಿರತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**1**[(8) x x x ]1

1. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**48ಎ. ನ್ಯಾಯಾಧಿಕರಣದಿಂದ ವಿಚಾರಣೆ, ಇತ್ಯಾದಿ.–** (1) 45ನೇ ಪ್ರಕರಣದ ಮೇರೆಗೆ ಅಧಿಭೋಗದಾರನಾಗಿ ನೋಂದಾಯಿಸಿಕೊಳ್ಳಲು ಹಕ್ಕುಳ್ಳ ಪ್ರತಿಯೊಬ್ಬ ವ್ಯಕ್ತಿಯು ಈ ಬಗ್ಗೆ ನ್ಯಾಯಾಧಿಕರಣಕ್ಕೆ ಅರ್ಜಿಯನ್ನು ಸಲ್ಲಿಸಬಹುದು. ಅಂಥ ಪ್ರತಿಯೊಂದು ಅರ್ಜಿಯನ್ನು ಈ ಅಧಿನಿಯಮದಲ್ಲಿ ಉಪಬಂಧಿಸಿರುವಂತೆ ಹೊರತು, [1][ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1978ರ 1ನೇ ಪ್ರಕರಣವು ಪ್ರಾರಂಭವಾದ ದಿನಾಂಕದಿಂದ ಆರು ತಿಂಗಳುಗಳ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು][1] [2][xxx][2] ಸಲ್ಲಿಸತಕ್ಕದ್ದು.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ಅರ್ಜಿಯನ್ನು ಸ್ವೀಕರಿಸಿದ ಮೇಲೆ ನ್ಯಾಯಾಧಿಕರಣವು ಸಾರ್ವಜನಿಕ ನೋಟೀಸನ್ನು, ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಂದು ತನ್ನ ಮುಂದೆ ಹಾಜರಾಗುವಂತೆ ಭೂ ಮಾಲೀಕನಿಗೆ ಮತ್ತು ಭೂಮಿಯಲ್ಲಿ ಹಿತಾಸಕ್ತಿಯುಳ್ಳ ಎಲ್ಲಾ ವ್ಯಕ್ತಿಗಳಿಗೆ ಕರೆ ಕೊಟ್ಟು ಭೂಮಿಯು ಯಾವ ಗ್ರಾಮದಲ್ಲಿ ಇದೆಯೊ ಆ ಗ್ರಾಮದಲ್ಲಿ ಪ್ರಕಟಿಸತಕ್ಕದ್ದು ಅಥವಾ ಪ್ರಕಟಿಸುವಂತೆ ಮಾಡತಕ್ಕದ್ದು. ನ್ಯಾಯಾಧಿಕರಣವು, ಅರ್ಜಿಯಲ್ಲಿ ನಮೂದಿಸಿರುವ ವ್ಯಕ್ತಿಗಳಿಗೆ ಮತ್ತು ಭೂಮಿಯಲ್ಲಿ ಹಿತಾಸಕ್ತಿಯುಳ್ಳವರೆಂದು ತನಗೆ ಕಂಡು ಬರುವ ಇತರ ವ್ಯಕ್ತಿಗಳಿಗೆ ಸಹ ಪ್ರತ್ಯೇಕ ನೋಟೀಸುಗಳನ್ನು ಕೊಡತಕ್ಕದ್ದು.

(3) ಅರ್ಜಿಯ ನಮೂನೆಯು, ನೋಟೀಸುಗಳ ನಮೂನೆಯು, ನೋಟೀಸುಗಳನ್ನು ಪ್ರಕಟಿಸುವ ಅಥವಾ ಜಾರಿ ಮಾಡುವ ವಿಧಾನವು ಮತ್ತು ಅದಕ್ಕೆ ಸಂಬಂಧಪಟ್ಟ ಇತರ ಎಲ್ಲ ವಿಷಯಗಳು ನಿಯಮಿಸಬಹುದಾದಂತೆ ಇರತಕ್ಕದ್ದು. [1][ನ್ಯಾಯಾಧಿಕರಣವು, ಸಿಂಧುವಾದ ಹಾಗೂ ಸಾಕಷ್ಟು ಕಾರಣಗಳಿಗಾಗಿ ಅರ್ಜಿಯನ್ನು ತಿದ್ದುಪಡಿ ಮಾಡಲು ಗೇಣಿದಾರನಿಗೆ ಅನುಮತಿ ನೀಡಬಹುದು.][1]

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) ಯಾವ ಆಕ್ಷೇಪಣೆಯೂ ದಾಖಲಾಗದಿದ್ದರೆ, ನ್ಯಾಯಾಧಿಕರಣವು, ತಾನು ಅವಶ್ಯಕವೆಂದು ಪರಿಗಣಿಸುವಂತಹ ಸತ್ಯಾಪನೆ ಮಾಡಿದ ತರುವಾಯ ಆದೇಶದ ಮೂಲಕ ಅರ್ಜಿಯನ್ನು ಒಪ್ಪಿಕೊಳ್ಳಬಹುದು ಅಥವಾ ತಿರಸ್ಕರಿಸಬಹುದು.

(5) ಅರ್ಜಿದಾರನ ಕ್ಲೇಮಿನ ಸಿಂಧುತ್ವವನ್ನು ಪ್ರಶ್ನಿಸಿ ಅಥವಾ ಪ್ರತಿ ಕ್ಲೇಮನ್ನು ಮುಂದಿಟ್ಟು ಆಕ್ಷೇಪಣೆಯನ್ನು ದಾಖಲು ಮಾಡಿದರೆ ನ್ಯಾಯಾಧಿಕರಣವು, ವಿಚಾರಣೆಯನ್ನು ನಡೆಸಿದ ತರುವಾಯ, ಅಧಿಭೋಗದಾರನೆಂದು ನೋಂದಾಯಿತನಾಗಲು ಹಕ್ಕುಳ್ಳ ವ್ಯಕ್ತಿಯನ್ನು ಆದೇಶದ ಮೂಲಕ ನಿರ್ಧರಿಸತಕ್ಕದ್ದು ಮತ್ತು ತದನುಸಾರವಾಗಿ ಆದೇಶಗಳನ್ನು ಮಾಡತಕ್ಕದ್ದು.

[1][(5ಎ) ಕ್ಲೇಮಿನ ಯಾವುದೇ ಭಾಗಕ್ಕೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆಯು ಇಲ್ಲದಿದ್ದಲ್ಲಿ, ಆ ಭಾಗಕ್ಕೆ ಸಂಬಂಧಿಸಿದಂತೆ, ನ್ಯಾಯಾಧಿಕರಣವು ಅರ್ಜಿಯನ್ನು ಒಪ್ಪಿಕೊಂಡು ಕೂಡಲೇ ಆದೇಶವನ್ನು ಹೊರಡಿಸಬಹುದು ಮತ್ತು ಆಕ್ಷೇಪಣೆಯಿರುವ ಇತರೆ ಭಾಗಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಮುಂದುವರೆಯಬಹುದು.][1]

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(6) [1][ಈ ಪ್ರಕರಣದ ಮೇರೆಗೆ ನ್ಯಾಯಾಧಿಕರಣವು ಹೊರಡಿಸಿದ ಆದೇಶವು ಅಂತಿಮವಾದುದು ಆಗಿರತಕ್ಕದ್ದು ಮತ್ತು ನ್ಯಾಯಾಧಿಕರಣವು][1] ತಾನು ಹೊರಡಿಸಿದ ಪ್ರತಿಯೊಂದು ಆದೇಶದ ಪ್ರತಿಯನ್ನು ತಹಸೀಲ್ದಾರನಿಗೆ ಮತ್ತು ಸಂಬಂಧಪಟ್ಟ ಪಕ್ಷಕಾರರಿಗೆ ಕಳುಹಿಸಿಕೊಡತಕ್ಕದ್ದು:

[2][ಪರಂತು, ನ್ಯಾಯಾಧಿಕರಣವು ಪಕ್ಷಕಾರರಲ್ಲಿ ಯಾರೇ ಪಕ್ಷಕಾರರ ಅರ್ಜಿಯ ಮೇಲೆ, ತಾನು ಹೊರಡಿಸಿದ ಯಾವುದೇ ಆದೇಶದಲ್ಲಿನ ಯಾವುದೇ ಲಿಪಿಕ ಅಥವಾ ಗಣಿತೀಯ ತಪ್ಪುಗಳನ್ನು ಸರಿಪಡಿಸಿ ಅದಕ್ಕೆ ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಬಹುದು:][2]

[3][ಮತ್ತು ಪರಂತು, ನ್ಯಾಯಾಧಿಕರಣವು, ತಾನಾಗಿಯೇ ಅಥವಾ ಪಕ್ಷಕಾರರಲ್ಲಿ ಯಾರೇ ಪಕ್ಷಕಾರರ ಅರ್ಜಿಯ ಮೇಲೆ, ತಾನು ಹೊರಡಿಸಿದ ಯಾವುದೇ ಆದೇಶದಲ್ಲಿ ಕಾಣಿಸಿರುವ ಭೂಮಿಯ ವಿಸ್ತೀರ್ಣವನ್ನು, ವಾಸ್ತವಿಕವಾಗಿ ಅಳತೆಯನ್ನು ಮಾಡಿದ ನಂತರ ಹಾಗು ಸಂಬಂಧಪಟ್ಟ ಪಕ್ಷಕಾರರಿಗೆ ತಮ್ಮ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ನಂತರ ಸರಿಪಡಿಸಿ ಅದಕ್ಕೆ ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಬಹುದು,][3]

1. 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ ದಿನಾಂಕ 20.10.1995 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(7) ಅಧಿಭೋಗದಾರನಾಗಿ ನೋಂದಾಯಿತನಾಗಬೇಕಾದ ವ್ಯಕ್ತಿಯು ಐನೇ ಅನುಸೂಚಿಯ ಎ ಭಾಗದಲ್ಲಿ ಉಲ್ಲೇಖಿಸಿರುವ ಎ ದರ್ಜೆಯ ಮತ್ತು ಬಿ ದರ್ಜೆಯ ಮತ್ತು ಸಿ ದರ್ಜೆಯ ಭೂಮಿಗಳ ಸಂದರ್ಭದಲ್ಲಿ 47ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿರುವ ನಿವ್ವಳ ವಾರ್ಷಿಕ ವರಮಾನದ ಹದಿನೈದರಷ್ಟಕ್ಕೆ ಮತ್ತು ಸದರಿ ಎ ಭಾಗದಲ್ಲಿ ಉಲ್ಲೇಖಿಸಿರುವ ಡಿ ದರ್ಜೆಯ ಭೂಮಿಯ ಸಂದರ್ಭದಲ್ಲಿ ಅಂತಹ ವರಮಾನದ ಇಪ್ಪತ್ತರಷ್ಟಕ್ಕೆ ಸಮನಾದ ಮೊಬಲಗನ್ನು ಆ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ಮೊಬಲಗು ಯಾವುದಾದರು ಇದ್ದರೆ ಅದರೊಂದಿಗೆ ಪ್ರೀಮಿಯಂ ಆಗಿ ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು:

ಪರಂತು, ಖಾಯಂ ಗೇಣಿದಾರನು ಸಂದಾಯ ಮಾಡಬೇಕಾದ ಪ್ರೀಮಿಯಂ ಆ ಭೂಮಿಯ ಗೇಣಿಯ ಮತ್ತು ಭೂ ಕಂದಾಯದ ನಡುವಿನ ವ್ಯತ್ಯಾಸದ ಆರರಷ್ಟಿರತಕ್ಕದ್ದು.

(8) ಉಪಪ್ರಕರಣ (1)ರ ಮೇರೆಗೆ ಅನುಮತಿಸಿರುವ ಕಾಲದೊಳಗೆ ಯಾವ ಅರ್ಜಿಯನ್ನೂ ಸಲ್ಲಿಸಿರದಿದ್ದರೆ, ಅಧಿಭೋಗದಾರನಾಗಿ ನೋಂದಾಯಿತನಾಗಬೇಕಾದ ಯಾರೇ ವ್ಯಕ್ತಿಗೆ ಇರುವ ಹಕ್ಕು ಪರಿಣಾಮಕಾರಿಯಾಗಿರತಕ್ಕದ್ದಲ್ಲ.

**48ಬಿ. ಸಂದಾಯ ಮಾಡಬೇಕಾದ ಮೊಬಲಗನ್ನು ತಹಸೀಲ್ದಾರರು ನಿರ್ಧರಿಸುವುದು.–** (1) 48ಎ ಪ್ರಕರಣದ (4)ನೇ ಅಥವಾ (5)ನೇ ಉಪಪ್ರಕರಣದ ಮೇರೆಗೆ ಹೊರಡಿಸಿದ ಆದೇಶವನ್ನು ಸ್ವೀಕರಿಸಿದ ಬಳಿಕ [1][ಮತ್ತು 48ಎ ಪ್ರಕರಣದ (1)ನೇ ಉಪ–ಪ್ರಕರಣದಲ್ಲಿ ಉಪಬಂಧಿಸಿರುವ ಅವಧಿಯೊಳಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರದಿದ್ದರೆ ಭೂ ಮಾಲೀಕನಿಂದ ಅರ್ಜಿಯನ್ನು ಸ್ವೀಕರಿಸಿದ ನಂತರ][1] ತಹಸೀಲ್ದಾರರು 47ನೇ ಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ಮೊಬಲಗನ್ನು ನಿರ್ಧರಿಸಲು ಉಪಕ್ರಮಿಸತಕ್ಕದ್ದು ಮತ್ತು ಹಾಗೆ ನಿರ್ಧರಿಸಿದ ಮೊಬಲಗನ್ನು ಅದಕ್ಕೆ ಹಕ್ಕುಳ್ಳ ವ್ಯಕ್ತಿಗಳಿಗೆ

ಭೂಮಿಯಲ್ಲಿ ಅವರವರಿಗೆ ಇರುವ ಹಿತಾಸಕ್ತಿಯ ಮೌಲ್ಯಕ್ಕನುಸಾರವಾಗಿ ಹಂಚಿಕೆ ಮಾಡಿರುವುದನ್ನು ತೋರಿಸುವ ತಃಖ್ತೆಯನ್ನು ತಯಾರಿಸತಕ್ಕದ್ದು. ಅಂಥ ತಃಖ್ತೆಯು ಈ ಕೆಳಕಂಡ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಯಾವ ಭೂಮಿಗಳ ಸಂಬಂಧದಲ್ಲಿ ಮೊಬಲಗನ್ನು ಸಂದಾಯ ಮಾಡಬೇಕಾಗಿದೆಯೋ ಆ ಭೂಮಿಗಳ ವಿವರಗಳು;

(ಬಿ) ಭೂ ಒಡೆಯನ, ಭೂಮಾಲೀಕನ ಮತ್ತು ಮಧ್ಯವರ್ತಿಗಳು, ಯಾರಾದರೂ ಇದ್ದರೆ, ಅವರ ಮತ್ತು ಭೂಮಿಯಲ್ಲಿ ಹಿತಾಸಕ್ತಿಯುಳ್ಳ ಇತರ ವ್ಯಕ್ತಿಗಳ ಹೆಸರುಗಳು ಮತ್ತು ಅವರಲ್ಲಿ ಪ್ರತಿಯೊಬ್ಬರಿಗೆ ಸಂದಾಯ ಮಾಡಬೇಕಾದ ಮೊಬಲಗು; ಮತ್ತು

(ಸಿ) ನಿಯಮಿಸಬಹುದಾದಂತಹ ಇತರ ವಿವರಗಳು.

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, ಮೊಬಲಗನ್ನು ಪಡೆಯುವುದಕ್ಕೆ ಅಥವಾ ಅದನ್ನು ಹಂಚಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಮೊಬಲಗನ್ನು ಪಡೆಯುವುದಕ್ಕೆ ಹಕ್ಕುಳ್ಳ ವ್ಯಕ್ತಿಗಳೊಳಗೆ ಯಾವುದೇ ಒಪ್ಪಂದವು ಆಗಿರದಿದ್ದರೆ, ತಹಶೀಲ್ದಾರರು ಈ ವಿಷಯವನ್ನು ನ್ಯಾಯಾಲಯಕ್ಕೆ ಉಲ್ಲೇಖಿಸತಕ್ಕದ್ದು. ನ್ಯಾಯಾಲಯವು, ಅಂಥ ಉಲ್ಲೇಖವನ್ನು ಸ್ವೀಕರಿಸಿದ ಬಳಿಕ ಸಂಬಂಧಪಟ್ಟ ಪಕ್ಷಕಾರರಿಗೆ ನೋಟೀಸನ್ನು ಕೊಟ್ಟು, ತನಗೆ ಉಲ್ಲೇಖಿಸಿದ ವಿಷಯವನ್ನು ವಿಚಾರಣೆ ಮಾಡತಕ್ಕದ್ದು ಮತ್ತು ಅದರ ಮೇಲಿನ ನಿರ್ಣಯಗಳನ್ನು ದಾಖಲಿಸತಕ್ಕದ್ದು ಮತ್ತು ಅವುಗಳನ್ನು ತಹಸೀಲ್ದಾರರಿಗೆ ಕಳುಹಿಸತಕ್ಕದ್ದು. ತಹಸೀಲ್ದಾರರು ಅನಂತರ ಸದರಿ ನಿರ್ಣಯಗಳಿಗೆ ಅನುಸಾರವಾಗಿ (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಿದ ತಃಖ್ತೆಯನ್ನು ತಯಾರಿಸತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ 48,48ಎ 48ಬಿ ಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ.

[1][**48ಸಿ. ಮಧ್ಯಕಾಲೀನ ಆದೇಶಗಳು.–** (1) ನ್ಯಾಯಾಧಿಕರಣವು, ತಾನು ನ್ಯಾಯಯುತ ಮತ್ತು ಉಚಿತವೆಂದು ಪರಿಗಣಿಸಿದಾಗ ಹಾಗೂ ತಾನು ವಿಧಿಸಬಹುದಾದಂತಹ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟು, [2][38ನೇ ಪ್ರಕರಣದ ಮೇರೆಗೆ ಅರ್ಜಿಯನ್ನು ಯಾವ ವಾಸದ ಮನೆಯ ಸಂಬಂಧದಲ್ಲಿ ಸಲ್ಲಿಸಲಾಗಿದೆಯೋ ಆ ವಾಸದ ಮನೆಗೆ ಸಂಬಂಧಿಸಿದಂತೆ ಅಥವಾ][2] 48ಎ ಪ್ರಕರಣದ ಮೇರೆಗೆ ಅರ್ಜಿಯನ್ನು ಯಾವ ಭೂಮಿಯ ಸಂಬಂಧದಲ್ಲಿ ಸಲ್ಲಿಸಲಾಗಿದೆಯೋ ಆ ಭೂಮಿಗೆ ಸಂಬಂಧಿಸಿದ ತಾತ್ಕಾಲಿಕ ನಿರ್ಬಂಧಕಾಜ್ಞೆಯ ರೂಪದಲ್ಲಿ ಅಥವಾ ರಿಸೀವರನನ್ನು ನೇಮಿಸಿ ವಾದಕಾಲೀನ ಆದೇಶಗಳನ್ನು ಹೊರಡಿಸಬಹುದು.

(2) ನ್ಯಾಯಾಧಿಕರಣವು (1)ನೇ ಉಪಪ್ರಕರಣ ಮೇರೆಗೆ ತಾನು ಹೊರಡಿಸಿದ ಆದೇಶವನ್ನು ಯಾವುದೇ ಸಮಯದಲ್ಲಿ ರದ್ದುಪಡಿಸಬಹುದು ಅಥವಾ ಮಾರ್ಪಾಡು ಮಾಡಬಹುದು.

[3][(3) ಉಪಪ್ರಕರಣ (2)ರ ಉಪಬಂಧಗಳಿಗೆ ಒಳಪಟ್ಟು, ನ್ಯಾಯಾಧಿಕರಣದ ಆದೇಶವು ಅಂತಿಮವಾದುದಾಗಿರತಕ್ಕದ್ದು.][3]][1]

1. 1976ರ ಅಧಿನಿಯಮ ಸಂಖ್ಯೆ 27ರ ಮೂಲಕ ದಿನಾಂಕ 16.12.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**49. ಗೇಣಿದಾರರ ಒಳಗೇಣಿದಾರರನ್ನು ಅಧಿಭೋಗದಾರರನ್ನಾಗಿ ನೋಂದಾಯಿಸುವುದು.–** ಗೇಣಿದಾರನು ತಾನು ಧಾರಣ ಮಾಡಿರುವ ಭೂಮಿಯನ್ನು ಕಾನೂನುಬದ್ಧವಾದ ರೀತಿಯಲ್ಲಿ ಒಳಗೇಣಿಗೆ ಕೊಟ್ಟಿದ್ದರೆ, ಭೂಮಿಯ ಅಂಥ ಒಳಗೇಣಿದಾರನು ನಿಹಿತವಾಗುವ ದಿನಾಂಕಕ್ಕೆ ಪೂರ್ವದಲ್ಲಿ ಯಾವ ಭೂಮಿಯ ಒಳಗೇಣಿದಾರನಾಗಿದ್ದನೊ ಆ ಭೂಮಿಯ ವಿಸ್ತೀರ್ಣದಷ್ಟರ ಮಟ್ಟಿಗೆ ಗೇಣಿದಾರನನ್ನು ಹೊರತುಪಡಿಸಿ ಮತ್ತು 45ನೇ ಮತ್ತು 46ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿರುವ ಷರತ್ತುಗಳಿಗೆ ಒಳಪಟ್ಟು ಅಧಿಭೋಗದಾರನಾಗಿ ನೋಂದಾಯಿತನಾಗಲು ಒಳ ಗೇಣಿದಾರನು [1][xxx][1] ಹಕ್ಕುಳ್ಳವನಾಗಿರತಕ್ಕದ್ದು.

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**50. ಋಣಭಾರಗಳನ್ನು ಕೊನೆಗೊಳಿಸುವುದು ಮತ್ತು [1][ಮೊಬಲಗಿನ][1] ಸಂದಾಯ.–** (1) [1][48ಬಿ ಪ್ರಕರಣದ ಮೇರೆಗೆ ಮೊಬಲಗನ್ನು ನಿರ್ಧರಿಸುವಾಗ ತಹಶೀಲ್ದಾರರು][1] ಭೂಮಿಯು ನಿಹಿತವಾಗುವ ದಿನಾಂಕದಂದು ಅದರ ಮೇಲೆ ಕಾನೂನುಬದ್ಧವಾಗಿ ಇರುವ ಯಾವುದೇ ಅಡಮಾನವನ್ನು ಅಥವಾ ಇತರ ಋಣಭಾರವನ್ನು ಕೊನೆಗೊಳಿಸತಕ್ಕದ್ದು ಮತ್ತು [2][106ನೇ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಹೊರತು][2] ಅಂಥ ಭೂಮಿಯ ಸಂಬಂಧದಲ್ಲಿನ ಅಡಮಾನದ ಅಥವಾ ಋಣಭಾರದ ಮೇರೆಗೆ ಕೊಡಬೇಕಾಗಿರುವ ಮೊಬಲಗು ಆ ಅಡಮಾನವನ್ನು ಅಥವಾ ಋಣಭಾರವನ್ನು ಸೃಜಿಸಿದ ವ್ಯಕ್ತಿಗೆ ಅಂಥ ಭೂಮಿಯ ಸಂಬಂಧದಲ್ಲಿ ಸಂದಾಯ ಮಾಡಬೇಕಾಗಿರುವ [1][ಮೊಬಲಗಿನ][1] ಮೇಲೆ ಋಣಭಾರವಾಗಿರತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) (ಎ) ಋಣಭಾರಗಳ ಸಂಬಂಧದಲ್ಲಿ ಸಂದಾಯ ಮಾಡಬೇಕಾಗಿರುವ ಒಟ್ಟು ಮೊಬಲಗು ಅಂಥ ಭೂಮಿಯ ಬಗ್ಗೆ ಸಂದಾಯ ಮಾಡಬೇಕಾಗಿರುವ ಮೊಬಲಗಿಗಿಂತ [1][xxx][1] ಕಡಿಮೆಯಿದ್ದಲ್ಲಿ ಅದನ್ನು ಅಂಥ ಮೊಬಲಗಿನಲ್ಲಿ ಕಳೆಯತಕ್ಕದ್ದು ಮತ್ತು ಉಳಿದ ಹಣವನ್ನು ಭೂ ಒಡೆಯನಿಗೆ, ಭೂಮಾಲೀಕನಿಗೆ, ಮಧ್ಯವರ್ತಿಗಳು, ಯಾರಾದರೂ ಇದ್ದರೆ, ಅವರಿಗೆ ಮತ್ತು [2][ಮೊಬಲಗಿನಲ್ಲಿ][2] ಹಿತಾಸಕ್ತಿಯುಳ್ಳ ಇತರ ವ್ಯಕ್ತಿಗಳಿಗೆ ಸಂದಾಯ ಮಾಡತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಬಿ) ಋಣಭಾರಗಳ ಸಂಬಂಧದಲ್ಲಿ ಸಂದಾಯ ಮಾಡಬೇಕಾಗಿರುವ ಒಟ್ಟು ಮೊಬಲಗು ಆ ಭೂಮಿಯ ಸಂಬಂಧದಲ್ಲಿ [1][ಸಂದಾಯ ಮಾಡಬೇಕಾಗಿರುವ ಮೊಬಲಗಿಗಿಂತ][1] ಹೆಚ್ಚಾಗಿದ್ದರೆ, [1][ಸಂದಾಯ ಮಾಡಬೇಕಾಗಿರುವ ಮೊಬಲಗನ್ನು][1] ಆದ್ಯತಾ ಕ್ರಮದಲ್ಲಿ ಋಣಭಾರಗಳ ಧಾರಕರೊಳಗೆ ಹಂಚತಕ್ಕದ್ದು. ಭೂಮಿಯಿಂದ ಬರುವ ಲಾಭದಿಂದ ಜೀವನಾಂಶವನ್ನು ಅಥವಾ ಜೀವನ ನಿರ್ವಾಹಣ ವೆಚ್ಚವನ್ನು ಪಡೆಯಲು ಯಾರೇ ವ್ಯಕ್ತಿಗೆ ಹಕ್ಕಿದ್ದರೆ, [1][ಸಂದಾಯ ಮಾಡಬೇಕಾಗಿರುವ ಮೊಬಲಗಿನಲ್ಲಿ][1] ಅಂಥ ಸಂದಾಯವನ್ನು ಕೂಡ ಕಳೆಯತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(3) ಋಣಭಾರದ ಸಿಂಧುತ್ವದ ಬಗ್ಗೆ ಋಣಭಾರದ ಧಾರಕನ ಕ್ಲೇಮಿನ ಬಗ್ಗೆ ಅಥವಾ ಋಣಭಾರದ ಸಂಬಂಧದಲ್ಲಿ ಸಂದಾಯ ಮಾಡಬೇಕಾಗಿರುವ ಮೊಬಲಗಿನ ಬಗ್ಗೆ ಯಾವುದೇ ಕಾನೂನಿನ ಪ್ರಶ್ನೆಯು ಒಳಗೊಂಡಿದ್ದರೆ ಅಥವಾ ಭೂಮಾಲೀಕನ ಅಥವಾ ಋಣಭಾರದ ಧಾರಕನ ನಡುವೆ ಯಾವುದೇ ಋಣಭಾರದ ಬಗ್ಗೆ ಒಪ್ಪಂದ ಆಗಿರದಿದ್ದರೆ, 132ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ತಹಸೀಲ್ದಾರರು, ಆ ವಿಷಯವನ್ನು ತೀರ್ಮಾನಿಸುವುದಕ್ಕಾಗಿ ನ್ಯಾಯಾಲಯಕ್ಕೆ ಉಲ್ಲೇಖಿಸತಕ್ಕದ್ದು. ಅಂಥ ಉಲ್ಲೇಖವನ್ನು ಸ್ವೀಕರಿಸಿದ ನಂತರ ನ್ಯಾಯಾಲಯವು, ಸಂಬಂಧಪಟ್ಟ ಪಕ್ಷಕಾರರಿಗೆ ನೋಟೀಸನ್ನು ಕೊಟ್ಟ ನಂತರ, ತನಗೆ ಉಲ್ಲೇಖಿಸಿದ ವಿಷಯವನ್ನು ಆದಷ್ಟು ತ್ವರಿತವಾಗಿ ವಿಚಾರಣೆ ಮಾಡತಕ್ಕದ್ದು ಮತ್ತು ಅದರ ಮೇಲೆ ನಿರ್ಣಯಗಳನ್ನು ದಾಖಲಿಸತಕ್ಕದ್ದು ಮತ್ತು ಅವುಗಳನ್ನು ತಹಸೀಲ್ದಾರನಿಗೆ ಕಳುಹಿಸತಕ್ಕದ್ದು. ಅನಂತರ ತಹಸೀಲ್ದಾರರು ಸದರಿ ನಿರ್ಣಯಗಳಿಗನುಸಾರವಾಗಿ ತೀರ್ಮಾನ ನೀಡತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಗೇಣಿ ಬಾಬ್ತು ಅಥವಾ ಗೇಣಿ ಮೇಲೆ ಭೂಮಾಲೀಕನಿಂದ ತಾನು ಧಾರಣ ಮಾಡಿರುವ ಭೂಮಿಯನ್ನು ಖರೀದಿಸುವುದಕ್ಕಾಗಿ ಗೇಣಿದಾರನು ಭೂಮಾಲೀಕನಿಗೆ ಸಂದಾಯ ಮಾಡಿದ ಯಾವುದೇ ಮುಂಗಡವನ್ನು ಭೂಮಿಯ ಮೇಲಿನ ಋಣಭಾರವೆಂದು ಭಾವಿಸತಕ್ಕದ್ದು, ಮತ್ತು ಋಣವನ್ನು ಈ ಪ್ರಕರಣದ ಮೇರೆಗೆ ಅಂಥ ಭೂಮಿಯ ಮೇಲಿನ ಋಣ ಭಾರವನ್ನು ತೀರಿಸುವ ರೀತಿಯಲ್ಲಿ ತೀರಿಸತಕ್ಕದ್ದು.

**51.** [1]**[ಮೊಬಲಗನ್ನು]**[1] **ಸಂದಾಯ ಮಾಡುವ ವಿಧಾನ.–** [2][(1)][2] [3][106ನೇ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಹೊರತು][3], 47ನೇ ಪ್ರಕರಣದ ಮೇರೆಗೆ ಯಾರೇ ವ್ಯಕ್ತಿಗೆ ಸಂದಾಯ ಮಾಡಬೇಕಾಗಿರುವ [1][ಮೊಬಲಗನ್ನು][1] 50ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು,–

(ಎ) ಸಂದಾಯ ಮಾಡಬೇಕಾಗಿರುವ ಮೊಬಲಗು [4][ಎರಡು ಸಾವಿರ ರೂಪಾಯಿಗಳಿಗೆ][4] ಮೀರದೇ ಇದ್ದಲ್ಲಿ, ಒಂದೇ ಮೊತ್ತದಲ್ಲಿ ನಗದಾಗಿ ಸಂದಾಯ ಮಾಡತಕ್ಕದ್ದು; ಮತ್ತು

(ಬಿ) ಸಂದಾಯ ಮಾಡಬೇಕಾಗಿರುವ ಮೊಬಲಗು, [4][ಎರಡು ಸಾವಿರ ರೂಪಾಯಿಗಳಿಗೆ][4] ಮೀರಿದ್ದಲ್ಲಿ, [4][ಎರಡು ಸಾವಿರ ರೂಪಾಯಿಗಳ][4]ವರೆಗಿನ ಮೊಬಲಗನ್ನು ನಗದಾಗಿ ಸಂದಾಯ ಮಾಡತಕ್ಕದ್ದು ಮತ್ತು ಉಳಿದ ಹಣವನ್ನು, ವರ್ಷವೊಂದಕ್ಕೆ ಶೇಕಡ [5][ಐದೂವರೆಯಂತೆ][5] ಬಡ್ಡಿದೊರೆಯುವ ಮತ್ತು ಇಪ್ಪತ್ತು ವರ್ಷಗಳಿಗೆ ಮೀರದಂತೆ ನಿರ್ದಿಷ್ಟಪಡಿಸಿದ ಅವಧಿಯೊಳಗಾಗಿ ವಾಯಿದೆ ತುಂಬುವ ಖಾತ್ರಿ ಮುಖ ಬೆಲೆಯ [6][ಹಸ್ತಾಂತರಮಾಡಲಾಗದ ಮತ್ತು ವರ್ಗಾವಣೀಯವಲ್ಲದ][6] ಬಾಂಡುಗಳ ರೂಪದಲ್ಲಿ ಸಂದಾಯ ಮಾಡತಕ್ಕದ್ದು:

ಪರಂತು, ಈ ಖಂಡದ ಮೇರೆಗೆ ಬಾಂಡುಗಳ ಸಂಬಂಧದಲ್ಲಿ ಸಂದಾಯ ಮಾಡಬೇಕಾಗಿರುವ ಮೊಬಲಗನ್ನು, ನಿಯಮಿಸಬಹುದಾದಂತೆ ಇಪ್ಪತ್ತಕ್ಕೆ ಮೀರದ ಕಂತುಗಳಲ್ಲಿ ಸಂದಾಯ ಮಾಡಬಹುದು:

[7][ಮತ್ತು ಪರಂತು, ಸಂದಾಯವಾಗಬೇಕಾದ ಮೊಬಲಗನ್ನು, ನಿಯಮಿಸಬಹುದಾದ ನಿಯಮಗಳಿಗೆ ಒಳಪಟ್ಟು,–

(i) ಅಪ್ರಾಪ್ತ ವಯಸ್ಕನಿಗೆ, [8][ಅರವತ್ತೈದು ವರ್ಷ ವಯಸ್ಸು ತುಂಬಿರುವ ಒಬ್ಬ ವ್ಯಕ್ತಿಗೆ][8], ಎಂದೂ ಮದುವೆಯನ್ನೆ ಆಗದಿರುವ ಮಹಿಳೆಗೆ, ಸಣ್ಣ ಹಿಡುವಳಿದಾರನಿಗೆ, ನಿಯಮಿಸಿದ ದೈಹಿಕ ಅಥವಾ ಮಾನಸಿಕ ವಿಕಲತೆಗೆ ಒಳಗಾಗಿರುವ ವ್ಯಕ್ತಿಗೆ ಮತ್ತು (ii)ನೇ ಖಂಡಕ್ಕೆ ಒಳಪಟ್ಟು, ವಿಧವೆಗೆ,–

(ಎ) ಸಂದಾಯ ಮಾಡಬೇಕಾದ ಮೊಬಲಗು ಐವತ್ತು ಸಾವಿರ ರೂಪಾಯಿಗಳನ್ನು ಮೀರದಿದ್ದಲ್ಲಿ, ಒಂದೇ ಮೊತ್ತದಲ್ಲಿ; ಮತ್ತು

(ಬಿ) ಸಂದಾಯ ಮಾಡಬೇಕಾಗಿರುವ ಮೊಬಲಗು ಐವತ್ತು ಸಾವಿರ ರೂಪಾಯಿಗಳನ್ನು ಮೀರಿದರೆ, ಮೊದಲ ಐವತ್ತು ಸಾವಿರ ರೂಪಾಯಿಗಳನ್ನು ಒಂದೇ ಮೊತ್ತದಲ್ಲಿ ಹಾಗೂ ಉಳಿದ ಹಣವನ್ನು ವರ್ಷಕ್ಕೆ ಶೇಕಡಾ ಐದೂವರೆಯಂತೆ ಬಡ್ಡಿ ದೊರೆಯುವ, ಹಸ್ತಾಂತರಿಸಲಾಗದ ಮತ್ತು ವರ್ಗಾವಣೀಯವಲ್ಲದ ಮತ್ತು ಇಪ್ಪತ್ತು ವರ್ಷಗಳನ್ನು ಮೀರದಂಥ ನಿರ್ದಿಷ್ಟಪಡಿಸಿದ ಅವಧಿಯೊಳಗೆ ವಾಯಿದೆ ತುಂಬುವ ಖಾತರಿ ಮುಖಬೆಲೆಯ ಬಾಂಡುಗಳ ರೂಪದಲ್ಲಿ;

(ii) ವಿಧವೆಗೆ, ತನ್ನ ಜೀವಿತಾವಧಿಯಲ್ಲಿ ವರ್ಷಾಶನದ ರೂಪದಲ್ಲಿ ಸಂದಾಯ ಮಾಡಬೇಕೆಂದು, ಆಕೆಯು ಆಯ್ಕೆ ಮಾಡಿಕೊಂಡರೆ, 72ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ನಿವ್ವಳ ವಾರ್ಷಿಕ ಆದಾಯಕ್ಕೆ ಕಡಿಮೆಯಿಲ್ಲದಂತೆ, ನಿಯಮಿಸಬಹುದಾದಂಥ ರೀತಿಯಲ್ಲಿ, ನಿರ್ಧರಿಸಿದ ಮೊತ್ತವನ್ನು

–ಸಂದಾಯ ಮಾಡತಕ್ಕದ್ದು.

**ವಿವರಣೆ.–** ಈ ಖಂಡದ ಉದ್ದೇಶಕ್ಕಾಗಿ ವಿಧವೆ, ಅಪ್ರಾಪ್ತ ವಯಸ್ಕ ಮತ್ತು ದೈಹಿಕವಾಗಿ ಅಥವಾ ಮಾನಸಿಕವಾಗಿ ವಿಕಲತೆಗೆ ಒಳಗಾಗಿರುವ ವ್ಯಕ್ತಿ ಈ ಪದಾವಳಿಗಳಲ್ಲಿ, ಸಂದಾಯ ಮಾಡಬೇಕಾಗಿರುವ ಮೊಬಲಗನ್ನು ನಿರ್ಧರಿಸಿದ ಸಮಯದಲ್ಲಿ ಅನುಕ್ರಮವಾಗಿ ವಿಧವೆಯಾಗಿರುವ ಮಹಿಳೆ, ಅಪ್ರಾಪ್ತ ವಯಸ್ಕನಾಗಿರುವ ವ್ಯಕ್ತಿ, ದೈಹಿಕವಾಗಿ ಅಥವಾ ಮಾನಸಿಕವಾಗಿ ವಿಕಲತೆಗೆ ಒಳಗಾಗಿರುವ ವ್ಯಕ್ತಿ ಒಳಗೊಳ್ಳುತ್ತಾರೆ:

ಮತ್ತು ಪರಂತು, ಸಣ್ಣ ಹಿಡುವಳಿದಾರನ ಸಂಬಂಧದಲ್ಲಿ ಎರಡನೇ ಪರಂತುಕವು 1974ರ ಮಾರ್ಚ್ ಮೊದಲನೇ ದಿನದಂದು ಮತ್ತು ಆ ದಿನದಿಂದ ಅದು ಜಾರಿಯಲ್ಲಿದ್ದಿದ್ದರೆ ಹೇಗೋ ಹಾಗೆ ಪರಿಣಾಮಕಾರಿಯಾಗಿರತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1985ರ ಅಧಿನಿಯಮ ಸಂಖ್ಯೆ 35ರ ಮೂಲಕ ದಿನಾಂಕ 27.09.1985 ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

3. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

4. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

5. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

6. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

7. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

8. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(2) ಉಪಪ್ರಕರಣ (1)ರಲ್ಲಿ ಏನೇ ಇದ್ದರೂ, 1984ರ ಮಾರ್ಚ್ 1ರಂದು ಅಥವಾ ಆ ನಂತರ, ಸದರಿ ಉಪಪ್ರಕರಣದ ಎರಡನೇ ಪರಂತುಕದ (1)ನೇ ಉಪಪ್ರಕರಣದ (ಬಿ) ಖಂಡದ ಅನುಸಾರವಾಗಿ ಸಂದಾಯ ಮಾಡಬೇಕಾಗಿರುವ ಉಳಿದ ಹಣವನ್ನು ಅದರ ಮೇಲಿನ ಬಡ್ಡಿಯನ್ನು ಅದರಲ್ಲಿ ನಿರ್ದಿಷ್ಟಪಡಿಸಿದ ಬಾಂಡುಗಳಿಗೆ ಬದಲಾಗಿ, ಈ ಮುಂದಿನ ರೀತಿಯಲ್ಲಿ ಸಂದಾಯ ಮಾಡತಕ್ಕದ್ದು, ಎಂದರೆ:-

(ಎ) 1984ರ 1ನೇ ಮಾರ್ಚ್‌ವರೆಗೆ ವರ್ಷಕ್ಕೆ ಶೇಕಡ ಐದೂವರೆ ದರದಲ್ಲಿ ಪ್ರಾಪ್ತವಾದ ಬಡ್ಡಿಯನ್ನು ಸಂದಾಯ ಮಾಡಿರದಿದ್ದರೆ ಅದನ್ನು ಒಂದಾದಮೇಲೊಂದರಂತೆ ಅನುಕ್ರಮವಾಗಿ ಬರುವ ಐದು ವರ್ಷಗಳಲ್ಲಿ, ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳ ರೂಪದಲ್ಲಿ 1984ರ ಮಾರ್ಚ್ 1ರಿಂದ ಆರಂಭಿಸಿ ಸಾಧ್ಯವಾಗಬಹುದಾದಷ್ಟು ಮಟ್ಟಿಗೆ ಸಮಾನ ಕಂತುಗಳಲ್ಲಿ ಸಂದಾಯ ಮಾಡತಕ್ಕದ್ದು.

(ಬಿ) 1984ರ ಮಾರ್ಚ್, 1ಕ್ಕೆ ಮೊದಲು ಸಂದಾಯ ಮಾಡಬೇಕಾಗಿರುವ, ಆದರೆ ಸಂದಾಯ ಮಾಡದಿರುವ (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಉಳಿದ ಇಡೀ ಹಣವನ್ನು ಅಥವಾ ಸಂದರ್ಭಾನುಸಾರ ಅದರ ಉಳಿದ ಭಾಗವನ್ನು ಒಂದಾದಮೇಲೊಂದರಂತೆ ಅನುಕ್ರಮವಾಗಿ ಬರುವ ಐದು ವರ್ಷಗಳಲ್ಲಿ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳ ರೂಪದಲ್ಲಿ 1ನೇ ಮಾರ್ಚ್ 1984ರಿಂದ ಆರಂಭಿಸಿ ಸಾಧ್ಯವಾದಷ್ಟು ಮಟ್ಟಿಗೆ ಸಮಾನ ಕಂತುಗಳಲ್ಲಿ ಸಂದಾಯ ಮಾಡತಕ್ಕದ್ದು.

(ಸಿ)1984ರ ಮಾರ್ಚ್ ಒಂದರಂದು ಅಥವಾ ಆ ನಂತರ, ಸಂದಾಯ ಮಾಡಬೇಕಾಗಿರುವ ಸದರಿ ಉಳಿದ ಇಡೀ ಹಣವನ್ನು ಅಥವಾ ಸಂದರ್ಭಾನುಸಾರ, ಅದರ ಭಾಗವನ್ನು ಒಂದಾದಮೇಲೊಂದರಂತೆ ಅನುಕ್ರಮವಾಗಿ ಬರುವ ಹತ್ತು ವರ್ಷಗಳಲ್ಲಿ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳ ರೂಪದಲ್ಲಿ ಸದರಿ ದಿನಾಂಕದಿಂದ ಆರಂಭಿಸಿ ಸಾಧ್ಯವಾಗಬಹುದಾದಷ್ಟು ಮಟ್ಟಿಗೆ ಸಮಾನ ಕಂತುಗಳಲ್ಲಿ ಸಂದಾಯ ಮಾಡತಕ್ಕದ್ದು:

ಪರಂತು (ಬಿ) ಮತ್ತು (ಸಿ) ಬಾಬುಗಳಲ್ಲಿ ಉಲ್ಲೇಖಿಸಿದ ಕಂತುಗಳಲ್ಲಿ, ಪ್ರತಿಯೊಂದು ಕಂತಿನೊಂದಿಗೆ 1984ರ ಮಾರ್ಚ್ 1ರಿಂದ ಅದನ್ನು ಸಂದಾಯ ಮಾಡುವ ದಿನಾಂಕದವರೆಗೆ ಪ್ರತಿ ವರ್ಷಕ್ಕೆ ಶೇಕಡ ಐದೂವರೆಯಷ್ಟು ದರದಲ್ಲಿ ಅದರ ಮೇಲಿನ ಬಡ್ಡಿಯನ್ನು ಸಹ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳ ರೂಪದಲ್ಲಿ ಸಂದಾಯ ಮಾಡತಕ್ಕದ್ದು.][1]

1. 1985ರ ಅಧಿನಿಯಮ ಸಂಖ್ಯೆ 35ರ ಮೂಲಕ ದಿನಾಂಕ 27.09.1985 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**52. ಪರಿಹಾರ ಸಂದಾಯ ಮಾಡಿದಾಗ ಪೂರ್ಣ ವಿಮೋಚನೆ ಆಗುವುದು.–** [1][ಮೊಬಲಗನ್ನು][1] ಅಥವಾ ಋಣಭಾರದ, ಜೀವನಾಂಶದ ಅಥವಾ ಜೀವನ ನಿರ್ವಹಣಾ ಭತ್ಯೆಯ ಮೌಲ್ಯವನ್ನು, ಅದನ್ನು ಪಡೆಯಲು ಹಕ್ಕಿರುವ ಭೂ ಒಡೆಯನಿಗೆ, ಭೂಮಾಲೀಕನಿಗೆ ಅಥವಾ ಮಧ್ಯವರ್ತಿಗೆ ಅಥವಾ ಇತರ ವ್ಯಕ್ತಿಗಳಿಗೆ ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ನಿಯಮಿಸಿದ ರೀತಿಯಲ್ಲಿ ಸಂದಾಯ ಮಾಡಿದಾಗ ಪರಿಹಾರವನ್ನು ಸಂದಾಯ ಮಾಡಲು, ಇರುವ ಹೊಣೆಗಾರಿಕೆಯು ಸಂಪೂರ್ಣವಾಗಿ ವಿಮೋಚನೆ ಆದಂತೆ ಆಗತಕ್ಕದ್ದು ಮತ್ತು ಆ [1][ಮೊಬಲಗಿನ][1] ಸಂದಾಯಕ್ಕಾಗಿ ರಾಜ್ಯ ಸರ್ಕಾರದ ಅಥವಾ ಇತರ ಯಾರೇ ವ್ಯಕ್ತಿಯ ಮೇಲೆ ಮತ್ತೆ ಯಾವುವೇ ಕ್ಲೇಮುಗಳನ್ನು ಮಾಡಲು ಅವಕಾಶ ಇರತಕ್ಕದ್ದಲ್ಲ.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**53. ಗೇಣಿದಾರನಿಂದ ಪ್ರೀಮಿಯಂನ ಸಂದಾಯ.–** [1][(1) ಗೇಣಿದಾರನು ಅಥವಾ ಒಳಗೇಣಿದಾರನು 45ನೇ ಪ್ರಕರಣದ ಮೇರೆಗೆ ಯಾವ ಭೂಮಿಯ ಅಧಿಭೋಗದಾರನೆಂದು ನೋಂದಾಯಿತನಾಗಲು ಹಕ್ಕುಳ್ಳವನಾಗಿದ್ದಾನೋ ಆ ಭೂಮಿಯ ಸಂಬಂಧದಲ್ಲಿ ಪ್ರೀಮಿಯಂನ ಮೊಬಲಗನ್ನು ಗೇಣಿದಾರನು ಅಥವಾ ಒಳಗೇಣಿದಾರನು,–

[2][(i) ಸಂದಾಯ ಮಾಡಬೇಕಾದ ಮೊಬಲಗು ಎರಡು ಸಾವಿರ ರೂಪಾಯಿಗಳನ್ನು ಮೀರದಿದ್ದಲ್ಲಿ, ಒಂದೇ ಮೊತ್ತದಲ್ಲಿ;

(ii) ಇತರೆ ಸಂದರ್ಭಗಳಲ್ಲಿ,–

(ಎ) ಒಂದೇ ಮೊತ್ತದಲ್ಲಾಗಲೀ; ಅಥವಾ

(ಬಿ) ಅವನು ಮೊಬಲಗನ್ನು ಆತನ ಸ್ವಂತ ನಿಧಿಯಿಂದ ಸಂದಾಯ ಮಾಡುವುದಾದರೇ, 48ಎ ಪ್ರಕರಣದ (4)ನೇ ಉಪಪ್ರಕರಣದ ಅಥವಾ (5)ನೇ ಉಪಪ್ರಕರಣದ ಮೇರೆಗಿನ ಆದೇಶದ ದಿನಾಂಕದಿಂದ ವರ್ಷಕ್ಕೆ ಶೇಕಡಾ ಐದೂವರೆಯಂತೆ ಬಡ್ಡಿಯೊಂದಿಗೆ ಅವನು ಸೂಚಿಸಬಹುದಾದಂತೆ ಇಪ್ಪತ್ತನ್ನು ಮೀರದಂಥ ಸಂಖ್ಯೆಯ ವಾರ್ಷಿಕ ಕಂತುಗಳಲ್ಲಿಯಾಗಲೀ ಮತ್ತು ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು ಅಥವಾ ಕ್ರೆಡಿಟ್ ಏಜೆನ್ಸಿಯು ಹಣವನ್ನು ಸಾಲವಾಗಿ ನೀಡಿದ್ದರೆ, ಅದರ ಮೇಲೆ ಬಡ್ಡಿ ಇಲ್ಲದೆ ಅಂಥ ಬ್ಯಾಂಕು ಅಥವಾ ಏಜೆನ್ಸಿಯು ಮಂಜೂರು ಮಾಡಿದ ಅವಧಿ ಸಾಲದ ವಸೂಲಿಗಾಗಿ ಅನುಮತಿಸಿದ ಗರಿಷ್ಠ ಸಂಖ್ಯೆಯನ್ನು ಮೀರದಂಥ ಸಂಖ್ಯೆಯ ವಾರ್ಷಿಕ ಕಂತುಗಳಲ್ಲಿಯಾಗಲಿ ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು:][2]

ಪರಂತು, ಸಂದಾಯವು ಕಂತುಗಳಲ್ಲಿ ಸಂದಾಯ ಮಾಡಿದಲ್ಲಿ ಎರಡು ಸಾವಿರ ರೂಪಾಯಿಗಳನ್ನು ಮೊದಲ ಕಂತಾಗಿ ಮತ್ತು ಉಳಿದ ಹಣವನ್ನು ಸಮಾನ ವಾರ್ಷಿಕ ಕಂತುಗಳಲ್ಲಿ ಸಂದಾಯ ಮಾಡತಕ್ಕದ್ದು:

[3][ಮತ್ತು ಪರಂತು, ವ್ಯಕ್ತಿಯನ್ನು ಯಾವ ಭೂಮಿಯ ಅಧಿಭೋಗದಾರನನ್ನಾಗಿ ನೋಂದಾಯಿಸಬೇಕಾಗಿದೆಯೋ ಆ ಭೂಮಿಯ ವಿಸ್ತೀರ್ಣವು ಅವನು ಧಾರಣ ಮಾಡಿರುವ ಇತರ ಭೂಮಿ ಯಾವುದಾದರೂ ಇದ್ದರೆ ಅದು ಸೇರಿದಂತೆ 'ಡಿ' ದರ್ಜೆಯ ಭೂಮಿಯ ಹತ್ತು ಎಕರೆಗಳನ್ನು ಅಥವಾ ಪರಿಶಿಷ್ಟ–1ರ ಬಿ ಭಾಗದಲ್ಲಿ ನಿರ್ದಿಷ್ಟಪಡಿಸಿದ ಸೂತ್ರಕ್ಕನುಸಾರವಾಗಿ ನಿರ್ಧರಿಸಿದ ಪರಿಶಿಷ್ಟ–1ರ ಎ ಭಾಗದಲ್ಲಿ ನಿರ್ದಿಷ್ಟಪಡಿಸಿದ ಇತರೆ ಭೂಮಿಯ ಒಂದು ಅಥವಾ ಹೆಚ್ಚಿನ ದರ್ಜೆಗಳನ್ನು ಒಳಗೊಂಡ ಅದಕ್ಕೆ ಸಮಾನವಾದ ವಿಸ್ತೀರ್ಣವನ್ನು ಮೀರಿರದಿದ್ದರೆ, [4][ಕರ್ನಾಟಕ ಭೂ ಸುಧಾರಣೆಗಳ (ಎರಡನೇ ತಿದ್ದುಪಡಿ) ಅಧಿನಿಯಮ, 1990ರ ಪ್ರಾರಂಭದಂದು ಅಥವಾ ನಂತರ ಸಂದಾಯ ಮಾಡಬೇಕಾಗಿರುವ ಮತ್ತು ಸದರಿ ದಿನಾಂಕಕ್ಕೆ ಮೊದಲು ಸಂದಾಯ ಮಡಬೇಕಾಗಿದ್ದ, ಆದರೆ ಸಂದಾಯ ಮಾಡದಿರುವ ಪ್ರೀಮಿಯಂಯನ್ನು ಮತ್ತು ಕಂತುಗಳನ್ನು ಸಂದಾಯ ಮಾಡುವುದರಿಂದ ಅವನಿಗೆ ವಿನಾಯಿತಿ ನೀಡತಕ್ಕದ್ದು.][4]][3]

(1ಎ)ಅಧಿಭೋಗದಾರನಾಗಿ ನೊಂದಾಯಿತನಾದ ಪ್ರತಿಯೊಬ್ಬ ಗೇಣಿದಾರನು ನಿಯಮಿಸಬಹುದಾದಂಥ ನಿಯಮಗಳಿಗನುಸಾರವಾಗಿ, ಪ್ರೀಮಿಯಂಯನ್ನು ಸಂದಾಯ ಮಾಡುವುದಕ್ಕಾಗಿ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕ್‌ನಿಂದ ಅಥವಾ ಕರ್ನಾಟಕ ಕೃಷಿ ಸಾಲ ಕಾರ್ಯಾಚರಣೆಗಳು ಮತ್ತು

ಸಂಕೀರ್ಣ ಉಪಬಂಧಗಳ ಅಧಿನಿಯಮ, 1974ರಲ್ಲಿ (1975ರ ಕರ್ನಾಟಕ ಅಧಿನಿಯಮ 2) ಪರಿಭಾಷಿಸಿರುವಂಥ ಕ್ರೆಡಿಟ್ ಏಜೆನ್ಸಿಗಳಿಂದ, ನೆರವನ್ನು ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು:

[5][xxx][5]][1]

1. 1977ರ ಅಧಿನಿಯಮ ಸಂಖ್ಯೆ 12ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ (1) ಮತ್ತು (1ಎ) ಉಪಪ್ರಕರಣವನ್ನು ಪ್ರತ್ಯಾಯೋಜಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 25.11.1980 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1986ರ ಅಧಿನಿಯಮ ಸಂಖ್ಯೆ 19ರ ಮೂಲಕ ದಿನಾಂಕ 06.12.1985 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

4. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

5. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ 25.11.1980 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(1ಬಿ) ಕರ್ನಾಟಕ ಸಹಕಾರಿ ಸಂಘಗಳ ಅಧಿನಿಯಮ, 1959ರಲ್ಲಿ ಏನೇ ಒಳಗೊಂಡಿದ್ದರೂ, (1ಎ) ಉಪಪ್ರಕರಣದ ಮೇರೆಗೆ ರಚಿಸಿದ ನಿಯಮಗಳ ಮೇರೆಗೆ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು, ಗೇಣಿದಾರರಿಗೆ ಸಾಲವಾಗಿ ನೀಡಿದ ಮೊಬಲಗನ್ನು, ಭೂಕಂದಾಯದ ಬಾಕಿಗಳನ್ನು ವಸೂಲಿ ಮಾಡುವ ರೀತಿಯಲ್ಲೇ ರಾಜ್ಯ ಸರ್ಕಾರವು ವಸೂಲಿ ಮಾಡಬಹುದು ಮತ್ತು ಸದರಿ ಬ್ಯಾಂಕಿಗೆ ಸಂದಾಯ ಮಾಡಬಹುದು.

(1ಸಿ) ಕ್ರೆಡಿಟ್ ಏಜೆನ್ಸಿಯು ಗೇಣಿದಾರರಿಗೆ ಸಾಲವಾಗಿ ನೀಡಿದ ಮೊಬಲಗನ್ನು, ಕರ್ನಾಟಕ ಕೃಷಿ ಸಾಲ ಕಾರ್ಯಾಚರಣೆಗಳು ಮತ್ತು ಸಂಕೀರ್ಣ ಉಪಬಂಧಗಳ ಅಧಿನಿಯಮ, 1974ರಲ್ಲಿ ಕೃಷಿ ಉದ್ದೇಶಗಳಿಗಾಗಿ ವ್ಯಕ್ತಿಗೆ ಅದು ನೀಡಿದ ಯಾವುದೇ ಹಣಕಾಸು ನೆರವಿನ ವಸೂಲಿಗೆ ಉಪಬಂಧಸಿರುವಂಥ ರೀತಿಯಲ್ಲಿಯೇ ವಸೂಲಿ ಮಾಡಬಹುದು.][1]

1. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ (1ಬಿ) ಮತ್ತು (1ಸಿ) ಉಪಪ್ರಕರಣಗಳನ್ನು ಸೇರಿಸಲಾಗಿದೆ.

(2) ಸಂದಾಯ ಮಾಡಬೇಕಾಗಿರುವ ಪ್ರೀಮಿಯಂ ಜೊತೆಗೆ, ಆ ಭೂಮಿಗೆ ಕೊಡಬೇಕಾದ ಭೂಕಂದಾಯವನ್ನು ಸಂದಾಯ ಮಾಡಲೂ ಸಹ ಗೇಣಿದಾರನು ಹೊಣೆಗಾರನಾಗಿರತಕ್ಕದ್ದು.

[1][**53ಎ. ಪ್ರತ್ಯೇಕ ನಿಧಿಯ ಸ್ಥಾಪನೆ.–** (1) ಕರ್ನಾಟಕ ಧಾರ್ಮಿಕ ಮತ್ತು ಧರ್ಮಾದಾಯ ಸಂಸ್ಥೆಗಳ ವರ್ಷಾಸನ ನಿಧಿ ಎಂದು ಕರೆಯಲಾಗುವ ನಿಧಿಯನ್ನು ಕರ್ನಾಟಕ ರಾಜ್ಯಕ್ಕಾಗಿ ಸ್ಥಾಪಿಸತಕ್ಕದ್ದು.

(2) ಉಪ ಪ್ರಕರಣ (1)ರಲ್ಲಿ ನಿರ್ದಿಷ್ಟಪಡಿಸಿದ ನಿಧಿಯು,–

(ಎ) 106ನೇ ಪ್ರಕರಣದಲ್ಲಿ ಉಲ್ಲೇಖಿಸಿದ ಸಂಸ್ಥೆಗಳಿಗೆ ಸೇರಿದ ಭೂಮಿಯ ಗೇಣಿದಾರರಿಂದ ಅಥವಾ ಒಳಗೇಣಿದಾರರಿಂದ ಸಂಗ್ರಹಿಸಿದ ಪ್ರಿಮಿಯಂ ಮೊಬಲಗನ್ನು;

(ಬಿ) ಸದರಿ ನಿಧಿಯಲ್ಲಿನ ಹಣದ ಮೇಲೆ ಗಳಿಸಿದ ಬಡ್ಡಿಯನ್ನು;

(ಸಿ) ಅಂಥ ಸಂಸ್ಥೆಗಳಿಗೆ ವರ್ಷಾಸನವನ್ನು ಸಂದಾಯ ಮಾಡಲು ಮೇಲಿನ ಖಂಡಗಳಲ್ಲಿ ತಿಳಿಸಿದ ಮೊಬಲಗು ಸಾಕಷ್ಟಿಲ್ಲದಿದ್ದರೆ, ಆ ಕೊರತೆಯನ್ನು ತುಂಬಿಸಲು ಅವಶ್ಯಕವಾಗಬಹುದಾದಂಥ ರಾಜ್ಯ ಸಂಚಿತ ನಿಧಿಯಿಂದ ವರ್ಗಾವಣೆ ಮಾಡಿದ ಮೊಬಲಗನ್ನು ಒಳಗೊಳ್ಳುತ್ತದೆ.

(3) ಉಪಪ್ರಕರಣ (2)ರ (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಮೊಬಲಗನ್ನು, ರಾಜ್ಯ ಸಂಚಿತ ನಿಧಿಗೆ ಮೊದಲು ಜಮಾ ಮಾಡತಕ್ಕದ್ದು. ಆ ಮೊಬಲಗನ್ನು ಹಾಗೂ (2)ನೇ ಉಪಪ್ರಕರಣದ (ಸಿ) ಖಂಡದಲ್ಲಿ ಉಲ್ಲೇಖಿಸಿದ ಮೊಬಲಗನ್ನು ಆ ತರುವಾಯ ಈ ಸಂಬಂಧದಲ್ಲಿ ಕಾನೂನಿನ ಮೂಲಕ ವಿದ್ಯುಕ್ತವಾಗಿ ಮಾಡಿದ ಧನ ವಿನಿಯೋಗದ ಅನುಸಾರ ಸದರಿ ನಿಧಿಯಲ್ಲಿ ನಮೂದು ಮಾಡತಕ್ಕದ್ದು ಮತ್ತು ಆ ನಿಧಿಗೆ ವರ್ಗಾವಣೆ ಮಾಡತಕ್ಕದ್ದು. ಸದರಿ ನಿಧಿಗೆ ಜಮೆಯಾದ ಮೊಬಲಗನ್ನು ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ರೀತಿಯಲ್ಲಿ ತೊಡಗಿಸಬಹುದು.

(4) ಸದರಿ ಸಂಸ್ಥೆಗಳಿಗೆ ಸಂದಾಯ ಮಾಡಬೇಕಾದ ವರ್ಷಾಸನಗಳನ್ನು ಸದರಿ ನಿಧಿಯಿಂದ ಸಂದಾಯ ಮಾಡತಕ್ಕದ್ದು.][1]

1. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 1.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**54. ಪ್ರಿಮಿಯಂಯನ್ನು ಭೂಕಂದಾಯದ ಬಾಕಿಯಂತೆ ವಸೂಲೀ ಮಾಡುವಂತದ್ದು ಆಗಿರುವುದು.–** (1) ಈ ಹಿಂದಿನ ಪ್ರಕರಣಗಳ ಉಪಬಂಧಗಳಿಗನುಸಾರವಾಗಿ ಗೇಣಿದಾರನು ಅಥವಾ ಒಳಗೇಣಿದಾರನು ಯಾವುದೇ ಕಂತನ್ನು ಸಂದಾಯ ಮಾಡಲು ತಪ್ಪಿದರೆ, [1][xxx][1] ಅಂಥ ಕಂತಿನ ಹಣವು ಸಹ ಭೂ ಕಂದಾಯದ ಬಾಕಿಯಂತೆ ವಸೂಲಿ ಮಾಡುವಂತದ್ದು ಆಗಿರತಕ್ಕದ್ದು.

1. 1977ರ ಅಧಿನಿಯಮ ಸಂಖ್ಯೆ 12ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ಉಪಪ್ರಕರಣ (1)ರ ಮೇರೆಗೆ ವಸೂಲು ಮಾಡಿದ ಹಣವನ್ನು [1][ತಹಶೀಲ್ದಾರರ][1] ಬಳಿ ಠೇವಣಿ ಇಡತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**55. ನೋಂದಣಿ ಪ್ರಮಾಣ ಪತ್ರದ ನೀಡಿಕೆ.–** [2][(1)][2] [3][ನಿಯಮಿಸಬಹುದಾದ ನಿಯಮಗಳಿಗೆ ಒಳಪಟ್ಟು 48ಎ ಪ್ರಕರಣದ (4)ನೇ ಉಪಪ್ರಕರಣ ಅಥವಾ (5)ನೇ ಉಪಪ್ರಕರಣದ ಮೇರೆಗೆ ಹೊರಡಿಸಿದ ಅಂತಿಮ ಆದೇಶಗಳನ್ನು ಸ್ವೀಕರಿಸಿದ ಮೇಲೆ,][3] ತಹಸೀಲ್ದಾರರು, ಗೇಣಿದಾರನನ್ನು ಅಧಿಭೋಗದಾರನನ್ನಾಗಿ ನೋಂದಾಯಿಸಲಾಗಿದೆ ಎಂಬ ಪ್ರಮಾಣ ಪತ್ರವನ್ನು ನೀಡತಕ್ಕದ್ದು. ಆ ಪ್ರಮಾಣ ಪತ್ರವು ಅಂಥ ನೋಂದಣಿಯ ನಿರ್ಣಾಯಕ ಸಾಕ್ಷ್ಯವಾಗಿರತಕ್ಕದ್ದು;][1]

[4][ಪರಂತು, x x x][4]

1. 1977ರ ಅಧಿನಿಯಮ ಸಂಖ್ಯೆ 12ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

3. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 25.11.1980 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

4. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ 25.11.1980 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(2) ತಹಸೀಲ್ದಾರರು (1)ನೇ ಉಪಪ್ರಕರಣದ ಮೇರೆಗೆ ನೀಡಿದ ಪ್ರಮಾಣ ಪತ್ರದ ಪ್ರತಿಯನ್ನು ಸಂಬಂಧಪಟ್ಟ ಸಬ್ ರಿಜಿಸ್ಟ್ರಾರ್‌ರಿಗೆ ಕಳುಹಿಸಿಕೊಡತಕ್ಕದ್ದು. ಅವರು, ನೋಂದಣಿ ಅಧಿನಿಯಮ, 1908ರಲ್ಲಿ (1908ರ ಕೇಂದ್ರ ಅಧಿನಿಯಮ 16) ಅಥವಾ ಇತರ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ ಅದನ್ನು ನೋಂದಾಯಿಸತಕ್ಕದ್ದು.][1]

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 1.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][56. x x x][1]

1. 1977ರ ಅಧಿನಿಯಮ ಸಂಖ್ಯೆ 12ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**57. ಅಪ್ರಾಪ್ತ ವಯಸ್ಕರು, ವಿಕಲತೆಯುಳ್ಳ ವ್ಯಕ್ತಿಗಳು, ಮುಂತಾದವರಿಗೆ ಅನ್ವಯಿಸುವ ಉಪಬಂಧಗಳು.–** (1) ಈ ಅಧ್ಯಾಯದ ಹಿಂದಿನ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಗೇಣಿದಾರನು ಅಪ್ರಾಪ್ತ ವಯಸ್ಕನಾಗಿದ್ದರೆ ಅಥವಾ ಯಾವುದೇ ಮಾನಸಿಕ ಅಥವಾ ದೈಹಿಕ ವಿಲತೆಗೆ ಒಳಗಾದ ವ್ಯಕ್ತಿಯಾಗಿದ್ದರೆ ಅಥವಾ [1][ಒಕ್ಕೂಟದ ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಸೈನಿಕನಾಗಿದ್ದರೆ ಅಥವಾ ನಾವಿಕನಾಗಿದ್ದರೆ,][1] [2][ಥಥಥ][2] 45ನೆಯ ಪ್ರಕರಣದ ಮೇರೆಗೆ ಗೇಣಿದಾರನ ಹಕ್ಕನ್ನು,–

(i) ಅಪ್ರಾಪ್ತ ವಯಸ್ಕನು, ಅವನು ಪ್ರಾಪ್ತವಯಸ್ಕನಾದ ದಿನಾಂಕದಿಂದ ಒಂದು ವರ್ಷದೊಳಗೆ;

(ii) ದೈಹಿಕ ಅಥವಾ ಮಾನಸಿಕ ವಿಕಲತೆಗೆ ಒಳಗಾಗಿರುವ ವ್ಯಕ್ತಿಯು, ಅಂಥ ವಿಕಲತೆಯು ಇಲ್ಲದಂಥಾದ ದಿನಾಂಕದಿಂದ ಒಂದು ವರ್ಷದೊಳಗೆ;

[1][(iii) ಸೈನಿಕನು, ಅವನು ಸಶಸ್ತ್ರ ಪಡೆಗಳಿಂದ ಬಿಡುಗಡೆಯಾದ ಅಥವಾ ಮೀಸಲು ಪಡೆಗೆ ಅವನನ್ನು ಕಳುಹಿಸಿದ ದಿನಾಂಕದಿಂದ ಒಂದು ವರ್ಷದೊಳಗೆ;

(iv) ನಾವಿಕನು, ಅವನು ನಾವಿಕನಾಗಿರುವುದು ಕೊನೆಗೊಂಡ ದಿನಾಂಕದಿಂದ ಒಂದು ವರ್ಷದೊಳಗೆ – ಚಲಾಯಿಸಬಹುದು.][1]

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ 1.3.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ಆ ತರುವಾಯ, ಈ ಅಧ್ಯಾಯದ ಹಿಂದಿನ ಪ್ರಕರಣಗಳ ಉಪಬಂಧಗಳು, ಯಥೋಚಿತ ವ್ಯತ್ಯಾಸಗಳೊಂದಿಗೆ, ರಾಜ್ಯ ಸರ್ಕಾರದಲ್ಲಿ ನಿಹಿತವಾಗುವಂಥ ಭೂಮಿಗೆ ಅನ್ವಯವಾಗತಕ್ಕದ್ದು.

[1][**58. ಈ ಅಧಿನಿಯಮಕ್ಕೆ ತದ್ವಿರುದ್ಧವಾಗಿ ಗೇಣಿಗೆ ನೀಡಿದ ಭೂಮಿಯು ರಾಜ್ಯ ಸರ್ಕಾರದಲ್ಲಿ ನಿಹಿತವಾಗುವುದು.–** (1) ಈ ಅಧಿನಿಯಮದ ಉಪಬಂಧಗಳಿಗೆ ತದ್ವಿರುದ್ಧವಾಗಿ ಯಾರೇ ವ್ಯಕ್ತಿಯು ಭೂಮಿಯನ್ನು ಗೇಣಿಗೆ ಕೊಟ್ಟಿದ್ದಾನೆಂದು ತಹಸೀಲ್ದಾರರಿಗೆ ಕಂಡುಬಂದರೆ, ಅವರು ಆ ವ್ಯಕ್ತಿಗೆ ನೋಟೀಸನ್ನು ನೀಡಿ ಗೇಣಿಗೆ ನೀಡಿರುವ ಈ ಭೂಮಿಯನ್ನು ಅಧಿನಿಯಮವನ್ನು ಉಲ್ಲಂಘಿಸಿರುವುದಕ್ಕೆ ದಂಡವಾಗಿ ರಾಜ್ಯ ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬುದಕ್ಕೆ ನೋಟೀಸನ್ನು ಜಾರಿ ಮಾಡಿದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಕಾರಣವನ್ನು ತೋರಿಸುವಂತೆ ಕೇಳಬಹುದು.

(2) ಉತ್ತರವನ್ನು ಅಥವಾ ತೋರಿಸಿದ ಇತರ ಕಾರಣವನ್ನು ಪರಿಶೀಲಿಸಿದ ತರುವಾಯ ಅಂಥ ಗೇಣಿಯು ಇದೆಯೆಂದು ತಹಸೀಲ್ದಾರರಿಗೆ ಮನದಟ್ಟಾದರೆ, ಆ ಭೂಮಿಯಲ್ಲಿ ಅಂಥ ವ್ಯಕ್ತಿಯು ಹೊಂದಿರುವ ಹಕ್ಕನ್ನು, ಹಕ್ಕು ಸ್ವಾಮ್ಯವನ್ನು ಮತ್ತು ಹಿತಾಸಕ್ತಿಯನ್ನು ದಂಡವಾಗಿ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳತಕ್ಕದೆಂದು ಆದೇಶದ ಮೂಲಕ ಅವರು ಘೋಷಿಸಬಹುದು. ಆನಂತರ ಆ ಭೂಮಿಯು ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು ಮತ್ತು ತಹಸೀಲ್ದಾರರು ಅದರ ಅಧಿಭೋಗದಲ್ಲಿರುವ ಯಾರೇ ವ್ಯಕ್ತಿಯನ್ನು ಕೂಡಲೇ ಒಕ್ಕಲೆಬ್ಬಿಸುವ ಮೂಲಕ ಆ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು. [1][ಅಂತಹ ಭೂಮಿಗೆ ಯಾವುದೇ ಹಣವನ್ನು ಸಂದಾಯ ಮಾಡತಕ್ಕದ್ದಲ್ಲ.][1]

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) ಅಂತಹ ಭೂಮಿಯನ್ನು 77ನೇ ಪ್ರಕರಣದ ಉಪಬಂಧಗಳಿಗನುಸಾರವಾಗಿ ವಿಲೆ ಮಾಡತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][59. x x x][1]

1. 1977ರ ಅಧಿನಿಯಮ ಸಂಖ್ಯೆ 12ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**60. ಸ್ವತಃ ಸಾಗುವಳಿ ಮಾಡಲು ತಪ್ಪುವುದು.–** ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಹಿಂದಿನ ಉಪಬಂಧಗಳ ಪೈಕಿ ಯಾವುದೇ ಉಪಬಂಧದ ಮೇರೆಗೆ, ಗೇಣಿದಾರನು ಅಧಿಭೋಗದಾರನಾಗಿ [1][xxx][1] ನೋಂದಾಯಿತನಾದ ಮೇಲೆ ಯಾವುದೇ ಕಾಲದಲ್ಲಿ, ಅಂಥ ಗೇಣಿದಾರನು [2][ನಿರಂತರ ಮೂರು ವರ್ಷಗಳವರೆಗೆ ಭೂಮಿಯನ್ನು ಸ್ವತಃ ಸಾಗುವಳಿ ಮಾಡಲು ತಪ್ಪಿದರೆ][2] ಹಾಗೆ ತಪ್ಪಿರುವುದನ್ನು ಸಾಕಷ್ಟು ಕಾರಣಗಳಿಗಾಗಿ [2][ತಹಶೀಲ್ದಾರರು][2] ಮನ್ನಿಸದಿದ್ದರೆ ಅವನನ್ನು ಭೂಮಿಯಿಂದ ಒಕ್ಕಲೆಬ್ಬಿಸತಕ್ಕದ್ದು ಮತ್ತು ಭೂಮಿಯನ್ನು 77ನೇ ಪ್ರಕರಣದ ಉಪಬಂಧಗಳಿಗನುಸಾರವಾಗಿ ವಿಲೆ ಮಾಡತಕ್ಕದ್ದು.

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**61. ಗೇಣಿದಾರನು ಅಧಿಭೋಗದಾರನಾಗಿರುವ ಭೂಮಿಯ ವರ್ಗಾವಣೆಗೆ ನಿರ್ಬಂಧ.–** (1) ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಈ ಅಧ್ಯಾಯದ [1][xxx][1] ಮೇರೆಗೆ ಯಾರೇ ವ್ಯಕ್ತಿಗೆ ಯಾವ ಭೂಮಿಯ ಅಧಿಭೋಗವನ್ನು [2][xxx][2] ಮಂಜೂರು ಮಾಡಲಾಗಿದೆಯೋ ಆ ಯಾವುದೇ ಭೂಮಿಯನ್ನು [3][48ಎ ಪ್ರಕರಣದ (4)ನೇ ಉಪಪ್ರಕರಣದ ಅಥವಾ (5)ನೇ ಉಪಪ್ರಕರಣದ ಅಥವಾ 5(ಎ) ಉಪಪ್ರಕರಣದ ಮೇರೆಗೆ ನ್ಯಾಯಾಧಿಕರಣವು ಅಂತಿಮ ಆದೇಶವನ್ನು ಹೊರಡಿಸಿದ ದಿನಾಂಕದಿಂದ][3] [4][ಹದಿನೈದು ವರ್ಷಗಳೊ][4]ಳಗಾಗಿ, ಮಾರಾಟದ, ದಾನದ, ವಿನಿಮಯದ, ಅಡಮಾನದ, ಗೇಣಿಯ ಅಥವಾ ಹಸ್ತಾಂತರಣದ ಮೂಲಕ ವರ್ಗಾವಣೆ ಮಾಡತಕ್ಕದ್ದಲ್ಲ. ಆದರೆ, ಆ ಭೂಮಿಯನ್ನು ಧಾರಕನ ಅವಿಭಕ್ತ ಕುಟುಂಬದ ಸದಸ್ಯರೊಳಗೆ [5][xxx][5] ವಿಭಾಗ ಮಾಡಿಕೊಳ್ಳಬಹುದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1998ರ ಅಧಿನಿಯಮ ಸಂಖ್ಯೆ 34ರ ಮೂಲಕ ದಿನಾಂಕ 15.02.1999 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

4. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

5. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ ದಿನಾಂಕ 20.10.1995 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(2) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, ಅಧಿಭೋಗದಾರನಾಗಿ ನೋಂದಾಯಿತನಾಗಿರುವ ಅಧಿಭೋಗದಾರನು ಅಥವಾ ಹಕ್ಕು ಸ್ವಾಮ್ಯ ಹೊಂದಿರುವ ಅವನ ವಾರಸುದಾರನು, ಭೂಮಿಯ ಅಭಿವೃದ್ಧಿಗಾಗಿ ಅಥವಾ ಕೃಷಿ ಪದ್ಧತಿಗಳಲ್ಲಿ ಸುಧಾರಣೆ ತರುವ ಸಲುವಾಗಿ ಸಾಲವನ್ನು ಅಥವಾ [2][ಅಂಥ ವ್ಯಕ್ತಿಯ ಮಕ್ಕಳ ಉನ್ನತ ವ್ಯಾಸಂಗಕ್ಕಾಗಿ ಶೈಕ್ಷಣಿಕ ಸಾಲವನ್ನು][2] [3][ಹಣಕಾಸು ಸಂಸ್ಥೆಯಿಂದ, ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕಿನಿಂದ, ಸಹಕಾರಿ ಸಂಘದಿಂದ][3] ಅಥವಾ ಕಂಪನಿಗಳ ಅಧಿನಿಯಮ, 1956ರ 3ನೇ ಪ್ರಕರಣದಲ್ಲಿ ಪರಿಭಾಷಿಸಿರುವ ಯಾವ ಕಂಪನಿಯಲ್ಲಿ ಶೇಕಡ ಐವತ್ತೊಂದಕ್ಕೆ ಕಡಿಮೆ ಇಲ್ಲದಷ್ಟು ಸಂದಾಯಿತ ಷೇರು ಬಂಡವಾಳವನ್ನು ರಾಜ್ಯ ಸರ್ಕಾರವು ಹೊಂದಿದೆಯೋ ಆ ಕಂಪನಿಯಿಂದ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಥವಾ ಅವೆರಡು ಸರ್ಕಾರಗಳ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ನಿಗಮದಿಂದ ತೆಗೆದುಕೊಳ್ಳುವುದು ಮತ್ತು ಭೂಮಿಯಲ್ಲಿರುವ ತನ್ನ ಹಿತಾಸಕ್ತಿಯನ್ನು ಅಡಮಾನ ಮಾಡುವುದು ಅಥವಾ ಅದರ ಮೇಲೆ ಋಣಭಾರವನ್ನು ಸೃಜಿಸುವುದು ಕಾನೂನುಬದ್ಧವಾಗಿರತಕ್ಕದ್ದು ಮತ್ತು ಅಂಥ ಸಾಲವನ್ನು ಯಾವ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗೆ ಅನುಸಾರವಾಗಿ ಮಂಜೂರು ಮಾಡಲಾಯಿತೋ ಆ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗೆ ಅನುಸಾರವಾಗಿ ಅಂಥ ಸಾಲವನ್ನು ಸಂದಾಯ ಮಾಡಲು ಅವನು ತಪ್ಪಿದರೆ ಯಾವುದೇ ಕಾನೂನಿನಲ್ಲಿ ಉಪಬಂಧಿಸಿರುವ ಇತರ ಯಾವುದೇ ಕ್ರಮಕ್ಕೆ ಬಾಧಕವಾಗದಂತೆ ಭೂಮಿಯಲ್ಲಿಯ ಅವನ ಹಿತಾಸಕ್ತಿಯನ್ನು ಜಪ್ತಿ ಮಾಡಿಸುವುದು ಮತ್ತು ಮಾರಾಟ ಮಾಡಿಸುವುದು ಮತ್ತು ಅದರ ಉತ್ಪತ್ತಿಗಳನ್ನು ಅಂಥ ಸಾಲದ ಸಂದಾಯಕ್ಕೆ ಬಳಸುವುದು ಕಾನೂನು ಬದ್ಧವಾದುದ್ದಾಗಿರತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 2010ರ ಅಧಿನಿಯಮ ಸಂಖ್ಯೆ 35ರ ಮೂಲಕ ದಿನಾಂಕ 29.07.2010 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**ವಿವರಣೆ.–** ಈ ಉಪಪ್ರಕರಣದ ಉದ್ದೇಶಕ್ಕಾಗಿ, **"ಉನ್ನತ ವ್ಯಾಸಂಗ"** ಎಂದರೆ ಪದವಿ ಪೂರ್ವ ಪರೀಕ್ಷೆಯ ಅಥವಾ ಸಿಬಿಎಸ್‌ಇಯು ಅಥವಾ ಐಸಿಎಸ್‌ಇಯು ನಡೆಸುವ 12ನೇ ತರಗತಿಯ ಪರೀಕ್ಷೆಯ ಅಥವಾ ಯಾವುದೇ ಡಿಪ್ಲೊಮೊ ಕೋರ್ಸ್‌ಗಳ ನಂತರದ ಮುಂದಿನ ವ್ಯಾಸಂಗಗಳು.][1]

1. 2010ರ ಅಧಿನಿಯಮ ಸಂಖ್ಯೆ 35ರ ಮೂಲಕ 29.07.2010 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) ಉಪಪ್ರಕರಣ (1)ನ್ನು ಉಲ್ಲಂಘಿಸಿ ಮಾಡಿದ ಭೂಮಿಯ ಯಾವುದೇ ವರ್ಗಾವಣೆಯೂ ಅಥವಾ ವಿಭಾಗವು ಅನೂರ್ಜಿತವಾಗತಕ್ಕದ್ದು [1][ಮತ್ತು ಅಂಥ ಭೂಮಿಯು ಎಲ್ಲ ಋಣಭಾರಗಳಿಂದ ಮುಕ್ತವಾಗಿ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು ಹಾಗೂ [2][77ನೇ ಪ್ರಕರಣದ ಉಪಬಂಧಗಳಿಗೆ][2] ಅನುಸಾರವಾಗಿ ಅದನ್ನು ವಿಲೇ ಮಾಡತಕ್ಕದ್ದು.][1]

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 1.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ ದಿನಾಂಕ 20.10.1995 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**62. ರಾಜ್ಯ ಸರ್ಕಾರಕ್ಕೆ ಭೂಮಿಯನ್ನು ಬಿಟ್ಟುಕೊಡುವುದು.–** ಈ ಅಧ್ಯಾಯದ ಮೇರೆಗೆ ಅಧಿಭೋಗದಾರನಾಗಿ [1][xxx][1] ನೋಂದಾಯಿತನಾಗಿರುವ ವ್ಯಕ್ತಿಯು ಅಥವಾ ಹಕ್ಕು ಸ್ವಾಮ್ಯ ಹೊಂದಿರುವ ಅವನ ವಾರಸುದಾರನು, ಅಂಥ ನೋಂದಣಿಯ ದಿನಾಂಕದಿಂದ [1][xxx][1] ಆರು ವರ್ಷಗಳೊಳಗೆ ಭೂಮಿಯನ್ನು ಸ್ವತಃ ಸಾಗುವಳಿ ಮಾಡುವುದನ್ನು ಬಿಟ್ಟುಬಿಡಲು ಉದ್ದೇಶಿಸಿದರೆ ಅವನು ಆ ಭೂಮಿಯನ್ನು ರಾಜ್ಯ ಸರ್ಕಾರಕ್ಕೆ ಬಿಟ್ಟುಕೊಡತಕ್ಕದ್ದು ಮತ್ತು ಹಾಗೆ ಬಿಟ್ಟು ಕೊಟ್ಟ ನಂತರ, ಅವನು ಸಂದಾಯ ಮಾಡಿರುವ ಪ್ರಿಮಿಯಂಗೆ ಸಮನಾದ ಮೊಬಲಗನ್ನು ಮತ್ತು ನೋಂದಣಿಯ ದಿನಾಂಕದ [1][xxx][1] ತರುವಾಯ ಮಾಡಿದ ಅಭಿವೃದ್ಧಿ ಕಾರ್ಯಗಳು ಯಾವುವಾದರೂ ಇದ್ದರೆ ಅವುಗಳ ಸವಕಳಿ ಮೌಲ್ಯವನ್ನೂ, ಭೂಮಿಯನ್ನು ಬಿಟ್ಟು ಕೊಡುವ ವ್ಯಕ್ತಿಗೆ ಮತ್ತು ಭೂಮಿಯಲ್ಲಿ ಹಿತಾಸಕ್ತಿಯುಳ್ಳ ಇತರ ವ್ಯಕ್ತಿಗಳಿಗೆ ರಾಜ್ಯ ಸರ್ಕಾರವು ಸಂದಾಯ ಮಾಡತಕ್ಕದ್ದು. ಬಿಟ್ಟು ಕೊಟ್ಟ ಆ ಭೂಮಿಯು ಆನಂತರ ರಾಜ್ಯ ಸರ್ಕಾರದ ವಶದಲ್ಲಿರತಕ್ಕದ್ದು ಮತ್ತು [2][ನ್ಯಾಯಾಧಿಕರಣವು][2] ಆನಂತರ ಅದನ್ನು ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವ ಹೆಚ್ಚುವರಿ ಭೂಮಿಯಂತೆ ವಿಲೇ ಮಾಡಬಹುದು.

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

## ಅಧ್ಯಾಯ – IV

## ಭೂ ಹಿಡುವಳಿಗಳ ಗರಿಷ್ಠ ಮಿತಿ

[1][**63. ಭೂಮಿಯ ಗರಿಷ್ಠ ಮಿತಿ.–** (1) ಕುಟುಂಬದವರಲ್ಲಿ ಒಬ್ಬನಾಗಿರದ ಅಥವಾ ಕುಟುಂಬವನ್ನೇ ಹೊಂದಿರದ ಯಾರೇ ವ್ಯಕ್ತಿಯು ಮತ್ತು ಯಾವುದೇ ಕುಟುಂಬವೂ ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, ಭೂ ಒಡೆಯನಾಗಿ ಆಗಲಿ, ಭೂ ಮಾಲೀಕನಾಗಿ ಆಗಲಿ ಅಥವಾ ಗೇಣಿದಾರನಾಗಿ ಆಗಲಿ ಅಥವಾ ಅಡಮಾನ ಪಡೆದವನಾಗಿ ಆಗಲಿ ಗರಿಷ್ಠ ಮಿತಿ ವಿಸ್ತೀರ್ಣಕ್ಕಿಂತ ಹೆಚ್ಚಿನ ಭೂಮಿಯನ್ನು ಸ್ವಾಧೀನದ ಸಹಿತ ಅಥವಾ ಅನ್ಯಥಾ ಅಥವಾ ಭಾಗಶಃ ಒಂದು ಸಾಮರ್ಥ್ಯದಲ್ಲಿ ಅಥವಾ ಭಾಗಶಃ ಬೇರೊಂದು ಸಾಮರ್ಥ್ಯದಲ್ಲಿ ಧಾರಣ ಮಾಡಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಕುಟುಂಬದವರಲ್ಲಿ ಒಬ್ಬನಾಗಿರದ ಅಥವಾ ಕುಟುಂಬವಿಲ್ಲದ ವ್ಯಕ್ತಿಗೆ ಅಥವಾ ಒಂದು ಕುಟುಂಬಕ್ಕೆ ಭೂಮಿಯ ಗರಿಷ್ಠ ಮಿತಿ ವಿಸ್ತೀರ್ಣವು ಹತ್ತು ಯೂನಿಟ್‌ಗಳು ಆಗಿರತಕ್ಕದ್ದು:

ಪರಂತು, ಐದಕ್ಕಿಂತ ಹೆಚ್ಚು ಜನರನ್ನೊಳಗೊಂಡ ಕುಟುಂಬದ ಸಂದರ್ಭದಲ್ಲಿ ಭೂಮಿಯ ಗರಿಷ್ಠ ಮಿತಿ ವಿಸ್ತೀರ್ಣವು, ಹತ್ತು ಯೂನಿಟ್‌ಗಳು ಆಗಿರತಕ್ಕದ್ದು. ಅಲ್ಲದೆ ಐದಕ್ಕಿಂತ ಹೆಚ್ಚಿನ ಪ್ರತಿಯೊಬ್ಬನೂ ಹೆಚ್ಚಿನ ಎರಡು ಯೂನಿಟ್‌ಗಳನ್ನು ಹೊಂದಿರತಕ್ಕದ್ದು. ಆದರೆ, ಭೂಮಿಯ ಗರಿಷ್ಠ ಮಿತಿಯ ಒಟ್ಟು ವಿಸ್ತೀರ್ಣವು ಇಪ್ಪತ್ತು ಯೂನಿಟ್‌ಗಳನ್ನು ಮೀರತಕ್ಕದ್ದಲ್ಲ.

[1][(2ಎ) ಪ್ರಕರಣ 5ರ (2)ನೇ ಉಪಪ್ರಕರಣದ (ಬಿ) ಖಂಡದ ಮೇರೆಗೆ ಗೇಣಿದಾರನಾಗಿರುವ ವ್ಯಕ್ತಿಗೆ ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣವು ನಲವತ್ತು ಯೂನಿಟ್‌ಗಳು ಆಗಿರತಕ್ಕದ್ದು.][1]

1. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ ದಿನಾಂಕ 20.10.1995 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) ಕುಟುಂಬದ ಸಂದರ್ಭದಲ್ಲಿ ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣವು 'ಸ್ತ್ರೀ ಧನ' ಭೂಮಿಯು ಸೇರಿ ಕುಟುಂಬದವರೆಲ್ಲರೂ ಧಾರಣ ಮಾಡಿರುವ ಒಟ್ಟು ಭೂಮಿಗಳಿಗೆ ಅನ್ವಯವಾಗತಕ್ಕದ್ದು.

(4) ಕುಟುಂಬದವರಲ್ಲಿ ಒಬ್ಬನಾಗಿರದ, ಆದರೆ ಅವಿಭಕ್ತ ಕುಟುಂಬದವರಲ್ಲಿ ಒಬ್ಬನಾಗಿರುವ ವ್ಯಕ್ತಿಯು ಧಾರಣ ಮಾಡಿರುವ ಭೂಮಿಯ ವಿಸ್ತೀರ್ಣವನ್ನು ಲೆಕ್ಕ ಹಾಕುವಾಗ ಮತ್ತು ಅವಿಭಕ್ತ ಕುಟುಂಬದವರಲ್ಲಿ ಒಬ್ಬನು ಸಹ ಆಗಿರುವ ಕುಟುಂಬದವರಲ್ಲಿ ಒಬ್ಬನು ಧಾರಣ ಮಾಡಿರುವ ಭೂಮಿಯ ವಿಸ್ತೀರ್ಣವನ್ನು ಲೆಕ್ಕ ಹಾಕುವಾಗ, ಅವಿಭಕ್ತ ಕುಟುಂಬವು ಧಾರಣ ಮಾಡಿರುವ ಭೂಮಿಗಳಲ್ಲಿ ಅಂತಹವನ ಪಾಲನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು ಅವನು ಪ್ರತ್ಯೇಕವಾಗಿ ಧಾರಣ ಮಾಡಿರುವ ಭೂಮಿಯು ಯಾವುದಾದರೂ ಇದ್ದರೆ, ಅದನ್ನು ಆ ಪಾಲಿಗೆ ಸೇರಿಸತಕ್ಕದ್ದು ಮತ್ತು ಈ ಉದ್ದೇಶಕ್ಕಾಗಿ ಅಂಥ ಪಾಲನ್ನು ಅವಿಭಕ್ತ ಕುಟುಂಬವು ಧಾರಣ ಮಾಡಿದ್ದ ಭೂಮಿಗಳನ್ನು ವಿಭಾಗ ಮಾಡಿಕೊಂಡಿದಿದ್ದರೆ ಅಂಥ ವ್ಯಕ್ತಿಯ ಪಾಲಿಗೆ ಬರಬಹುದಾಗಿದ್ದ ಭೂಮಿಯ ವಿಸ್ತೀರ್ಣವೆಂದು ಭಾವಿಸತಕ್ಕದ್ದು.

(5) ಖಾಸಗಿ ಟ್ರಸ್ಟ್‌ನ ಒಡೆತನದಲ್ಲಿರುವ ಅಥವಾ ಅದು ಧಾರಣ ಮಾಡಿರುವ ಭೂಮಿಗಳ ಸಂಬಂಧದಲ್ಲಿ,–

(ಎ) ಟ್ರಸ್ಟ್‌ನಕರ್ತನು ಟ್ರಸ್ಟ್‌ನ್ನು ರದ್ದುಮಾಡಬಹುದಾಗಿದ್ದರೆ ಅಂಥ ಭೂಮಿಗಳನ್ನು ಅಂಥ ಟ್ರಸ್ಟ್‌ಕರ್ತನು ಅಥವಾ ಹಿತಾಸಕ್ತಿ ಹೊಂದಿರುವ ಅವನ ವಾರಸುಧಾರನು ಧಾರಣ ಮಾಡಿರುವುದಾಗಿ ಭಾವಿಸತಕ್ಕದ್ದು, ಮತ್ತು

(ಬಿ) ಇತರ ಸಂದರ್ಭಗಳಲ್ಲಿ, ಟ್ರಸ್ಟ್‌ನ ಫಲಾನುಭವಿಗಳು ಅಂಥ ಟ್ರಸ್ಟ್‌ನಲ್ಲಿ ಅಥವಾ ಅದರಿಂದ ಬಂದ ವರಮಾನದಲ್ಲಿ, ಅವರವರು ಹೊಂದಿರುವ ಹಿತಾಸಕ್ತಿಗಳ ಪ್ರಮಾಣಕ್ಕನುಸಾರವಾಗಿ ಅಂಥ ಭೂಮಿಗಳನ್ನು ಧಾರಣ ಮಾಡಿರುವರೆಂದು ಭಾವಿಸತಕ್ಕದ್ದು.

**ವಿವರಣೆ.–** ಟ್ರಸ್ಟ್ ಭಾಗಶಃ ಖಾಸಗಿಯಾಗಿದ್ದು, ಭಾಗಶಃ ಸಾರ್ವಜನಿಕವಾಗಿದ್ದರೆ, ಈ ಉಪಪ್ರಕರಣವು ಟ್ರಸ್ಟ್‌ನ ಆಸ್ತಿಗಳ ಎಷ್ಟು ಭಾಗವು ಖಾಸಗಿ ಟ್ರಸ್ಟ್‌ಗೆ ಸೇರಿರುತ್ತದೋ ಆ ಭಾಗಕ್ಕೆ ಸೇರಿದ ಭೂಮಿಗಳಿಗೆ ಮಾತ್ರ ಅನ್ವಯಿಸತಕ್ಕದ್ದು.

(6) ಕುಟುಂಬದವರಲ್ಲಿ ಒಬ್ಬನಾಗಿರದ ಅಥವಾ ಕುಟುಂಬವನ್ನೇ ಹೊಂದಿರದ ವ್ಯಕ್ತಿಯು ಅಥವಾ ಕುಟುಂಬದ ವ್ಯಕ್ತಿಯು ಧಾರಣ ಮಾಡಿರುವ ಭೂಮಿಯ ವಿಸ್ತೀರ್ಣವನ್ನು ಲೆಕ್ಕ ಹಾಕುವಾಗ, ಸಹಕಾರ ಬೇಸಾಯ ಕ್ಷೇತ್ರದ ಭೂಮಿಗಳಲ್ಲಿ ಅಂಥ ವ್ಯಕ್ತಿಯ ಅಥವಾ ಕುಟುಂಬದ ವ್ಯಕ್ತಿಯ ಪಾಲನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

(7) (ಎ) ಶೈಕ್ಷಣಿಕ, ಧಾರ್ಮಿಕ ಅಥವಾ ಧರ್ಮದಾಯ ಉದ್ದೇಶಕ್ಕಾಗಿ ರಚಿತವಾಗಿರುವ ಸ್ವತ್ತನ್ನು ಧಾರಣ ಮಾಡುವ ಸಾಮರ್ಥ್ಯವುಳ್ಳ ಸಾರ್ವಜನಿಕ ಸ್ವರೂಪದ್ದಾಗಿರುವ ಯಾವುದೇ ಶೈಕ್ಷಣಿಕ, ಧಾರ್ಮಿಕ ಅಥವಾ ಧರ್ಮದಾಯ ಸಂಸ್ಥೆಯೂ ಅಥವಾ ಸಂಘವೂ ಅಥವಾ ಟ್ರಸ್ಟ್ , ಭೂಮಿಯಿಂದ ಬರುವ ವರಮಾನವನ್ನು ಸಂಬಂಧಪಟ್ಟ ಸಂಸ್ಥೆಗಾಗಿ ಅಥವಾ ಸಂಘಕ್ಕಾಗಿ ಅಥವಾ ಟ್ರಸ್ಟ್‌ಗಾಗಿ ಮಾತ್ರವೇ ವಿನಿಯೋಗಿಸುತ್ತಿದ್ದ ಹೊರತು ಅಂಥ ಭೂಮಿಯನ್ನು ಧಾರಣ ಮಾಡತಕ್ಕದ್ದಲ್ಲ. ಅಂಥ ಸಂಸ್ಥೆಯು, ಸಂಘವು ಅಥವಾ ಟ್ರಸ್ಟ್ ಭೂಮಿಯನ್ನು ಹಾಗೆ ಧಾರಣ ಮಾಡಿದ್ದರೆ ಗರಿಷ್ಠ ಮಿತಿ ವಿಸ್ತೀರ್ಣವು ಇಪ್ಪತ್ತು ಯೂನಿಟ್‌ಗಳು ಆಗಿರತಕ್ಕದ್ದು.

(ಬಿ) ಭೂಮಿಯಿಂದ ಬರುವ ವರಮಾನವನ್ನು ಸಂಸ್ಥೆಗಾಗಿ, ಸಂಘಕ್ಕಾಗಿ ಅಥವಾ ಟ್ರಸ್ಟ್‌ಗಾಗಿ ಮಾತ್ರವೇ ವಿನಿಯೋಗಿಸಲಾಗಿದೆಯೇ ಎಂಬ ಯಾವುದೇ ಪ್ರಶ್ನೆಯು ಉದ್ಭವಿಸಿದರೆ, ಅದನ್ನು ನಿಯಮಿಸಿದ ಪ್ರಾಧಿಕಾರಿಯು ತೀರ್ಮಾನಿಸತಕ್ಕದ್ದು. ನಿಯಮಿಸಿದ ಪ್ರಾಧಿಕಾರಿಯ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು. ವರಮಾನವನ್ನು ಹಾಗೆ ವಿನಿಯೋಗಿಸಿಲ್ಲವೆಂದು ನಿಯಮಿಸಿದ ಪ್ರಾಧಿಕಾರಿಯು ತೀರ್ಮಾನಿಸಿದರೆ, ಸಂಸ್ಥೆಯು, ಸಂಘವು ಅಥವಾ ಟ್ರಸ್ಟ್ ಧಾರಣ ಮಾಡಿರುವ ಭೂಮಿಯನ್ನು ಹೆಚ್ಚುವರಿ ಭೂಮಿಯೆಂದು ಭಾವಿಸತಕ್ಕದ್ದು ಮತ್ತು 66 ರಿಂದ 76ರ ವರೆಗಿನ ಪ್ರಕರಣಗಳ ಉಪಬಂಧಗಳು, ಅಂತಹ ಭೂಮಿಯನ್ನು ರಾಜ್ಯ ಸರ್ಕಾರಕ್ಕೆ ಬಿಟ್ಟು ಕೊಡುವುದಕ್ಕೆ ಮತ್ತು ಅಂಥ ಭೂಮಿಯು ರಾಜ್ಯಸರ್ಕಾರದಲ್ಲಿ ನಿಹಿತವಾಗುವುದಕ್ಕೆ ಸಾಧ್ಯವಾಗಬಹುದಷ್ಟರ ಮಟ್ಟಿಗೆ ಅನ್ವಯವಾಗತಕ್ಕದ್ದು. ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಈ ಉಪಪ್ರಕರಣದ ಉಪಬಂಧಗಳು ಪರಿಣಾಮವುಳ್ಳವುಗಳಾಗಿರತಕ್ಕದ್ದು.

(8) (ಎ) ಯಾವುದೇ ಸಕ್ಕರೆ ಕಾರ್ಖಾನೆಯು ಸಂಶೋಧನೆಯ ಅಥವಾ ಬಿತ್ತನೆ ಬೀಜ ಕ್ಷೇತ್ರದ ಅಥವಾ ಆ ಎರಡರ ಉದ್ದೇಶಕ್ಕಾಗಿ ಮಾತ್ರವೇ ಹೊರತು, ಭೂಮಿಯನ್ನು ಧಾರಣ ಮಡತಕ್ಕದ್ದಲ್ಲ. ಅಂತಹ ಉದ್ದೇಶಕ್ಕಾಗಿ ಸಕ್ಕರೆ ಕಾರ್ಖಾನೆಯು ಭೂಮಿಯನ್ನು ಧಾರಣ ಮಾಡಿದ್ದರೆ ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣವು ಐವತ್ತು ಯೂನಿಟ್‌ಗಳು ಆಗಿರತಕ್ಕದ್ದು.

(ಬಿ) ಸಕ್ಕರೆ ಕಾರ್ಖಾನೆಯು ಧಾರಣ ಮಾಡಿರುವ ಯಾವುದೇ ಭೂಮಿಯನ್ನು ಸಂಶೋಧನೆಯ ಅಥವಾ ಬಿತ್ತನೆ ಬೀಜ ಕ್ಷೇತ್ರದ ಅಥವಾ ಇವೆರಡರ ಉದ್ದೇಶಕ್ಕಾಗಿ ಮಾತ್ರವೇ ಬಳಸಲಾಗುತ್ತಿದೆಯೇ ಎಂಬ ಯಾವುದೇ ಪ್ರಶ್ನೆಯು ಉದ್ಭವಿಸಿದರೆ, ಆ ಬಗ್ಗೆ ನಿಯಮಿಸಿದ ಪ್ರಾಧಿಕಾರಿಯ ತೀರ್ಮಾನವೇ ಅಂತಿಮವಾದುದಾಗಿರತಕ್ಕದ್ದು ಮತ್ತು ಸದರಿ ಉದ್ದೇಶಕ್ಕಾಗಿ ಧಾರಣ ಮಾಡಿರದ ಭೂಮಿಯನ್ನು ಹೆಚ್ಚುವರಿ ಭೂಮಿಯೆಂದು ಭಾವಿಸತಕ್ಕದ್ದು ಮತ್ತು 66 ರಿಂದ 76 ರವರೆಗಿನ ಪ್ರಕರಣಗಳ ಉಪಬಂಧಗಳು, ಅಂತಹ ಭೂಮಿಯನ್ನು ರಾಜ್ಯ ಸರ್ಕಾರಕ್ಕೆ ಬಿಟ್ಟು ಕೊಡುವುದಕ್ಕೆ ಮತ್ತು ಅಂಥ ಭೂಮಿಯು ರಾಜ್ಯ ಸರ್ಕಾರದಲ್ಲಿ ನಿಹಿತವಾಗುವುದಕ್ಕೆ ಸಾಧ್ಯವಾಗಬಹುದಾದರಷ್ಟರ ಮಟ್ಟಿಗೆ ಅನ್ವಯವಾಗತಕ್ಕದ್ದು. ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಈ ಉಪ ಪ್ರಕರಣದ ಉಪಬಂಧಗಳು ಪರಿಣಾಮವುಳ್ಳವುಗಳು ಆಗಿರತಕ್ಕದ್ದು.

(9) ನೆಡುತೋಪಿನ ಬೆಳೆಗಳನ್ನು ಬೆಳೆಯಲಾಗುವ ಭೂಮಿಯನ್ನು ಧಾರಣ ಮಾಡಿರುವ ಯಾರೇ ವ್ಯಕ್ತಿಯ ಸಂದರ್ಭದಲ್ಲಿ, 104ನೇ ಪ್ರಕರಣದ ವಿವರಣೆಯ (ii)ನೇ ಬಾಬಿನಲ್ಲಿ ಉಲ್ಲೇಖಿಸಿರುವ ಬೇಸಾಯ ಭೂಮಿಯನ್ನು ಗಣನೆಗೆ ತೆಗೆದುಕೊಂಡು ಅವನು ಧಾರಣ ಮಾಡಿರುವ ಇತರ ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣವನ್ನು ನಿರ್ಧರಿಸತಕ್ಕದ್ದು.

(10) ಹಿಂದಿನ ಉಪಪ್ರಕರಣದಲ್ಲಿ ಏನೇ ಇದ್ದರೂ, ಯಾರೇ ವ್ಯಕ್ತಿಯು ವಿಭಾಗದ ಮೂಲಕ ಅಥವಾ [1][ಕರ್ನಾಟಕ][1] ಭೂದಾನ ಯಜ್ಞ ಅಧಿನಿಯಮ, 1963ರ (1963ರ [1][ಕರ್ನಾಟಕ ಅಧಿನಿಯಮ][1] 34) ಮೇರೆಗೆ ಸ್ಥಾಪಿತವಾದ, [1][ಕರ್ನಾಟಕ ಭೂದಾನ ಯಜ್ಞ ಮಂಡಲಿ][1]ಗೆ ದಾನದ ಮೂಲಕ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿಗೆ ಅನುಗುಣವಾಗಿ, ಅಂಥ ಭೂಮಿಯ ಗೇಣಿದಾರನಿಗೆ ಮಾರಾಟ ಮಾಡುವ ಮೂಲಕ ಹೊರತು, ಅನ್ಯಥಾ,–

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

(i) 1961ರ ನವೆಂಬರ್ 18ನೇ ದಿನಾಂಕದ ತರುವಾಯ, ಮತ್ತು 1971ರ ಜನವರಿ 24ನೇ ದಿನಾಂಕಕ್ಕೆ ಮೊದಲು ಯಾವ ಭೂಮಿಯ ವಿಸ್ತೀರ್ಣವನ್ನು ಅವನು ಉಳಿಸಿಕೊಂಡಿರುವ ಇತರ ಭೂಮಿಗೆ ಸೇರಿಸಿದರೆ, ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕಕ್ಕೆ ಮೊದಲು ಹೆಚ್ಚುವರಿ ಭೂಮಿಯೆಂದು ಭಾವಿಸಲಾಗುತ್ತಿತ್ತೋ ಆ ಯಾವುದೇ ಭೂಮಿಯನ್ನು ವರ್ಗಾಯಿಸಿದ್ದರೆ; ಅಥವಾ

(ii) 1971ರ ಜನವರಿ 24ನೇ ದಿನಾಂಕದ ತರುವಾಯ ಯಾವುದೇ ಭೂಮಿಯನ್ನು ವರ್ಗಾಯಿಸಿದ್ದರೆ

– ಆ ವ್ಯಕ್ತಿಯು ಧಾರಣ ಮಾಡಲು ಹಕ್ಕಿರುವ ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣವನ್ನು ಲೆಕ್ಕ ಹಾಕುವಾಗ, ಹಾಗೆ ವರ್ಗಾಯಿಸಲಾದ ಭೂಮಿಯ ವಿಸ್ತೀರ್ಣವನ್ನು ಗಣನೆಗೆ ತೆಗೆದುಕೊಳ್ಳತಕ್ಕದ್ದು ಮತ್ತು ಹಾಗೆ ಲೆಕ್ಕ ಹಾಕಲಾದ ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣಕ್ಕೆ ಮೀರುವ ಭೂಮಿಯನ್ನು ಅವನು ಉಳಿಸಿಕೊಂಡಿರುವ ಭೂಮಿಯು ವಾಸ್ತವವಾಗಿ ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣಕ್ಕೆ ಮೀರಿಲ್ಲದಿದ್ದರೂ, ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣಕ್ಕೆ ಮೀರಿದೆಂದು ಭಾವಿಸತಕ್ಕದ್ದು.

ಅಂಥ ವರ್ಗಾವಣೆಯ ಕಾರಣದಿಂದಾಗಿ ವ್ಯಕ್ತಿಯ ಹಿಡುವಳಿಯು, ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣಕ್ಕೆ ಮೀರಿರುವುದೆಂದು ಲೆಕ್ಕಹಾಕಲಾದ ವಿಸ್ತೀರ್ಣಕ್ಕಿಂತ ಕಡಿಮೆಯಿದ್ದರೆ ಅವನ ಎಲ್ಲ ಭೂಮಿಗಳು ಹೆಚ್ಚುವರಿ ಭೂಮಿಗಳಾಗಿವೆಯೆಂದು ಭಾವಿಸತಕ್ಕದ್ದು ಮತ್ತು 66 ರಿಂದ 76ರ ವರೆಗಿನ ಪ್ರಕರಣಗಳ ಉಪಬಂಧಗಳು ಅಂಥ ಹೆಚ್ಚುವರಿ ಭೂಮಿಯನ್ನು ರಾಜ್ಯ ಸರ್ಕಾರಕ್ಕೆ ಬಿಟ್ಟು ಕೊಡುವುದಕ್ಕೆ ಮತ್ತು ರಾಜ್ಯ ಸರ್ಕಾರದಲ್ಲಿ ಅದು ನಿಹಿತವಾಗುವುದಕ್ಕೆ ಸಾಧ್ಯವಾಗಬಹುದಾದಷ್ಟರ ಮಟ್ಟಿಗೆ ಅನ್ವಯವಾಗತಕ್ಕದ್ದು.

**ವಿವರಣೆ.–** ಈ ಉಪಪ್ರಕರಣದ ಉದ್ದೇಶಗಳಿಗಾಗಿ ಭೂಮಿಯನ್ನು (ಜೀವಂತ ವ್ಯಕ್ತಿಗಳ ನಡುವೆ ಮಾರಾಟದ, ದಾನದ, ಸ್ವಾಧೀನ ಸಹಿತ ಅಡಮಾನದ, ವಿನಿಮಯದ, ಗೇಣಿಯ ಮೂಲಕವಾಗಿಯಾಗಲಿ ಅಥವಾ ಇತರ ಯಾವುದೇ ಪ್ರಕಾರದ ವಿಲೇವಾರಿಯ ಮೂಲಕವಾಗಿಯಾಗಲಿ) ಪಕ್ಷಕಾರರ ಕಾರ್ಯದ ಮೂಲಕವಾಗಿಯಾಗಲಿ ವರ್ಗಾಯಿಸಲಾಗಿದ್ದರೆ ಅದನ್ನು ವರ್ಗಾಯಿಸಲಾಗಿದೆಯೆಂದು ಭಾವಿಸತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**64. ಮುಂಬರುವ ಕಾಲದಲ್ಲಿ ಭೂಮಿಯ ಆರ್ಜನೆ.–** ಜೀವಂತ ವ್ಯಕ್ತಿಗಳ ನಡುವೆ ವರ್ಗಾವಣೆಯ, ದಾನದ, ಖರೀದಿಯ, ವಿನಿಮಯದ, ಸ್ವಾಧೀನದೊಂದಿಗೆ ಅಡಮಾನದ, ಗೇಣಿಯ, ಬಿಟ್ಟುಕೊಡುವುದರ ಅಥವಾ ಇತರ ಯಾವುದೇ ಪ್ರಕಾರದ ವರ್ಗಾವಣೆಯ ಕಾರಣದಿಂದಾಗಿ ಅಥವಾ ಮರಣ ಶಾಸನ ದಾನದ ಅಥವಾ ವಾರಸುದಾರಿಕೆಯ ಅಥವಾ ವಿಭಾಗದ ಮೂಲಕ ಅಥವಾ ಅನ್ಯಥಾ [1][ಯಾರೇ ವ್ಯಕ್ತಿಯು ಅಥವಾ ಕುಟುಂಬವು ತಿದ್ದುಪಡಿ ಅಧಿನಿಯಮವು ಪ್ರಾರಂಭವಾದ ತರುವಾಯ ಯಾವುದೇ ಭೂಮಿಯನ್ನು ಆರ್ಜಿಸಿದ್ದರೆ ಅಥವಾ ಯಾವುದೇ ಭೂಮಿಯು ಅವನ ಅಥವಾ ಅದರ ಸ್ವಾಧೀನಕ್ಕೆ ಬಂದಿದ್ದರೆ ಮತ್ತು ಅದರ ಪರಿಣಾಮವಾಗಿ, ಅಂಥ ವ್ಯಕ್ತಿಯು ಅಥವಾ ಕುಟುಂಬವು ಧಾರಣ ಮಾಡಿರುವ ಭೂಮಿಯ ಒಟ್ಟು ವಿಸ್ತೀರ್ಣವು 63ನೇ ಪ್ರಕರಣದ ಮೇರೆಗೆ ಅನುಮತಿಸಿರುವ ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣಕ್ಕಿಂತ ಹೆಚ್ಚಾಗಿದ್ದ ಪಕ್ಷದಲ್ಲಿ,][1] ಹಾಗೆ ಹೆಚ್ಚಾಗಿರುವ ಭೂಮಿಯನ್ನು ಹೆಚ್ಚುವರಿ ಭೂಮಿ ಎಂದು ಭಾವಿಸತಕ್ಕದ್ದು ಮತ್ತು 66 ರಿಂದ 76ರ ವರೆಗಿನ ಪ್ರಕರಣಗಳ ಉಪಬಂಧಗಳು, ಆ ಹೆಚ್ಚುವರಿ ಭೂಮಿಯನ್ನು ರಾಜ್ಯ ಸರ್ಕಾರಕ್ಕೆ ಬಿಟ್ಟು ಕೊಡುವುದಕ್ಕೆ ಮತ್ತು ರಾಜ್ಯಸರ್ಕಾರದಲ್ಲಿ ಅದು ನಿಹಿತವಾಗುವುದಕ್ಕೆ ಸಾಧ್ಯವಾಗಬಹುದಾದಷ್ಟರ ಮಟ್ಟಿಗೆ ಅನ್ವಯವಾಗತಕ್ಕದ್ದು.

[1][**ವಿವರಣೆ.–** ಈ ಪ್ರಕರಣದಲ್ಲಿ **"ಮರಣಶಾಸನ ದಾನ ಪದದಲ್ಲಿ"**,

(i) ಮರಣದ ನಿರೀಕ್ಷಣೆಯಲ್ಲಿ ಮಾಡಿದ ದಾನ; ಮತ್ತು

(ii) ಯಾವುದೇ ಘಟನೆ ಸಂಭವಿಸಿದ ತರುವಾಯ ಪರಿಣಾಮಕಾರಿಯಾಗುವ ದಾನ

– ಒಳಗೊಳ್ಳುತ್ತದೆ.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**65. ಹೆಚ್ಚುವರಿ ಭೂಮಿಯನ್ನು ರಾಜ್ಯ ಸರ್ಕಾರಕ್ಕೆ ಬಿಟ್ಟು ಕೊಡುವುದು.–** 63ನೇ ಅಥವಾ 64ನೇ ಪ್ರಕರಣದಲ್ಲಿ ಗೊತ್ತುಪಡಿಸಿರುವ ಭೂಮಿಯ ಗರಿಷ್ಠ ಮಿತಿ ವಿಸ್ತೀರ್ಣಕ್ಕಿಂತ ಹೆಚ್ಚಾಗಿರುವ ಭೂಮಿಯನ್ನು (ಇದರಲ್ಲಿ ಇನ್ನು ಮುಂದೆ 'ಹೆಚ್ಚುವರಿ ಭೂಮಿ' ಎಂದು ಉಲ್ಲೇಖಿಸಲಾಗಿದೆ) ರಾಜ್ಯ ಸರ್ಕಾರಕ್ಕೆ ಬಿಟ್ಟು ಕೊಡತಕ್ಕದ್ದು.

[1][**65ಎ. ಕೆಲವು ಭೂಮಿಗಳನ್ನು ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣಕ್ಕಿಂತ ಹೆಚ್ಚಾಗಿರುವಂತವುಗಳೆಂದು ಭಾವಿಸುವುದು.–** ರಾಜ್ಯ ಸರ್ಕಾರವು ನಿರ್ಮಿಸಿದ ಮೂಲದಿಂದ, ನೀರಾವರಿಯಾದ ಪರಿಣಾಮವಾಗಿ ವ್ಯಕ್ತಿಯು ಅಥವಾ ಅವನಿಗೆ ಕುಟುಂಬವಿದ್ದರೆ, ಅವನ ಕುಟುಂಬದ ಯಾರೇ ಒಬ್ಬನೊಂದಿಗೆ ಅವನು ಅಥವಾ ಕುಟುಂಬವು ಧಾರಣ ಮಾಡಿರುವ ಯಾವುದೇ ಭೂಮಿಯು ಯಾವುದೇ ಇತರ ದರ್ಜೆಯ ಭೂಮಿಯಾಗಿ ಪರಿವರ್ತಿತವಾಗಿದ್ದರೆ ಮತ್ತು ಅದರಿಂದಾಗಿ ಅಂಥ ವ್ಯಕ್ತಿಯು ಅಥವಾ ಕುಟುಂಬವು ಧಾರಣ ಮಾಡಿರುವ ಭೂಮಿಗಳು ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣವನ್ನು ಮೀರಿದ್ದರೆ, ಹಾಗೆ ಹೆಚ್ಚಾಗಿರುವ ಭೂಮಿಯನ್ನು ಹೆಚ್ಚುವರಿ ಭೂಮಿ ಎಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ 66 ರಿಂದ 76ರ ವರೆಗಿನ ಪ್ರಕರಣಗಳ ಉಪಬಂಧಗಳು, ಅಂತಹ ಹೆಚ್ಚುವರಿ ಭೂಮಿಯನ್ನು ರಾಜ್ಯ ಸರ್ಕಾರಕ್ಕೆ ಬಿಟ್ಟು ಕೊಡುವುದಕ್ಕೆ ಮತ್ತು ಅಂಥ ಭೂಮಿಯನ್ನು ರಾಜ್ಯಸರ್ಕಾರದಲ್ಲಿ ನಿಹಿತವಾಗುವುದಕ್ಕೆ ಸಾಧ್ಯವಾಗಬಹುದಾದ್ದಷ್ಟರ ಮಟ್ಟಿಗೆ ಅನ್ವಯವಾಗತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ [2][ಕರ್ನಾಟಕ][2] ನೀರಾವರಿ (ಅಭಿವೃದ್ಧಿ ವಂತಿಗೆ ಮತ್ತು ನೀರು ದರ ವಿಧಿಸುವ) ಅಧಿನಿಯಮ, 1957ರ (1957ರ [2][ಕರ್ನಾಟಕ][2] ಅಧಿನಿಯಮ 28) 3ನೇ ಪ್ರಕರಣದ ಮೇರೆಗೆ ಅಧಿಸೂಚಿಸಿದ ನೀರಾವರಿ ಕಾಮಗಾರಿಯು ಪೂರ್ಣಗೊಂಡ ದಿನಾಂಕದಿಂದ ಭೂಮಿಯು ಪರಿವರ್ತಿತ ಭೂಮಿ ಆಗಿದೆಯೆಂದು ಭಾವಿಸತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ ದಿನಾಂಕ 01.11.1973ರಿಂದ ಜಾರಿಗೆ ಬರುವಂತೆಅಳವಡಿಸಿಕೊಳ್ಳಲಾಗಿದೆ.

**66. ಹಿಡುವಳಿಯ ಘೋಷಣೆಯನ್ನು ದಾಖಲು ಮಾಡುವುದು.–** [1][(1) [2][(ಎ) ತಿದ್ದುಪಡಿ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು,–

(i) ರಾಜ್ಯ ಸರ್ಕಾರಕ್ಕೆ ಸೇರಿದ ನೀರಿನ ಮೂಲದಿಂದ ನೀರಾವರಿ ಸೌಲಭ್ಯಗಳನ್ನು ಹೊಂದಿರುವ ಹತ್ತು ಎಕರೆ ಅಥವಾ ಅದಕ್ಕಿಂತ ಹೆಚ್ಚಿನ ಭೂಮಿಗಳನ್ನು; ಅಥವಾ

(ii) ಮಳೆ ನೀರನ್ನು ಆಶ್ರಯಿಸಿ ಭತ್ತವನ್ನು ಬೆಳೆಯುವ ಇಪ್ಪತ್ತು ಎಕರೆ ಅಥವಾ ಅದಕ್ಕಿಂತ ಹೆಚ್ಚಿನ ಭೂಮಿಗಳನ್ನು; ಅಥವಾ

(iii) ಖುಷ್ಕಿ ಎಂದು ವರ್ಗೀಕರಿಸಿದ ಆದರೆ, ರಾಜ್ಯ ಸರ್ಕಾರಕ್ಕೆ ಸೇರಿದ ನೀರಿನ ಮೂಲಗಳಿಂದ ಯಾವುದೇ ನೀರಾವರಿ ಸೌಲಭ್ಯಗಳನ್ನು ಹೊಂದಿರದ ನಲವತ್ತು ಎಕರೆ ಅಥವಾ ಹೆಚ್ಚಿನ ಭೂಮಿಗಳನ್ನು

–ಹೊಂದಿರತಕ್ಕಂಥ ಪ್ರತಿಯೊಬ್ಬ ವ್ಯಕ್ತಿಯು 1974ರ ಡಿಸೆಂಬರ್ 31ನೇ ತಾರೀಖಿನಂದು ಅಥವಾ ಅದಕ್ಕೆ ಮೊದಲು][2],

(ಬಿ) 64ನೆಯ ಪ್ರಕರಣದಲ್ಲಿ ಉಲ್ಲೇಖಿಸಿರುವ ಯಾವುದೇ ರೀತಿಯಲ್ಲಿ (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ವಿಸ್ತೀರ್ಣಕ್ಕೆ ಮೀರಿ ಭೂಮಿಯನ್ನು ಆರ್ಜಿಸುವ ಪ್ರತಿಯೊಬ್ಬ ವ್ಯಕ್ತಿಯು; ಮತ್ತು

(ಸಿ) 65(ಎ) ಪ್ರಕರಣದ ಮೇರೆಗೆ ಭೂಮಿಯ ಗರಿಷ್ಠ ಮಿತಿಯ ವಿಸ್ತೀರ್ಣಕ್ಕೆ ಮೀರಿದೆ ಎಂದು ಭಾವಿಸಲಾದ ಭೂಮಿಯನ್ನು ಧಾರಣ ಮಾಡಿರುವ ಪ್ರತಿಯೊಬ್ಬ ವ್ಯಕ್ತಿಯು

– ನಿಯಮಿಸಿದ ಅವಧಿಯೊಳಗಾಗಿ, ಯಾವ ತಹಸೀಲ್ದಾರರ ಅಧಿಕಾರ ವ್ಯಾಪ್ತಿಯೊಳಗೆ ಅಂಥ ವ್ಯಕ್ತಿಯ ಹಿಡುವಳಿಯು ಅಥವಾ ಅದರ ಹೆಚ್ಚಿನ ಭಾಗವು ಇರುವುದೋ ಆ ತಹಸೀಲ್ದಾರರಿಗೆ ಈ ಕೆಳಕಂಡ ವಿವರಗಳನ್ನೊಳಗೊಂಡ ಘೋಷಣೆಯನ್ನು ಸಲ್ಲಿಸತಕ್ಕದ್ದು, ಎಂದರೆ:–

(i) ಆ ಎಲ್ಲ ಭೂಮಿಗಳ ವಿವರಗಳು;

(ii) ಕುಟುಂಬದವರ ವಿವರಗಳು; ಮತ್ತು

(iii) ನಿಯಮಿಸಬಹುದಾದಂಥ ಇತರ ವಿವರಗಳು.

[2][(1ಎ) ಉಪಪ್ರಕರಣ (1)ರ (ಎ) ಖಂಡದಲ್ಲಿ ನಮೂದಿಸಿದ ಬೇರೆ ಬೇರೆ ಪ್ರವರ್ಗಗಳ ಭೂಮಿಯನ್ನು ವ್ಯಕ್ತಿಯು ಧಾರಣ ಮಾಡಿದ್ದರೆ, ಈ ಪ್ರಕರಣದ ಉದ್ದೇಶಗಳಿಗಾಗಿ ಅಂಥ ವ್ಯಕ್ತಿಯು ಧಾರಣ ಮಾಡಿರುವ ಭೂಮಿಗಳ ಒಟ್ಟು ವಿಸ್ತೀರ್ಣವನ್ನು ಈ ಮುಂದಿನ ಸೂತ್ರಕ್ಕೆ ಅನುಸಾರವಾಗಿ ಆ ಎಲ್ಲಾ ಪ್ರವರ್ಗಗಳ ಭೂಮಿಯನ್ನು ಯಾವುದಾದರೂ ಒಂದು ಪ್ರವರ್ಗದ ಭೂಮಿಗೆ ಪರಿವರ್ತಿಸಿ ನಿರ್ಧರಿಸತಕ್ಕದ್ದು, ಎಂದರೆ (i)ನೇ ಪ್ರವರ್ಗದಲ್ಲಿ ಉಲ್ಲೇಖಿಸಿದ ಒಂದು ಎಕರೆ ಭೂಮಿ (ii)ನೇ ಪ್ರವರ್ಗದಲ್ಲಿ ಉಲ್ಲೇಖಿಸಿದ ಎರಡು ಎಕರೆ ಭೂಮಿ, (iii)ನೇ ಪ್ರವರ್ಗದಲ್ಲಿ ಉಲ್ಲೇಖಿಸಿದ ನಾಲ್ಕು ಎಕರೆ ಭೂಮಿ.][2]][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 26ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

.(2) ಉಪಪ್ರಕರಣ (1)ರ ಉಪಬಂಧಗಳಿಗೆ ಬಾಧಕವಾಗದಂತೆ, [1][ತಹಶೀಲ್ದಾರರು][1] [1][ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ][1] ಯಾರೇ ವ್ಯಕ್ತಿಯು ಭೂಮಿಯನ್ನು ಧಾರಣ ಮಾಡಿರುವನೆಂದು ಅಥವಾ ವಾಸವಾಗಿರುವನೆಂದು ನಂಬಲು [1][ಅವನಿಗೆ][1] ಕಾರಣಗಳಿದ್ದರೆ, ನೋಟೀಸನ್ನು, ಆ ವ್ಯಕ್ತಿಯು ಧಾರಣ ಮಾಡಿರುವ ಎಲ್ಲ ಭೂಮಿಗಳ ಬಗ್ಗೆ ಘೋಷಣೆಯನ್ನು ಆ ನೋಟಿಸಿನಲ್ಲಿ ನಿರ್ದಿಷ್ಟಪಡಿಸಬಹುದಾದ ಅವಧಿಯೊಳಗಾಗಿ (ನೋಟೀಸು ಜಾರಿ ಮಾಡಿದ ದಿನಾಂಕದಿಂದ ಮೂವತ್ತು ದಿನಗಳಿಗೆ ಕಡಿಮೆ ಇಲ್ಲದ) ಸಲ್ಲಿಸುವಂತೆ ಆ ವ್ಯಕ್ತಿಯನ್ನು ಅಗತ್ಯಪಡಿಸಿ ನೀಡಲು ಅಧಿಕಾರ ಹೊಂದಿರತಕ್ಕದ್ದು ಮತ್ತು ಅಂಥ ಘೋಷಣೆಯನ್ನು ಸಲ್ಲಿಸುವುದು ಅಂಥ ವ್ಯಕ್ತಿಯ ಕರ್ತವ್ಯವಾಗಿರತಕ್ಕದ್ದು.

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಉಪಪ್ರಕರಣ (1)ರ ಅಥವಾ ಉಪಪ್ರಕರಣ (2)ರ ಮೇರೆಗೆ ಸಲ್ಲಿಸಿದ ಪ್ರತಿಯೊಂದು ಘೋಷಣೆಯು ನಿಯಮಿಸಿದ ನಮೂನೆಯಲ್ಲಿರತಕ್ಕದ್ದು ಮತ್ತು ಘೋಷಣೆಯನ್ನು ಸಲ್ಲಿಸುವ ವ್ಯಕ್ತಿಯು, ಆ ಬಗ್ಗೆ ಸ್ವೀಕೃತಿ ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು.

[1][(4) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, 1961ರ ನವೆಂಬರ್ 18ರಂದು ಅಥವಾ ಆ ತರುವಾಯ ಮತ್ತು ತಿದ್ದುಪಡಿ ಅಧಿನಿಯಮವು ಆರಂಭವಾಗುವುದಕ್ಕೆ ಮೊದಲು,–

(ಎ) ರಾಜ್ಯ ಸರ್ಕಾರಕ್ಕೆ ಸೇರಿದ ನೀರಿನ ಮೂಲದಿಂದ ನೀರಾವರಿ ಸೌಲಭ್ಯಗಳನ್ನು ಹೊಂದಿರುವ ಹತ್ತು ಎಕರೆ ಅಥವಾ ಅದಕ್ಕಿಂತ ಹೆಚ್ಚಿನ ಭೂಮಿಗಳನ್ನು; ಅಥವಾ

(ಬಿ) ಮಳೆ ನೀರನ್ನು ಆಶ್ರಯಿಸಿ ಭತ್ತವನ್ನು ಬೆಳೆಯುವ ಇಪ್ಪತ್ತು ಎಕರೆ ಅಥವಾ ಅದಕ್ಕಿಂತ ಹೆಚ್ಚಿನ ಭೂಮಿಗಳನ್ನು; ಅಥವಾ

(ಸಿ) ಖಂಡ (ಎ) ಮತ್ತು (ಬಿ)ಯಲ್ಲಿ ನಿರ್ದಿಷ್ಟಪಡಿಸಿದಂತ ಭೂಮಿಗಳಲ್ಲದ ನಲವತ್ತು ಎಕರೆ ಅಥವಾ ಅದಕ್ಕಿಂತ ಹೆಚ್ಚಿನ ಭೂಮಿಗಳನ್ನು

– ಧಾರಣ ಮಾಡಿರುವ ಪ್ರತಿಯೊಬ್ಬ ವ್ಯಕ್ತಿಯು, ಅವನು ಹಾಗೆ ಧಾರಣ ಮಾಡಿರುವ ಭೂಮಿಯ ಸಂಬಂಧದಲ್ಲಿ, ಅಂಥ ವ್ಯಕ್ತಿಯ ಹಿಡುವಳಿಯು ಅಥವಾ ಅದರ ಹೆಚ್ಚಿನ ಭಾಗವು ಯಾವ ತಹಸೀಲ್ದಾರರ ಅಧಿಕಾರ ವ್ಯಾಪ್ತಿಯೊಳಗೆ ಇದೆಯೋ ಅಥವಾ ಇತ್ತೋ ಆ ತಹಸೀಲ್ದಾರರಿಗೆ ಈ ಮುಂದಿನ ವಿವರಗಳನ್ನು ಎಂದರೆ:–

(i) ಭೂಮಿಯ ವಿವರಗಳನ್ನು;

(ii) ಅವನ ಕುಟುಂಬದವರ ವಿವರಗಳನ್ನು;

(iii) 1971ರ ಜನವರಿ 24ಕ್ಕೆ ಮೊದಲು ಹಾಗೂ ಆ ದಿನಾಂಕದ ತರುವಾಯ ಯಾವುದೇ ರೀತಿಯಲ್ಲಿ ವರ್ಗಾವಣೆ ಮಾಡಿದ ಅಥವಾ ವಿಲೆಮಾಡಿದ ಭೂಮಿಗಳ ವಿವರಗಳನ್ನು;

(iv) ಯಾವ ವ್ಯಕ್ತಿಗಳಿಗೆ ಯಾವುದಾದರೂ ಭೂಮಿಗಳನ್ನು ವರ್ಗಾವಣೆ ಮಾಡಲಾಯಿತೋ ಅಥವಾ ವಿಲೇ ಮಾಡಲಾಯಿತೋ ಆ ವ್ಯಕ್ತಿಗಳ ವಿವರಗಳನ್ನು;

(v) ನಿಯಮಿಸಬಹುದಾದಂಥ ಇತರೆ ವಿವರಗಳನ್ನು

– ಒಳಗೊಂಡಿರುವ ಘೋಷಣೆಯನ್ನು 1975ರ ಸೆಪ್ಟೆಂಬರ್ ಹನ್ನೊಂದನೇ ದಿನದಿಂದ ಒಂದು ನೂರ ಎಂಬತ್ತು ದಿನಗಳೊಗಾಗಿ ಸಲ್ಲಿಸತಕ್ಕದ್ದು.

(5) ಉಪಪ್ರಕರಣ (1ಎ) (2) ಮತ್ತು (3)ರ ಉಪಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ (4)ನೇ ಉಪಪ್ರಕರಣದ ಮೇರೆಗೆ ಒದಗಿಸಬೇಕಾದ ಘೋಷಣೆಗಳಿಗೆ ಅನ್ವಯವಾಗತಕ್ಕದ್ದು.][1]

1. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ (4) ಮತ್ತು (5)ನೇ ಉಪಪ್ರಕರಣಗಳನ್ನು ಸೇರಿಸಲಾಗಿದೆ.

[1][**ವಿವರಣೆ:**– x x x][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**66ಎ. ಘೋಷಣೆಯನ್ನು ಸಲ್ಲಿಸಲು ತಪ್ಪಿದ್ದಕ್ಕಾಗಿ ದಂಡ.–** (1) ಘೋಷಣೆಯನ್ನು ಸಲ್ಲಿಸಬೇಕೆಂದು 66ನೇ ಪ್ರಕರಣದ ಮೇರೆಗೆ ಅಗತ್ಯಪಡಿಸಿದ ವ್ಯಕ್ತಿಯು,–

(ಎ) ಆ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಕಾಲದೊಳಗೆ ಘೋಷಣೆಯನ್ನು ಸಲ್ಲಿಸಲು ಸಮಂಜಸವಾದ ಕಾರಣವಿಲ್ಲದೆ ತಪ್ಪಿದರೆ; ಅಥವಾ

(ಬಿ) ಸುಳ್ಳೆಂದು ತಿಳಿದಿರುವ ಅಥವಾ ಸುಳ್ಳೆಂದು ತನಗೆ ನಂಬಲು ಕಾರಣವಿರುವ ಘೋಷಣೆಯನ್ನು ಸಲ್ಲಿಸಿದರೆ

– ತಹಶೀಲ್ದಾರರು ಅಂಥ ವ್ಯಕ್ತಿಗೆ, ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡವನ್ನು ಅವನಿಗೆ ಏಕೆ ವಿಧಿಸಬಾರದೆಂಬುದಕ್ಕೆ ನೋಟೀಸನ್ನು ಜಾರಿ ಮಾಡಿದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಕಾರಣ ಕೊಡಬೇಕೆಂದು ಕೇಳಿ ನೋಟೀಸನ್ನು ನೀಡತಕ್ಕದ್ದು. ಆ ನೋಟೀಸಿಗೆ ಉತ್ತರವನ್ನು ಕೊಡದಿದ್ದರೆ ಅಥವಾ ಉತ್ತರವನ್ನು ಕೊಟ್ಟಿರುವಲ್ಲಿ ಆ ವ್ಯಕ್ತಿಯು ಸಮಂಜಸ ಕಾರಣವಿಲ್ಲದೆ ಗೊತ್ತುಪಡಿಸಿದ ಅವಧಿಯೊಳಗೆ ಘೋಷಣೆಯನ್ನು ಸಲ್ಲಿಸಲು ತಪ್ಪಿದ್ದಾನೆಂದು ಅಥವಾ ಅದು ಸುಳ್ಳೆಂದು ತಿಳಿದು ಅಥವಾ ಸುಳ್ಳೆಂದು ತನಗೆ ನಂಬಲು ಕಾರಣವಿರುವ ಘೋಷಣೆಯನ್ನು ಒದಗಿಸಿದ್ದಾನೆಂದು ತಹಸೀಲ್ದಾರರಿಗೆ ಮನದಟ್ಟಾದರೆ, ತಹಸೀಲ್ದಾರರು ಆದೇಶದ ಮೂಲಕ, ಸದರಿ ದಂಡವನ್ನು ವಿಧಿಸಬಹುದು ಮತ್ತು ಆ ಆದೇಶವು ಜಾರಿಯಾದ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗೆ ಎಲ್ಲ ವಿವರಗಳನ್ನೂ ಸಂಪೂರ್ಣವಾಗಿ ಒಳಗೊಂಡ ನಿಜವಾದ ಮತ್ತು ಸರಿಯಾದ ಹೇಳಿಕೆಯನ್ನು ಸಲ್ಲಿಸಬೇಕೆಂದು ಅಂಥ ವ್ಯಕ್ತಿಯನ್ನು ಅಗತ್ಯಪಡಿಸಬಹುದು.

(2) ನೀಡಿದ ಕಾಲದೊಳಗೆ ಆ ಆದೇಶವನ್ನು ಪಾಲಿಸಲು ಅಂಥ ವ್ಯಕ್ತಿಯು ತಪ್ಪಿದರೆ ಭೂಮಿಯ ಗರಿಷ್ಠ ಮಿತಿ ವಿಸ್ತೀರ್ಣವನ್ನು ಮೀರಿ ಅಂಥ ವ್ಯಕ್ತಿಯು ಧಾರಣ ಮಾಡಿರುವ ಭೂಮಿಯಲ್ಲಿನ ಹಕ್ಕು, ಹಕ್ಕು ಸ್ವಾಮ್ಯವು ಮತ್ತು ಹಿತಾಸಕ್ತಿಯು ದಂಡವಾಗಿ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲಾಗತಕ್ಕದ್ದು ಮತ್ತು ಆ ತರುವಾಯ ರಾಜ್ಯ ಸರ್ಕಾರದಲ್ಲಿ ಅದು ನಿಹಿತವಾಗತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**67. ಕೆಲವು ಸಂದರ್ಭಗಳಲ್ಲಿ ಭೂಮಿಯನ್ನು ಬಿಟ್ಟು ಕೊಡುವುದು.–** [1][(1) (ಎ) 66ಎ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಹೊರತು, 66ನೇ ಪ್ರಕರಣದ ಮೇರೆಗೆ ಮಾಡಿದ ಘೋಷಣೆಯನ್ನು ಸ್ವೀಕರಿಸಿದ ಮೇಲೆ ತಹಸೀಲ್ದಾರರು –

(i) ಭೂಮಿಯ ಸರ್ವೆ ನಂಬರಗೆ ಮತ್ತು ವಿಸ್ತೀರ್ಣಕ್ಕೆ ಸಂಬಂಧಿಸಿದಂತೆ ಆ ಘೋಷಣೆಯಲ್ಲಿ, ಒಳಗೊಂಡಿರುವ ವಿವರಗಳನ್ನು ಪರಿಶೀಲಿಸತಕ್ಕದ್ದು;

(ii) ಭೂಮಿಯು ಎ, ಬಿ, ಸಿ ಅಥವಾ ಡಿ ದರ್ಜೆಗಳಲ್ಲಿ ಯಾವ ದರ್ಜೆಗೆ ಸೇರಿದೆ ಎಂದು ನಿರ್ಧರಿಸತಕ್ಕದ್ದು; ಮತ್ತು

(iii) ಘೋಷಣೆಯನ್ನು ಮತ್ತು ಸಂಬಂಧಪಟ್ಟ ದಾಖಲೆಗಳನ್ನು ನ್ಯಾಯಾಧಿಕರಣದ ಮುಂದೆ ಇಡತಕ್ಕದ್ದು.

[2][(ಎಎ) ಒಬ್ಬ ತಹಸೀಲ್ದಾರರ ಮುಂದೆ ಘೋಷಿಸಿದ ಹಿಡುವಳಿಯ ಒಂದು ಭಾಗವು ಮತ್ತೊಬ್ಬ ತಹಸೀಲ್ದಾರರ ಅಧಿಕಾರ ವ್ಯಾಪ್ತಿಯೊಳಗಿದ್ದರೆ, ಮೊದಲಿನ ತಹಸೀಲ್ದಾರರು ಆ ಮತ್ತೊಬ್ಬ ತಹಸೀಲ್ದಾರರಿಗೆ ಘೋಷಣೆಯ ಪ್ರತಿಯನ್ನು ಕಳುಹಿಸತಕ್ಕದ್ದು ಮತ್ತು ಆ ಮತ್ತೊಬ್ಬ ತಹಸೀಲ್ದಾರರು ಅಂಥ ಭಾಗದ ಸಂಬಂಧದಲ್ಲಿ (ಎ) ಖಂಡದ (i) ಮತ್ತು (ii) ನೇ ಬಾಬುಗಳಲ್ಲಿ ನಿರ್ದಿಷ್ಟಪಡಿಸಿರುವಂತೆ ಪರಿಶೀಲನೆಯನ್ನು ಮತ್ತು ನಿರ್ಧರಣೆಯನ್ನು ಮಾಡತಕ್ಕದ್ದು ಮತ್ತು ಘೋಷಣೆಯ ಪ್ರತಿಯನ್ನು ಮತ್ತು ಸಂಬಂಧಪಟ್ಟ ದಾಖಲೆಗಳನ್ನು ನ್ಯಾಯಾಧಿಕರಣದ ಮುಂದೆ ಇಡುವುದಕ್ಕಾಗಿ ಮೊದಲಿನ ತಹಸೀಲ್ದಾರರಿಗೆ ಕಳುಹಿಸತಕ್ಕದ್ದು.][2]

(ಬಿ) ಆ ತರುವಾಯ ಮತ್ತು ನಿಯಮಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ಮೇಲೆ ನ್ಯಾಯಾಧಿಕರಣವು ಹಿಡುವಳಿಯ ಮತ್ತು ವಿಸ್ತೀರ್ಣವನ್ನು ಮತ್ತು ಅಂಥ ವಿಸ್ತೀರ್ಣವು ಭೂಮಿಯ ಗರಿಷ್ಠ ಮಿತಿ ವಿಸ್ತೀರ್ಣವನ್ನು ಎಷ್ಟು ವಿಸ್ತೀರ್ಣದಷ್ಟು ಮಿರುತ್ತದೆಯೋ ಆ ವಿಸ್ತೀರ್ಣವನ್ನು ನಿರ್ಧರಿಸತಕ್ಕದ್ದು.

(ಸಿ) ನ್ಯಾಯಾಧಿಕರಣವು ಹಾಗೆ ನಿರ್ಧರಿಸಿದಂಥ ಹಿಡುವಳಿಯ ಒಟ್ಟು ವಿಸ್ತೀರ್ಣವು ಗರಿಷ್ಠ ಮಿತಿ ವಿಸ್ತೀರ್ಣಕ್ಕೆ ಸಮವಾಗಿದ್ದಲ್ಲಿ ಅಥವಾ ಕಡಿಮೆಯಿದ್ದಲ್ಲಿ, ಸಂಬಂಧಪಟ್ಟ ವ್ಯಕ್ತಿಯು, ಅವನ ಇಡೀ ಹಿಡುವಳಿಯನ್ನು ಉಳಿಸಿಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು; ಆದರೆ ಒಟ್ಟು ವಿಸ್ತೀರ್ಣವು ಗರಿಷ್ಠ ಮಿತಿ ವಿಸ್ತೀರ್ಣಗಿಂತ ಹೆಚ್ಚಾಗಿದ್ದಲ್ಲಿ ಅಂಥ ವ್ಯಕ್ತಿಯು ಭೂಮಿಯ ಅಂಥ ಹೆಚ್ಚಿನ ವಿಸ್ತೀರ್ಣವನ್ನು ಬಿಟ್ಟುಕೊಡಲು ಬದ್ಧನಾಗಿರತಕ್ಕದ್ದು. ಬಿಟ್ಟುಕೊಟ್ಟ ಭೂಮಿಯ ವಿಸ್ತೀರ್ಣವು ಹಾಗೆ ಬಿಟ್ಟುಕೊಟ್ಟ ನಂತರ ಅವನು ಉಳಿಸಿಕೊಂಡಿರುವ ಭೂಮಿಯ ಒಟ್ಟು ವಿಸ್ತೀರ್ಣವನ್ನು ಗರಿಷ್ಠ ಮಿತಿಯ ವಿಸ್ತೀರ್ಣದಷ್ಟಾಗಿಸುವಂತದಾಗಿರತಕ್ಕದ್ದು.

(ಡಿ) ನ್ಯಾಯಾದಿಕರಣದ ಆದೇಶವು ಅಂತಿಮವಾದುದಾಗಿರತಕ್ಕದ್ದು ಮತ್ತು ಸಂಬಂಧಪಟ್ಟ ವ್ಯಕ್ತಿಗೆ ಹಾಗೂ ತಹಸೀಲ್ದಾರರಿಗೆ ಅದನ್ನು ಕಳುಹಿಸಿಕೊಡತಕ್ಕದ್ದು.][1]

[3][(1ಎ) ಕುಟುಂಬಕ್ಕೆ ಸೇರಿದ ಭೂಮಿಯಲ್ಲಿ ಬಿಟ್ಟು ಕೊಡಬಹುದಾದಂಥ "ಸ್ತ್ರೀಧನ" ಭೂಮಿಯು ಸೇರಿರುವಲ್ಲಿ ಬಿಟ್ಟು ಕೊಡಬಹುದಾದ "ಸ್ತ್ರೀಧನ" ಭೂಮಿಯ ವಿಸ್ತೀರ್ಣವು ಕುಟುಂಬವು ಹೊಂದಿರುವ ಇತರ ಭೂಮಿಯ ವಿಸ್ತೀರ್ಣದಲ್ಲಿ "ಸ್ತ್ರೀಧನ" ಭೂಮಿಯ ವಿಸ್ತೀರ್ಣವು ಎಷ್ಟು ಪ್ರಮಾಣ ಇರುತ್ತದೆಯೋ ಆ ಪ್ರಮಾಣವನ್ನು ಯಾವ ಸಂದರ್ಭದಲ್ಲೂ ಮೀರತಕ್ಕದ್ದಲ್ಲ.

(1ಬಿ) ಯಾರೇ ವ್ಯಕ್ತಿಯು ತಾನು ಸ್ವತಃ ಸಾಗುವಳಿ ಮಾಡುವ ಭೂಮಿಗಳನ್ನು ಹಾಗೂ ಗೇಣಿದಾರನಿಂದ ಸಾಗುವಳಿಯಾಗುವ ಭೂಮಿಗಳನ್ನು ಧಾರಣ ಮಾಡಿದ್ದರೆ ಗೇಣಿದಾರನಿಂದ ಸಾಗುವಳಿಯಾಗುವ ಭೂಮಿಯನ್ನು ಗಣನೆಗೆ ತೆಗೆದುಕೊಂಡು, ಅವನು ಬಿಟ್ಟು ಕೊಡಬೇಕಾದ ಹೆಚ್ಚುವರಿ ಭೂಮಿಯು 3ನೇ ಅಧ್ಯಾಯದ ಉಪಬಂಧಗಳಿಗೆ ಒಳಪಟ್ಟಿರತಕ್ಕದ್ದು.][3]

1. 1976ರ ಅಧಿನಿಯಮ ಸಂಖ್ಯೆ 44ರ ಮೂಲಕ ದಿನಾಂಕ 02.06.1976 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 25.11.1980 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಉಪಪ್ರಕರಣ (1)ರ ಮೇರೆಗೆ ಭೂಮಿಯನ್ನು ಬಿಟ್ಟು ಕೊಡಲು ಬದ್ಧನಾದ ಪ್ರತಿಯೊಬ್ಬ ವ್ಯಕ್ತಿಗೆ ಅವನು ಎಷ್ಟು ವಿಸ್ತೀರ್ಣದ ಭೂಮಿಯನ್ನು ಬಿಟ್ಟು ಕೊಡಬೇಕೆಂಬುದನ್ನು ನಿರ್ದಿಷ್ಟಪಡಿಸುವ ಮತ್ತು ನಿಯಮಿಸಬಹುದಾದ ರೀತಿಯಲ್ಲಿ ಮತ್ತು ಕಾಲಾವಧಿಯೊಳಗೆ ಒಂದು ಹೇಳಿಕೆಯನ್ನು, ಅದರಲ್ಲಿ ಅವನು ಬಿಟ್ಟು ಕೊಡಲು ಉದ್ದೇಶಿಸಿರುವ ಭೂಮಿಯನ್ನು ನಿರ್ದಿಷ್ಟಪಡಿಸಿ, ದಾಖಲು ಮಾಡುವಂತೆ ಅಗತ್ಯಪಡಿಸುವ ನೋಟೀಸನ್ನು [1][ನ್ಯಾಯಾಧಿಕರಣವು][1] ಜಾರಿ ಮಾಡತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 44ರ ಮೂಲಕ ದಿನಾಂಕ 02.06.1976 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(3) ಸಂಬಂಧಪಟ್ಟ ವ್ಯಕ್ತಿಯು ನಿಯಮಿಸಿದ ಕಾಲಾವಧಿಯೊಳಗೆ ಅಂಥ ಘೋಷಣೆಯನ್ನು ದಾಖಲು ಮಾಡಿದರೆ, [2][ನ್ಯಾಯಾಧೀಕರಣವು][2] (3ಎ) ಉಪ ಪ್ರಕರಣದ ಉಪಬಂಧಗಳಿಗೊಳಪಟ್ಟು ಬಿಟ್ಟು ಕೊಟ್ಟಿರುವುದನ್ನು ಅನುಮೋದಿಸುವ ಆದೇಶವನ್ನು ಹೊರಡಿಸಬಹುದು ಮತ್ತು ಆ ತರುವಾಯ ಸದರಿ ಭೂಮಿಯನ್ನು ಅಂಥ ವ್ಯಕ್ತಿಯು ಬಿಟ್ಟು ಕೊಟ್ಟಿದ್ದಾನೆಂದು ಭಾವಿಸತಕ್ಕದ್ದು.

(3ಎ) ಬಿಟ್ಟು ಕೊಡಲು ಉದ್ದೇಶಿಸಿದ ಭೂಮಿಯು ಆ ಭೂಮಿಗೆ ಹೋಗಲು ಸಾಧ್ಯವಿಲ್ಲವೆಂಬ ಕಾರಣದ ಮೇಲೆ ಅಥವಾ ನಿಯಮಿಸಬಹುದಾದಂಥ ಇತರ ಯಾವುದೇ ಕಾರಣದಿಂದಾಗಿ ಸೂಕ್ತವಾದುದಾಗಿರದಿದ್ದರೆ, [2][ನ್ಯಾಯಾಧೀಕರಣವು][2] ಅದನ್ನು ತಿರಸ್ಕರಿಸಿ ಆದೇಶವನ್ನು ಹೊರಡಿಸಬಹುದು ಮತ್ತು ಸೂಕ್ತವಾದ ಬೇರೆ ಭೂಮಿಯನ್ನು ನಿರ್ದಿಷ್ಟಪಡಿಸಿ ಹೊಸ ಹೇಳಿಕೆಯನ್ನು ದಾಖಲು ಮಾಡುವಂತೆ ಸಂಬಂಧಪಟ್ಟ ವ್ಯಕ್ತಿಯನ್ನು ಕೇಳಬಹುದು. ಅಂಥ ಹೇಳಿಕೆಯನ್ನು ದಾಖಲು ಮಾಡಿದ ನಂತರ [2][ನ್ಯಾಯಾಧೀಕರಣವು][2] ಹಾಗೆ ಬಿಟ್ಟು ಕೊಟ್ಟಿರುವುದನ್ನು ಅನುಮೋದಿಸಿ ಆದೇಶವನ್ನು ಹೊರಡಿಸತಕ್ಕದ್ದು ಮತ್ತು ನಂತರ ಸದರಿ ಭೂಮಿಯನ್ನು ಅಂಥ ವ್ಯಕ್ತಿಯು ಬಿಟ್ಟು ಕೊಟ್ಟಿರುವುದಾಗಿ ಭಾವಿಸತಕ್ಕದ್ದು. ಅಂಥ ವ್ಯಕ್ತಿಯು ಹೊಸ ಹೇಳಿಕೆಯನ್ನು ದಾಖಲು ಮಾಡಲು ತಪ್ಪಿದರೆ, ಅವನು ಬಿಟ್ಟು ಕೊಡಬೇಕಾಗಿರುವ ಭೂಮಿಯನ್ನು [2][ನ್ಯಾಯಾಧೀಕರಣವು][2] [3][ತಾನೇ][3] ಆಯ್ಕೆ ಮಾಡಬಹುದು ಆ ಮಟ್ಟಿಗೆ ಆದೇಶವೊಂದನ್ನು ಹೊರಡಿಸಬಹುದು ಆ ತರುವಾಯ ಮತ್ತು ಸದರಿ ಭೂಮಿಯನ್ನು ಅಂಥ ವ್ಯಕ್ತಿಯು ಬಿಟ್ಟುಕೊಟ್ಟಿರುವುದಾಗಿ ಭಾವಿಸತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ (3) ಮತ್ತು (3ಎ) ಉಪಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ.

2. 1976ರ ಅಧಿನಿಯಮ ಸಂಖ್ಯೆ 44ರ ಮೂಲಕ ದಿನಾಂಕ 02.06.1976 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(4) ಸಂಬಂಧಪಟ್ಟ ವ್ಯಕ್ತಿಯು ನಿಯಮಿಸಬಹುದಾದ ಕಾಲಾವಧಿಯೊಳಗೆ ಅಂಥ ಹೇಳಿಕೆಯನ್ನು ದಾಖಲ್ಮಾಡದಿದ್ದಲ್ಲಿ ಅವನು ಬಿಟ್ಟುಕೊಡಬೇಕಾದ ಭೂಮಿಯನ್ನು [1][ನ್ಯಾಯಾಧೀಕರಣವು][1] [2][ತಾನೇ][2] ಆಯ್ಕೆ ಮಾಡಬಹುದು ಮತ್ತು ಆ ಮಟ್ಟಿಗೆ ಒಂದು ಆದೇಶವನ್ನು ಹೊರಡಿಸಬಹುದು ಮತ್ತು ಆನಂತರ ಸದರಿ ಭೂಮಿಯನ್ನು ಅಂಥ ವ್ಯಕ್ತಿಯು ಬಿಟ್ಟು ಕೊಟ್ಟಿದ್ದಾನೆಂದು ಭಾವಿಸತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 44ರ ಮೂಲಕ ದಿನಾಂಕ 02.06.1976 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(5) ಭೂಮಿಯನ್ನು ಬಿಟ್ಟು ಕೊಡುವುದಕ್ಕೆ ಸಂಬಂಧಪಟ್ಟಂತೆ [1][(3), (3ಎ) ಅಥವಾ (4)ನೇ][1] ಉಪ ಪ್ರಕರಣದ ಮೇರೆಗೆ ಒಂದು ಆದೇಶವನ್ನು, ಕಾರ್ಯಸಾಧ್ಯವಾಗಬಹುದಾದಷ್ಟರಮಟ್ಟಿಗೆ ಸರ್ವೆ ನಂಬರಿನಲ್ಲಿ ಅಥವಾ ಸರ್ವೆ ನಂಬರಿನ ಅಂಗೀಕೃತ ಭಾಗದಲ್ಲಿ ಅಥವಾ ಸರ್ವೆ ನಂಬರಿನ ಉಪ-ವಿಭಾಗದಲ್ಲಿ ಒಳಗೊಂಡಿರುವ ಭೂಮಿಯ ಸಂಬಂಧದಲ್ಲಿ ಹೊರಡಿಸತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**67ಎ. ಭೂಮಿಯ ಬಳಕೆಗೆ ಮತ್ತು ಅಧಿಭೋಗಕ್ಕೆ ಪರಿಹಾರ ಸಂದಾಯ.–** (1) ಈ ಅಧ್ಯಾಯದ ಮೇರೆಗೆ ನಿರ್ಧರಿಸಿರುವಂತೆ, ಗರಿಷ್ಠ ಮಿತಿ ವಿಸ್ತೀರ್ಣಕ್ಕೆ ಮೀರದ ಭೂಮಿಯ ಸ್ವಾಧೀನವನ್ನು ಹೊಂದಿರುವ ಪ್ರತಿಯೊಬ್ಬ ವ್ಯಕ್ತಿಯು, ಹೆಚ್ಚುವರಿ ಭೂಮಿಯನ್ನು ನಿರ್ಧರಿಸಿ ಹೊರಡಿಸಿದ ಆದೇಶದ ದಿನಾಂಕದಿಂದ ಭೂಮಿಯ ಅಂಥ ವಿಸ್ತೀರ್ಣವು ಅವನ ಸ್ವಾಧೀನದಲ್ಲಿ ಯಾವ ಅವಧಿಯಲ್ಲಿ ಇತ್ತೋ ಆ ಅವಧಿಗೆ ಅಂಥ ಭೂಮಿಯ ಬಳಕೆಗಾಗಿ ಮತ್ತು ಅಧಿಭೋಗಕ್ಕಾಗಿ ನಿಯಮಿಸಿದ ರೀತಿಯಲ್ಲಿ ನ್ಯಾಯಾಧಿಕರಣವು ನಿರ್ಧರಿಸಬಹುದಾದಂಥ ಪರಿಹಾರವನ್ನು ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು.

(2) ಉಪಪ್ರಕರಣ (1)ರ ಮೇರೆಗೆ ಸಂದಾಯ ಮಾಡಬೇಕಾದ ಯಾವುದೇ ಮೊತ್ತವನ್ನು ಭೂ ಕಂದಾಯದ ಬಾಕಿಯಂತೆ ವಸೂಲು ಮಾಡಬಹುದು.][1]

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**68. ಒಡೆಯನು ಬಿಟ್ಟುಕೊಟ್ಟ ಭೂಮಿಯು ನಿಹಿತವಾಗುವುದು.–** 67ನೇ ಪ್ರಕರಣದ ಮೇರೆಗೆ ಭೂಮಿಯನ್ನು ಒಡೆಯನು (ಪರಿಮಿತ ಒಡೆಯನಲ್ಲದ) ಬಿಟ್ಟುಕೊಟ್ಟಿರುವಲ್ಲಿ [1][67ನೇ ಪ್ರಕರಣದ ಮೇರೆಗೆ ಆದೇಶವನ್ನು ಜಾರಿ ಮಾಡಿದ ಮೇಲೆ][1] ಭೂಮಿಯನ್ನು ರಾಜ್ಯ ಸರ್ಕಾರವು ತನ್ನ ವಶಕ್ಕೆ ತೆಗೆದುಕೊಳ್ಳಬಹುದು, ಆನಂತರ ಅಂಥ ಭೂಮಿಯು ಎಲ್ಲ ಋಣಭಾರಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 44ರ ಮೂಲಕ ದಿನಾಂಕ 02.06.1976 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**69. ಪರಿಮಿತ ಒಡೆಯನು ಬಿಟ್ಟು ಕೊಟ್ಟ ಭೂಮಿಯು ನಿಹಿತವಾಗುವುದು.–** (1) 67ನೇ ಪ್ರಕರಣದ ಮೇರೆಗೆ ಪರಿಮಿತ ಒಡೆಯನು ಭೂಮಿಯನ್ನು ಬಿಟ್ಟು ಕೊಟ್ಟಲ್ಲಿ ಅದು ಸಂಭಾವ್ಯ ಅನುಭೋಗದಾರನಲ್ಲಿ ನಿಹಿತವಾಗತಕ್ಕದ್ದು.

(2) ಉಪ ಪ್ರಕರಣ (1)ರ ಮೇರೆಗೆ ಯಾವುದೇ ಭೂಮಿಯು ನಿಹಿತವಾಗುವುದರಿಂದಾಗಿ ಸಂಭಾವ್ಯ ಅನುಭೋಗದಾರನು ಧಾರಣ ಮಾಡಿರುವ ಒಟ್ಟು ಭೂಮಿಯು 63ನೇ ಅಥವಾ 64ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಗರಿಷ್ಠ ಮಿತಿ ವಿಸ್ತೀರ್ಣಕ್ಕಿಂತ ಹೆಚ್ಚಾದರೆ, ಅಂಥ ಸಂಭಾವ್ಯ ಅನುಭೋಗದಾರನು ಹಾಗೆ ನಿಹಿತವಾದ ದಿನದಿಂದ ತೊಂಬತ್ತು ದಿನಗಳ ಅವಧಿಯೊಳಗೆ, ಅವನ ಹಿಡುವಳಿಯು ಅಥವಾ ಅದರ ಯಾವುದೇ ಭಾಗವು [1][ಯಾವ ತಹಸೀಲ್ದಾರರ ಅಧಿಕಾರ ವ್ಯಾಪ್ತಿಯೊಳಗೆ][1] ಇದೆಯೊ ಆ ತಹಸೀಲ್ದಾರರಿಗೆ ನಿಯಮಿಸಿದ ನಮೂನೆಯಲ್ಲಿ ತನ್ನ ಹಿಡುವಳಿಯ ಬಗ್ಗೆ ಘೋಷಣೆಯನ್ನು ಕೊಡತಕ್ಕದ್ದು, ಮತ್ತು ಆ ತರುವಾಯ, ಈ ಅಧಿನಿಯಮದ ಸಂಬಂಧಪಟ್ಟ ಎಲ್ಲಾ ಉಪಬಂಧಗಳು ಆ ಘೋಷಣೆಯು 66ನೇ ಪ್ರಕರಣದ ಮೇರೆಗೆ ಅವನು ದಾಖಲು ಮಾಡಿದ ಘೋಷಣೆಯಾಗಿದ್ದರೆ ಹೇಗೊ ಹಾಗೆ ಅನ್ವಯವಾಗತಕ್ಕದ್ದು.

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಉಪಪ್ರಕರಣ (1)ರ ಮೇರೆಗೆ ಯಾವುದೇ ಭೂಮಿಯು ಯಾವ ಸಂಭಾವ್ಯ ಅನುಭೋಗದಾರನಲ್ಲಿ ನಿಹಿತವಾಗುವುದೋ ಆ ಸಂಭಾವ್ಯ ಅನುಭೋಗದಾರನು (1)ನೇ ಉಪಪ್ರಕರಣದ ಮೇರೆಗೆ ತನ್ನಲ್ಲಿ ಹಾಗೆ ನಿಹಿತವಾಗುವ ಭೂಮಿಗೆ ಸಂಬಂಧಿಸಿದಂತೆ, [1][xxx][1] 72ನೇ ಪ್ರಕರಣದ ಮೇರೆಗೆ ಒಡೆಯನಿಗೆ ಸಂದಾಯ ಮಾಡಬೇಕಾದ ಮೊಬಲಗಿನ ಶೇಕಡಾ ನಾಲ್ಕೂವರೆಯಷ್ಟಕ್ಕೆ ಸಮನಾದ ವಾರ್ಷಿಕ ಮೊತ್ತವನ್ನು, ಪರಿಮಿತ ಒಡೆಯನು ಭೂಮಿಯನ್ನು ಬಿಟ್ಟುಕೊಡದಿದ್ದರೆ ಅದು ಎಲ್ಲಿಯವರೆಗೆ ಅವನ ಸ್ವಾಧೀನದಲ್ಲಿ ಮುಂದುವರಿಯಬಹುದಿತ್ತೋ ಅಲ್ಲಿಯವರೆಗೆ ಆ ಪರಿಮಿತ ಒಡೆಯನಿಗೆ ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**70. ಭೂಮಿಯ ಫಲಾನುಭವದ ಹಕ್ಕುಳ್ಳ ಅಡಮಾನದಾರ ಬಿಟ್ಟುಕೊಟ್ಟ ಭೂಮಿಯ ಸಂಭಾವ್ಯ ಅನುಭೋಗ ಮತ್ತು ನಿಹಿತತೆ.–** (1) 67ನೇ ಪ್ರಕರಣದ ಮೇರೆಗೆ ಭೂಮಿಯನ್ನು ಫಲಾನುಭವದ ಹಕ್ಕುಳ್ಳ ಅಡಮಾನದಾರನು ಬಿಟ್ಟುಕೊಟ್ಟಿರುವಲ್ಲಿ, ಆ ಭೂಮಿಯ ಸ್ವಾಧೀನವು (ಭೂಮಿಯ ಅಧಿಭೋಗದಲ್ಲಿರುವ ಗೇಣಿದಾರನ ಅಧಿಕಾರಗಳೇನಾದರೂ ಇದ್ದರೆ ಅವುಗಳಿಗೆ ಬಾಧಕವಾಗದಂತೆ) 67ನೇ ಪ್ರಕರಣದ ಉಪಬಂಧಗಳಿಗನುಸಾರವಾಗಿ ಸದರಿ ಭೂಮಿಯನ್ನು ಬಿಟ್ಟು ಕೊಡಲು ಅಡಮಾನದಾರನು ಬದ್ಧನಾಗಿರದ ಪ್ರತಿಯೊಂದು ಸಂದರ್ಭದಲ್ಲಿ ಮತ್ತು ಅವನು ಬದ್ಧನಾಗಿರದಷ್ಟರ ಮಟ್ಟಿಗೆ, [1][79ಎ ಪ್ರಕರಣದ ಮೇರೆಗೆ ಭೂಮಿಗಳನ್ನು ಧಾರಣ ಮಾಡಲು ಹಕ್ಕಿಲ್ಲದವನಾಗಿರದ][1] ಅಡಮಾನದಾರನಿಗೆ ಪುನಃ ಪ್ರಾಪ್ತವಾಗತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಉಪ ಪ್ರಕರಣ (1)ರ ಮೇರೆಗೆ ಭೂಮಿಯ ಸ್ವಾಧೀನವು ಯಾವ ಅಡಮಾನದಾರನಿಗೆ ಪುನಃ ಪ್ರಾಪ್ತವಾಗುವುದೋ ಆ ಅಡಮಾನದಾರನು ಸದರಿ ಭೂಮಿಯ ಸಂಬಂಧದಲ್ಲಿ ಫಲಾನುಭವದ ಹಕ್ಕುಳ್ಳ ಅಡಮಾನದಾರನಿಗೆ ಸಲ್ಲಬೇಕಾದ ಅಡಮಾನದ ಹಣವನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು, ಮತ್ತು ಸದರಿ ಭೂಮಿಯು ಅಂಥ ಸಂದಾಯಕ್ಕೆ ಆಧಾರವಾಗಿರತಕ್ಕದ್ದು.

(3) ಫಲಾನುಭವದ ಹಕ್ಕುಳ್ಳ ಅಡಮಾನದಾರನು ಬಿಟ್ಟುಕೊಟ್ಟ ಭೂಮಿಯ ಸ್ವಾಧೀನವು, [1][ಅಡಮಾನದಾರನು ತಾನು ಧಾರಣ ಮಾಡಿರುವ ಭೂಮಿಯನ್ನು 67ನೇ ಪ್ರಕರಣದ ಮೇರೆಗೆ ಬಿಟ್ಟು ಕೊಡಲು ಸ್ವತಃ ಬದ್ಧನಾಗಿರುವನೆಂಬ ಕಾರಣದಿಂದಾಗಿ][1] ಅವನಿಗೆ ಪುನಃ ಪ್ರಾಪ್ತವಾಗದಿದ್ದರೆ ರಾಜ್ಯ ಸರ್ಕಾರವು 73ನೇ ಪ್ರಕರಣದ ಮೇರೆಗೆ ಒಂದು ಅಧಿಸೂಚನೆಯನ್ನು ಪ್ರಕಟಿಸಿ, ಅಂಥ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು ಮತ್ತು ಆ ತರುವಾಯ ಸದರಿ ಭೂಮಿಯು ಎಲ್ಲ ಋಣಭಾರಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**71. ಗೇಣಿದಾರನು ಬಿಟ್ಟು ಕೊಟ್ಟ ಭೂಮಿಯು ನಿಹಿತವಾಗುವುದು.–** (1) ಭೂಮಿಯು 67ನೇ ಪ್ರಕರಣದ ಮೇರೆಗೆ ಗೇಣಿದಾರನು ಬಿಟ್ಟುಕೊಟ್ಟ ಭೂಮಿಯು [1][ಸೈನಿಕನದ್ದಾಗಿದ್ದರೆ ಅಥವಾ ನಾವಿಕನದ್ದಾಗಿದ್ದರೆ,][1] 67ನೇ ಪ್ರಕರಣದ ಉಪಬಂಧಗಳಿಗನುಸಾರವಾಗಿ ಅಂಥ ಭೂಮಿಯನ್ನು ಬಿಟ್ಟುಕೊಡಲು ಸ್ವತಃ ಭೂ ಒಡೆಯನು ಬಿಟ್ಟು ಕೊಡಲು ಬದ್ಧನಾಗಿಲ್ಲದಿರುವ ಪ್ರತಿಯೊಂದು ಸಂದರ್ಭದಲ್ಲಿಯೂ ಮತ್ತು ಹಾಗೆ ಬದ್ಧನಾಗಿಲ್ಲದಿರುವಷ್ಟರ ಮಟ್ಟಿಗೆ, ಭೂಮಿಯ ಸ್ವಾಧೀನವು ಭೂ ಒಡೆಯನಿಗೆ ಪುನಃ ಪ್ರಾಪ್ತವಾಗತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಸಲಾಗಿದೆ.

(2) ಉಪಪ್ರಕರಣ (1)ರ ಮೇರೆಗೆ ಭೂಮಿಯ ಸ್ವಾಧೀನವು ಯಾವ ಭೂ ಒಡೆಯನಿಗೆ ಪುನಃ ಪ್ರಾಪ್ತವಾಗುವುದೋ ಆ ಒಡೆಯನು ಅಂಥ ಭೂಮಿಯ ಒಂದು ವರ್ಷದ ನಿವ್ವಳ ವರಮಾನದ ಮೊಬಲಗಿಗೆ ಸಮನಾಗಿರುವ ಪರಿಹಾರವನ್ನು ಗೇಣಿದಾರನಿಗೆ ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

(3) ಗೇಣಿದಾರನು ಬಿಟ್ಟು ಕೊಟ್ಟ ಭೂಮಿಯ ಸ್ವಾಧೀನವು (1)ನೇ ಉಪ ಪ್ರಕರಣದ ಮೇರೆಗೆ ಭೂ ಒಡೆಯನಿಗೆ ಪುನಃ ಪ್ರಾಪ್ತವಾಗದಿರುವ ಸಂದರ್ಭಗಳಲ್ಲಿ, ರಾಜ್ಯ ಸರ್ಕಾರವು 73ನೇ ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಪ್ರಕಟಿಸಿ ಆ ಭೂಮಿಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು ಮತ್ತು ಸದರಿ ಭೂಮಿಯು ಆ ತರುವಾಯ ಎಲ್ಲ ಋಣಭಾರಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು.

[1][**72. ರಾಜ್ಯ ಸರ್ಕಾರಕ್ಕೆ ಬಿಟ್ಟುಕೊಟ್ಟ ಮತ್ತು ಅದರಲ್ಲಿ ನಿಹಿತವಾಗುವ ಭೂಮಿಗಳಿಗೆ ಸಂದಾಯ ಮಾಡಬೇಕಾದ ಮೊಬಲಗು.–** (1) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, 68, 70, 71, 79ಎ ಮತ್ತು 79ಬಿ ಪ್ರಕರಣಗಳ ಮೇರೆಗೆ ರಾಜ್ಯ ಸರ್ಕಾರವು ವಹಿಸಿಕೊಳ್ಳುವಂಥ ಭೂಮಿಯ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಮೊಬಲಗನ್ನು ಭೂಮಿಯಿಂದ ದೊರೆಯಬಹುದಾದ ನಿವ್ವಳ ವಾರ್ಷಿಕ ವರಮಾನವನ್ನು ಆಧರಿಸಿ ಈ ಮುಂದಿನ ಪ್ರಮಾಣಕ್ಕನುಸಾರವಾಗಿ ನಿರ್ಧರಿಸತಕ್ಕದ್ದು, ಎಂದರೆ:–

(i) ಭೂಮಿಯಿಂದ ಬರುವ ನಿವ್ವಳ ವಾರ್ಷಿಕ ವರಮಾನದ ಮೊದಲ ಐದು ಸಾವಿರ ರೂಪಾಯಿಗಳ ಮೊಬಲಗಿಗೆ ಅಥವಾ ಅದರ ಯಾವುದೇ ಭಾಗಕ್ಕೆ ಅಂಥ ಮೊಬಲಗಿನ ಅಥವಾ ಭಾಗದ ಹದಿನೈದರಷ್ಟು;

(ii) ಭೂಮಿಯಿಂದ ಬರುವ ನಿವ್ವಳ ವಾರ್ಷಿಕ ವರಮಾನದ ಆನಂತರದ ಐದು ಸಾವಿರ ರೂಪಾಯಿಗಳ ಮೊಬಲಗಿಗೆ ಅಥವಾ ಅದರ ಯಾವುದೇ ಭಾಗಕ್ಕೆ, ಅಂಥ ಮೊಬಲಗಿನ ಅಥವಾ ಭಾಗದ ಹನ್ನೆರಡರಷ್ಟು;

(iii) ಭೂಮಿಯಿಂದ ಬರುವ ನಿವ್ವಳ ವಾರ್ಷಿಕ ವರಮಾನದ ಉಳಿದ ಭಾಗಕ್ಕೆ ಅಂಥ ಉಳಿದ ಭಾಗದ ಹತ್ತರಷ್ಟು:

ಪರಂತು, ರಾಜ್ಯ ಸರ್ಕಾರವು ವಹಿಸಿಕೊಂಡ ಭೂಮಿಯು 1ನೇ ಅನುಸೂಚಿಯ ಎ ಭಾಗದಲ್ಲಿ ಉಲ್ಲೇಖಿಸಿರುವ ಡಿ ದರ್ಜೆಯ ಭೂಮಿಯಾಗಿದ್ದರೆ, ಅದರ ನಿವ್ವಳ ವಾರ್ಷಿಕ ವರಮಾನದ ಇಪ್ಪತ್ತರಷ್ಟಕ್ಕೆ ಸಮನಾದ ಮೊಬಲಗನ್ನು ಸಂದಾಯ ಮಾಡತಕ್ಕದ್ದು.

(2) ಉಪಪ್ರಕರಣ (1)ರ ಉದ್ದೇಶಕ್ಕಾಗಿ, ಭೂಮಿಯಿಂದ ಬರುವ ನಿವ್ವಳ ವಾರ್ಷಿಕ ವರಮಾನವನ್ನು 8ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದಂತೆ ಭೂಮಿಯ ಸಂಬಂಧದಲ್ಲಿ ವಾರ್ಷಿಕ ಗೇಣಿಯಾಗಿ ಸಂದಾಯ ಮಾಡಬೇಕಾದ ಮೊಬಲಗೆಂದು ಭಾವಿಸತಕ್ಕದ್ದು. ಆದರೆ ತರಿ ಅಥವಾ ಖುಷ್ಕಿ ಭೂಮಿಯೆಂದು ಕಂದಾಯ ನಿರ್ಧರಣೆ ಮಾಡಿರುವ ಭೂಮಿಯಲ್ಲಿ ಆ ಭೂಮಿಯ ಒಡೆಯನು ಹಣ್ಣಿನ ಮರಗಳನ್ನು ಬೆಳೆಸಿದ್ದರೆ, ಹಣ್ಣಿನ ಮರಗಳ ಬಗೆಗಳನ್ನು ಗಮನಿಸಿ ಬಾಗಾಯ್ತು ಭೂಮಿಗೆ ವಿಧಿಸಬಹುದಾದ ಕಂದಾಯ ನಿರ್ಧರಣೆಯ ಆಧಾರದ ಮೇಲೆ (1)ನೇ ಉಪಪ್ರಕರಣದ ಉದ್ದೇಶಗಳಿಗಾಗಿ ನಿವ್ವಳ ವಾರ್ಷಿಕ ವರಮಾನವನ್ನು ನಿರ್ಧರಿಸತಕ್ಕದ್ದು.

(3) ಉಪ ಪ್ರಕರಣ (1)ರ ಮೇರೆಗಿನ ಮೊಬಲಗನ್ನು ಈ ಕೆಳಕಂಡಂತೆ ಸಂದಾಯ ಮಾಡತಕ್ಕದ್ದು,-

(ಎ)ಭೂಮಿಯ ಸ್ವಾಧೀನದಲ್ಲಿ ಯಾರಾದರೂ ಗೇಣಿದಾರನು ಇದ್ದರೆ ಅವನಿಗೆ ಒಂದು ವರ್ಷದ ನಿವ್ವಳ ವರಮಾನಕ್ಕೆ ಸಮನಾದ ಮೊಬಲಗು;

(ಬಿ) ಉಳಿದುದನ್ನು ಭೂ ಒಡೆಯನಿಗೆ.

(4) ಭೂ ಒಡೆಯನು ಬಾವಿಗಳನ್ನು ಅಥವಾ ಖಾಯಂ ಸ್ವರೂಪದ ಇತರ ಕಟ್ಟಡಗಳನ್ನು, ಭೂಮಿಯಲ್ಲಿ ನಿರ್ಮಿಸಿದ್ದರೆ ನಿಯಮಿಸಿದ ರೀತಿಯಲ್ಲಿ ಲೆಕ್ಕ ಹಾಕಲಾದ ಅವುಗಳ ಮೌಲ್ಯವನ್ನು ಸಹ ಸಂದಾಯ ಮಾಡತಕ್ಕದ್ದು.

(5) ಉಪಪ್ರಕರಣ (1) ಮತ್ತು (4)ರಲ್ಲಿ ಏನೇ ಒಳಗೊಂಡಿದ್ದರೂ, ಸದರಿ ಉಪ ಪ್ರಕರಣಗಳಿಗನುಸಾರವಾಗಿ ಸಂದಾಯ ಮಾಡಬೇಕಾದ ಒಟ್ಟು ಮೊಬಲಗು, ಎರಡು ಲಕ್ಷ ರೂಪಾಯಿಗಳನ್ನು ಮೀರತಕ್ಕದ್ದಲ್ಲ.

[2][(6) xxx][2]][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**73. [1][ಮೊಬಲಗಿಗೆ][1] ಕ್ಲೇಮುಗಳು ಮತ್ತು [1][ಮೊಬಲಗಿನ][1] ಸಂದಾಯ.–** [2][(1) 67ನೇ ಪ್ರಕರಣದ ಮೇರೆಗೆ ಮಾಡಿದ ಆದೇಶವನ್ನು ಜಾರಿಗೊಳಿಸಿದ ನಂತರ ಆದಷ್ಟು ಬೇಗನೆ, ತಹಶೀಲ್ದಾರರು ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವ ಭೂಮಿಗಳ ವಿವರಗಳನ್ನು ಒಳಗೊಂಡ ಅಧಿಸೂಚನೆಯನ್ನು ಪ್ರಕಟಿಸತಕ್ಕದ್ದು.

(1ಎ) ಉಪಪ್ರಕರಣ (1)ರ ಮೇರೆಗಿನ ಅಧಿಸೂಚನೆಯನ್ನು ಪ್ರಕಟಿಸಿದ ನಂತರ, ತಹಸೀಲ್ದಾರರು, ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವಂತಹ ಭೂಮಿಯ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಮೊಬಲಗನ್ನು ನಿರ್ಧರಿಸತಕ್ಕದ್ದು.][2]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) [1][48ಬಿ][1] ಯ ಮತ್ತು 50ನೇ ಪ್ರಕರಣದ ಉಪಬಂಧಗಳು, ಯಥೋಚಿತ ವ್ಯತ್ಯಾಸಗಳೊಂದಿಗೆ, [1][ಮೊಬಲಗನ್ನು][1] ಪಡೆಯಲು ಹಕ್ಕಿರುವ ವ್ಯಕ್ತಿಗಳನ್ನು ಮತ್ತು ಆ [1][ಮೊಬಲಗಿನ][1] ಹಂಚಿಕೆಯನ್ನು ನಿರ್ಧರಿಸಲು ಅನ್ವಯವಾಗತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(3) ಉಪ ಪ್ರಕರಣ (1)ರ ಮೇರೆಗೆ ಸಂದಾಯ ಮಾಡಬೇಕಾದ ಮೊಬಲಗನ್ನು ವರ್ಷಕ್ಕೆ ಶೇಕಡ ಐದೂವರೆಯಷ್ಟು ದರದಲ್ಲಿ ಬಡ್ಡಿ ದೊರೆಯುವಂತೆ ಮತ್ತು ಇಪ್ಪತ್ತು ವರ್ಷಗಳನ್ನು ಮೀರದ ನಿರ್ದಿಷ್ಟ ಅವಧಿಯೊಳಗೆ ವಾಯಿದೆ ತುಂಬುವ ಖಾತರಿ ಮುಖ ಬೆಲೆಯ [2][ಹಸ್ತಾಂತರ ಮಾಡಲಾಗದ ಮತ್ತು ವರ್ಗವಣೀಯವಲ್ಲದ][2] ಬಾಂಡುಗಳ ರೂಪದಲ್ಲಿ ಸಂದಾಯ ಮಾಡತಕ್ಕದ್ದು:

ಪರಂತು, ಈ ಉಪಪ್ರಕರಣದ ಮೇರೆಗೆ ನೀಡಿದ ಬಾಂಡುಗಳ ಅನ್ವಯ ಸಂದಾಯ ಮಾಡಬೇಕಾದ ಮೊಬಲಗನ್ನು ನಿಯಮಿಸಬಹುದಾದಂತೆ, ಇಪ್ಪತ್ತನ್ನು ಮೀರದಷ್ಟು ಸಂಖ್ಯೆಯ ಕಂತುಗಳಲ್ಲಿ ಸಂದಾಯ ಮಾಡಬಹುದು.][1]

1. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(4) ಉಪಪ್ರಕರಣ (3)ರಲ್ಲಿ ಏನೇ ಒಳಗೊಂಡಿದ್ದರೂ 1984ರ ಮಾರ್ಚ್ 1ರಂದು ಅಥವಾ ಆ ನಂತರ, ಸದರಿ ಉಪಪ್ರಕರಣದ ಅನುಸಾರವಾಗಿ ಸಂದಾಯ ಮಾಡಬೇಕಾಗಿರುವ ಉಳಿದ ಹಣವನ್ನು ಮತ್ತು ಅದರ ಮೇಲಿನ ಬಡ್ಡಿಯನ್ನು, ಅದರಲ್ಲಿ ನಿರ್ದಿಷ್ಟಪಡಿಸಿದ ಬಾಂಡುಗಳಿಗೆ ಬದಲಾಗಿ, ಈ ಮುಂದಿನ ರೀತಿಯಲ್ಲಿ ಸಂದಾಯ ಮಾಡತಕ್ಕದ್ದು, ಎಂದರೆ:-

(ಎ) 1984ರ ಮಾರ್ಚ್ 1ರವರೆಗೆ ವರ್ಷಕ್ಕೆ ಶೇಕಡ ಐದೂವರೆ ದರದಲ್ಲಿ ಪ್ರಾಪ್ತವಾದ ಬಡ್ಡಿಯನ್ನು ಸಂದಾಯ ಮಾಡಿರದಿದ್ದರೆ ಅದನ್ನು ಒಂದಾದ ಮೇಲೊಂದರಂತೆ ಅನುಕ್ರಮವಾಗಿ ಬರುವ ಐದು ವರ್ಷಗಳಲ್ಲಿ, ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳ ರೂಪದಲ್ಲಿ 1984ರ ಮಾರ್ಚ್ 1ರಿಂದ ಆರಂಭಿಸಿ ಸಾಧ್ಯವಾಗಬಹುದಾದಷ್ಟು ಮಟ್ಟಿಗೆ ಸಮಾನ ಕಂತುಗಳಲ್ಲಿ ಸಂದಾಯ ಮಾಡತಕ್ಕದ್ದು.

(ಬಿ) 1984ರ ಮಾರ್ಚ್ 1ಕ್ಕೆ ಮೊದಲೇ ಸಂದಾಯ ಮಾಡಬೇಕಾಗಿರುವ, ಆದರೆ ಸಂದಾಯ ಮಾಡಿರುವ, (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಉಳಿದ ಇಡೀ ಹಣವನ್ನು ಅಥವಾ ಸಂದರ್ಭಾನುಸಾರ ಉಳಿದ ಅದರ ಭಾಗವನ್ನು ಒಂದಾದ ಮೇಲೋಂದರಂತೆ ಅನುಕ್ರಮವಾಗಿ ಬರುವ ಐದು ವರ್ಷಗಳಲ್ಲಿ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳ ರೂಪದಲ್ಲಿ 1984ರ ಮಾರ್ಚ್ 1ರಿಂದ ಆರಂಭಿಸಿ ಸಾಧ್ಯವಾದಷ್ಟು ಮಟ್ಟಿಗೆ ಸಮಾನ ಕಂತುಗಳಲ್ಲಿ ಸಂದಾಯ ಮಾಡತಕ್ಕದ್ದು.

(ಸಿ) 1984ರ ಮಾರ್ಚ್ 1ರಂದು ಅಥವಾ ಆ ನಂತರ ಸಂದಾಯ ಮಾಡಬೇಕಾಗಿರುವ ಸದರಿ ಉಳಿದ ಇಡೀ ಹಣವನ್ನು ಸಂಪೂರ್ಣವಾಗಿ ಅಥವಾ ಸಂದರ್ಭಾನುಸಾರ ಅದರ ಭಾಗವನ್ನು ಒಂದಾದ ಮೇಲೊಂದರಂತೆ ಅನುಕ್ರಮವಾಗಿ ಬರುವ ಹತ್ತು ವರ್ಷಗಳಲ್ಲಿ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಸದರಿ ದಿನಾಂಕದಿಂದ ಆರಂಭಿಸಿ ಸಾಧ್ಯವಾಗಬಹುದಾದಷ್ಟು ಮಟ್ಟಿಗೆ ಸಮಾನ ಕಂತುಗಳಲ್ಲಿ ಸಂದಾಯ ಮಾಡತಕ್ಕದ್ದು:

ಪರಂತು (ಬಿ) ಮತ್ತು (ಸಿ) ಬಾಬುಗಳಲ್ಲಿ ಉಲ್ಲೇಖಿಸಿದ ಕಂತುಗಳಲ್ಲಿ ಪ್ರತಿಯೊಂದು ಕಂತಿನೊಂದಿಗೆ, 1984ರ ಮಾರ್ಚ್ 1 ರಿಂದ ಅದನ್ನು ಸಂದಾಯ ಮಾಡುವ ದಿನಾಂಕದವರೆಗೆ ಪ್ರತಿ ವರ್ಷಕ್ಕೆ ಶೇಕಡಾ ಐದೂವರೆಯಷ್ಟು ದರದಲ್ಲಿ ಅದರ ಮೇಲಿನ ಬಡ್ಡಿಯನ್ನು ಸಹ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳ ರೂಪದಲ್ಲಿ ಕೂಡ ಸಂದಾಯ ಮಾಡತಕ್ಕದ್ದು.][1]

1. 1985ರ ಅಧಿನಿಯಮ ಸಂಖ್ಯೆ 35ರ ಮೂಲಕ ದಿನಾಂಕ 27.09.1985 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**74. ಹಿಡುವಳಿಯ ಪರಭಾರೆಗೆ ನಿಷೇಧ.–** [1][ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದಂದು][1] ಮತ್ತು ಆ ದಿನಾಂಕದಿಂದ 63ನೇ ಅಥವಾ 64ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿರುವ ಗರಿಷ್ಠಮಿತಿ ವಿಸ್ತೀರ್ಣಕ್ಕೆ ಮೀರಿದ ಭೂಮಿಯ ಒಡೆಯನಾಗಿರುವ ಯಾರೇ ವ್ಯಕ್ತಿಯು, 66ನೇ ಪ್ರಕರಣದ ಮೇರೆಗೆ ಅವನು ಘೋಷಣೆಯನ್ನು ಸಲ್ಲಿಸುವವರೆಗೆ ಮತ್ತು ಆ ಹಿಡುವಳಿಯ ಸಂಬಂಧದಲ್ಲಿ ಬಿಟ್ಟು ಕೊಡಬೇಕಾದ ಭೂಮಿಯೇನಾದರೂ ಇದ್ದರೆ ಅದರ ವಿಸ್ತೀರ್ಣವನ್ನು ನಿರ್ಧರಿಸುವವರೆಗೆ [2][XXX][2] ಮತ್ತು 67ನೇ ಪ್ರಕರಣದ ಮೇರೆಗೆ ಆದೇಶವನ್ನು ಮಾಡುವವರೆಗೆ [2][xxx][2] ತನ್ನ ಹಿಡುವಳಿಯನ್ನು ಅಥವಾ ಅದರ ಯಾವುದೇ ಭಾಗವನ್ನು ಮಾರಾಟದ, ದಾನದ, ವಿನಿಮಯದ ಮೂಲಕ ಅಥವಾ ಅನ್ಯಥಾ ಪರಭಾರೆ ಮಾಡತಕ್ಕದ್ದಲ್ಲ, ಮತ್ತು ಈ ಪ್ರಕರಣವನ್ನು ಉಲ್ಲಂಘಿಸಿ ಮಾಡಿದ ಯಾವುದೇ ಪರಭಾರೆಯು ಅನೂರ್ಜಿತವಾಗತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**75. ಕೆಲವು ಸಂದರ್ಭಗಳಲ್ಲಿ ಹೆಚ್ಚುವರಿ ಭೂಮಿಯನ್ನು ಬಿಟ್ಟು ಕೊಡದಿರುವುದು.–** ಯಾರೇ ವ್ಯಕ್ತಿಯು, ಸ್ವತಃ ತಾನು ಅಥವಾ ಅವನಿಗೆ ಕುಟುಂಬವಿದ್ದರೆ ಅಥವಾ ಅವನು ಅವಿಭಕ್ತ ಕುಟುಂಬದವನಾಗಿದ್ದರೆ, ಆ ಕುಟುಂಬದ ಅಥವಾ ಅವಿಭಕ್ತ ಕುಟುಂಬದ ಇತರ ಯಾರಾದರೊಬ್ಬರೊಂದಿಗೆ 63 ಅಥವಾ 64ನೇ ಪ್ರಕರಣದಲ್ಲಿ ಉಲ್ಲೇಖಿಸಿದ ಗರಿಷ್ಠ ಮಿತಿ ವಿಸ್ತೀರ್ಣಕ್ಕೆ ಮೀರದ ಭೂಮಿಯನ್ನು ಅವನು ಧಾರಣ ಮಾಡಿದ್ದರೆ, ಆದರೆ ತದನಂತರ ಅಂಥ ವ್ಯಕ್ತಿಯು ಅಥವಾ ಕುಟುಂಬವು ಆ ಭೂಮಿಯಲ್ಲಿ ಮಾಡಿದ ಯಾವುದೇ ಅಭಿವೃದ್ಧಿಗಳ ಪರಿಣಾಮವಾಗಿ ಆ ಭೂಮಿಯ ವರ್ಗೀಕರಣದಲ್ಲಿ ಉಂಟಾದ ಯಾವುದೇ ಬದಲಾವಣೆಯಿಂದಾಗಿ ಅಥವಾ ಕುಟುಂಬದವರ ಸಂಖ್ಯೆಯು ಕಡಿಮೆಯಾದುದರಿಂದಾಗಿ ಭೂಮಿಯು ಗರಿಷ್ಠ ಮಿತಿಯ ವಿಸ್ತೀರ್ಣವನ್ನು ಮೀರಿದರೆ, ಈ ಅಧ್ಯಾಯದಲ್ಲಿ ಏನೇ ಒಳಗೊಂಡಿದ್ದರೂ ಅದು ಹೆಚ್ಚುವರಿ ಭೂಮಿಯೆಂಬ ಕಾರಣದ ಮೇಲೆ ಆ ಭೂಮಿಯ ಯಾವುದೇ ಭಾಗವನ್ನು ಬಿಟ್ಟು ಕೊಡಲು ಅಂಥ ವ್ಯಕ್ತಿಯನ್ನು ಅಗತ್ಯಪಡಿಸತಕ್ಕದ್ದಲ್ಲ.

**76. ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.–** ಈ ಅಧ್ಯಾಯದ ಉಪಬಂಧಗಳ ಮೇರೆಗೆ ಯಾವುದಾದರೂ ಭೂಮಿಯು ರಾಜ್ಯ ಸರ್ಕಾರದಲ್ಲಿ ನಿಹಿತವಾಗಿದ್ದರೆ [1][ತಹಶೀಲ್ದಾರರು,][1] ಎದುರಾಗಬಹುದಾದ ಯಾವುದೇ ಅಡ್ಡಿ ಆತಂಕಗಳನ್ನು ನಿವಾರಿಸಿದ ನಂತರ, ಆ ಭೂಮಿಯನ್ನು ಕೂಡಲೇ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು.

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**77. ಹೆಚ್ಚುವರಿ ಭೂಮಿಯ ವಿಲೇವಾರಿ.–** [2][(1) ಈ ಅಧಿನಿಯಮದ ಮೇರೆಗೆ ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವ ಹೆಚ್ಚುವರಿ ಭೂಮಿಯನ್ನು, 45ನೇ ಪ್ರಕರಣದ (3)ನೇ ಉಪಪ್ರಕರಣದ 58ನೇ ಪ್ರಕರಣದ, 59ನೇ ಪ್ರಕರಣದ, 60ನೇ ಪ್ರಕರಣದ ಮೇರೆಗೆ ವಿಲೇವಾರಿ ಮಾಡಬೇಕೆಂದು ನಿರ್ದೇಶಿಸಿರುವ ಭೂಮಿಯನ್ನು, 79ಎ ಪ್ರಕರಣದ, 79ಬಿ ಪ್ರಕರಣದ ಅಥವಾ [3][ಈ ಅಧಿನಿಯಮದ][3] ಇತರ ಯಾವುದೇ ಉಪಬಂಧಗಳ ಮೇರೆಗೆ ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವ ಭೂಮಿಯನ್ನು, ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ವ್ಯಕ್ತಿಗಳಿಗೆ ಮಂಜೂರು ಮಾಡುವ ಸಲುವಾಗಿ ಅದರ ಶೇಕಡಾ [4][ಎಪ್ಪತ್ತೈದರಷ್ಟು][4] ಭಾಗವನ್ನು ಮೀಸಲಿಡುವುದಕ್ಕೆ ಒಳಪಟ್ಟು ಮತ್ತು ಈ ಸಂಬಂಧದಲ್ಲಿ ನಿರ್ದಿಷ್ಟಪಡಿಸಬಹುದಾದ ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟು, ನಿಯಮಿಸಬಹುದಾದ ವಿಸ್ತೀರ್ಣದ ಭೂಮಿಯನ್ನು ಈ ಮುಂದೆ ಹೇಳಿದ ಮತ್ತು ನಿಯಮಿಸಬಹುದಾದ ರೀತಿಯಲ್ಲಿ ಈ ಮುಂದಿನ ವ್ಯಕ್ತಿಗಳಿಗೆ,–

(i) ಅಧಿಭೋಗದಾರರಾಗಿ ನೋಂದಾಯಿತರಾಗಿರದ ಭೂ ಸ್ವಾಧೀನವನ್ನು ಕಳೆದುಕೊಂಡ ಗೇಣಿದಾರರು;

(ii) ಯಾವುದೇ ಭೂಮಿಯನ್ನು ಹೊಂದಿರದಂಥ, ಗೇಣಿದಾರಿಕೆಯನ್ನು ಕಳೆದುಕೊಂಡ ಗೇಣಿದಾರರು;

(iii) ಭೂ ರಹಿತ ಕೃಷಿ ಕಾರ್ಮಿಕರು;

[5][(iv) ಅದೇ ಪಂಚಾಯತಿ ವ್ಯಾಪ್ತಿಯಲ್ಲಿನ ಗ್ರಾಮಗಳಲ್ಲಿ ವಾಸಿಸುತ್ತಿರುವ, ಇಪ್ಪತ್ತು ಸಾವಿರ ರೂಪಾಯಿಗಳನ್ನು ಮೀರಿರದ ಒಟ್ಟು ವಾರ್ಷಿಕ ಆದಾಯವನ್ನು ಹೊಂದಿರುವ, ಭೂ ರಹಿತ ವ್ಯಕ್ತಿಗಳು ಅಥವಾ ಇತರ ವ್ಯಕ್ತಿಗಳು ಮತ್ತು ಒಟ್ಟು ಇಪ್ಪತ್ತೆರಡು ಸಾವಿರ ರೂಪಾಯಿಗಳನ್ನು ಮೀರದ ವಾರ್ಷಿಕ ಆದಾಯ ಹೊಂದಿರುವ ಮಾಜಿ ಸೈನಿಕ ಸಿಬ್ಬಂದಿ][5];

(v) ಜೀತ ಮುಕ್ತ ಕಾರ್ಮಿಕರು;

[6][(vi) xxx][6]

[3][ಡೆಪ್ಯುಟಿ ಕಮೀಷನರರು ಅಥವಾ ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ಅಧಿಕಾರ ನೀಡಿರುವ ಯಾರೇ ಇತರ ಅಧಿಕಾರಿಯು ಮಂಜೂರು ಮಾಡಬಹುದು.][3]

**ವಿವರಣೆ 1.–** **"ಭೂ ಸ್ವಾಧೀನವನ್ನು ಕಳೆದುಕೊಂಡ ಗೇಣಿದಾರ"** ಎಂದರೆ ಭೂಮಿಯ ಒಡೆಯನ ಕುಟುಂಬದವನಾಗಿರದ, ಸ್ವತಃ ಸಾಗುವಳಿ ಮಾಡುತ್ತಿದ್ದ ಮತ್ತು 1957ರ ಸೆಪ್ಟಂಬರ್ 10ರ ಮತ್ತು 1971ರ ಜನವರಿ 24ರ ನಡುವೆ ಭೂ ಸ್ವಾಧೀನವನ್ನು ಕಳೆದುಕೊಂಡಿದಂಥ ಹಾಗೂ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅಧಿಭೋಗದಾರನಾಗಿ ನೋಂದಾಯಿತನಾಗಿರದ ವ್ಯಕ್ತಿ.

**ವಿವರಣೆ 2.–** **"ಗೇಣಿದಾರಿಕೆಯನ್ನು ಕಳೆದುಕೊಂಡ ಗೇಣಿದಾರ"** ಎಂದರೆ, ತಾನು ಯಾವ ಕೃಷಿ ಭೂಮಿಯ ಗೇಣಿದಾರನಾಗಿದ್ದನೋ ಆ ಕೃಷಿ ಭೂಮಿಯನ್ನು,–

(i) ಭೂ ಆರ್ಜನೆ ಅಧಿನಿಯಮದ ಮೇರೆಗೆ ಅಂಥ ಭೂಮಿಯನ್ನು ಆರ್ಜಿಸಿದ್ದರಿಂದಾಗಿ; ಅಥವಾ

(ii) ಸ್ವಂತ ಸಾಗುವಳಿಗಾಗಿ ಅಂಥ ಭೂಮಿಯನ್ನು ಸೈನಿಕನು ಅಥವಾ ನಾವಿಕನು ಪುನಃ ತನ್ನ ವಶಕ್ಕೆ ತೆಗೆದುಕೊಂಡಿದ್ದರಿಂದಾಗಿ

– ಕಳೆದುಕೊಂಡ ವ್ಯಕ್ತಿ.][2]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

4. 1992ರ ಅಧಿನಿಯಮ ಸಂಖ್ಯೆ 9ರ ಮೂಲಕ ದಿನಾಂಕ 21.04.1992 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

5. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಮತ್ತು 2003ರ ಅಧಿನಿಯಮ ಸಂಖ್ಯೆ 34 ರ ಮೂಲಕ 01.11.2003 ರಿಂದ ಜಾರಿಗೆ ಬರುವಂತೆ ಪುನಃ ಪ್ರತ್ಯಾಯೋಜಿಸಲಾಗಿದೆ.

6. 2003ರ ಅಧಿನಿಯಮ ಸಂಖ್ಯೆ 34ರ ಮೂಲಕ ದಿನಾಂಕ 01.11.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(2) ಪರಿಶಿಷ್ಟ ಜಾತಿಗಳ ಹಾಗೂ ಪರಿಶಿಷ್ಟ ಪಂಗಡಗಳ ವ್ಯಕ್ತಿಗಳಿಗೆ ಮೀಸಲಿಟ್ಟ ಭೂಮಿಯನ್ನು ನಿಯಮಿಸಬಹುದಾದಂಥ ನಿಯಮಗಳಿಗನುಸಾರವಾಗಿ ಮಂಜೂರು ಮಾಡತಕ್ಕದ್ದು.][1]

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(2ಎ) ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಈ ಪ್ರಕರಣದ ಮೇರೆಗೆ ಮಂಜೂರು ಮಾಡಿದ ಯಾವುದೇ ಭೂಮಿಯನ್ನು ಭೂ ಮಂಜೂರಾತಿ ಪಡೆದವನು ಅಥವಾ ಆತನ ಕಾನೂನುಬದ್ಧ ಪ್ರತಿನಿಧಿಗಳು ಹಣಕಾಸು ಸಂಸ್ಥೆಗಳಿಗೆ ಅಡಮಾನ ಮಾಡುವ ಮೂಲಕ ಹಾಗೂ 61ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಗಳಿಗಾಗಿ ಹೊರತು ಮಂಜೂರಾದ ದಿನಾಂಕದಿಂದ ಹದಿನೈದು ವರ್ಷಗಳ ಅವಧಿಯವರೆಗೆ ವರ್ಗಾವಣೆ ಮಾಡತಕ್ಕದ್ದಲ್ಲ.

(2ಬಿ) ಡೆಪ್ಯುಟಿ ಕಮೀಷನರರು ಅಥವಾ ಅಧಿಕಾರ ಪಡೆದ ಅಧಿಕಾರಿಯು, ಈ ಪ್ರಕರಣದ ಮೇರೆಗೆ ಭೂಮಿಯನ್ನು ಮಂಜೂರು ಮಾಡಿದ ಆದೇಶದ ಪ್ರತಿಯನ್ನು ಸಂಬಂಧಪಟ್ಟ ಸಬ್-ರಿಜಿಸ್ಟ್ರಾರ್‌ರಿಗೆ ಕಳುಹಿಸತಕ್ಕದ್ದು. ಅವರು ನೋಂದಣಿ ಅಧಿನಿಯಮ, 1908ರಲ್ಲಿ (1908ರ ಕೇಂದ್ರ ಅಧಿನಿಯಮ 16) ಅಥವಾ ಯಾವುದೇ ಇತರ ಕಾನೂನಿನಲ್ಲಿ ಏನೇ ಇದ್ದರೂ ಅದನ್ನು ನೋಂದಣಿ ಮಾಡತಕ್ಕದ್ದು][1]

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ (2ಎ) ಮತ್ತು (2ಬಿ) ಉಪಪ್ರಕರಣಗಳನ್ನು ಸೇರಿಸಲಾಗಿದೆ.

(3) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, ರಾಜ್ಯ ಸರ್ಕಾರವು ತನ್ನಲ್ಲಿ ನಿಹಿತವಾಗಿರುವ ಯಾವುದೇ ಭೂಮಿಯು ಯಾವುದೇ ಸಾರ್ವಜನಿಕ ಉದ್ದೇಶಕ್ಕೆ ಬೇಕಾಗಿದೆಯೆಂದು ಪರಿಗಣಿಸಿದರೆ, ಅಂಥ ಭೂಮಿಯನ್ನು ಅಂಥ ಉದ್ದೇಶಕ್ಕಾಗಿ ಮೀಸಲಿಡಬಹುದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**77ಎ. ಕೆಲವು ಪ್ರಕರಣಗಳಲ್ಲಿ ಭೂಮಿಯ ಮಂಜೂರಾತಿ.**– (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಡೆಪ್ಯುಟಿ ಕಮೀಷನರಿಗೆ [2][ಅಥವಾ ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ಅಧಿಕಾರ ನೀಡಿದ ಯಾರೇ ಇತರ ಅಧಿಕಾರಿಗೆ][2] ತಾನು ಯುಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ತರುವಾಯ ವ್ಯಕ್ತಿಯು,–

(i) 1974ರ ಮಾರ್ಚ್ ಮೊದಲ ದಿನದ ನಿಕಟ ಪೂರ್ವದಲ್ಲಿ 44ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರದಲ್ಲಿ ನಿಹಿತವಾಗಿದ್ದಂಥ ಒಂದು ಯುನಿಟನ್ನು ಮೀರದಂಥ ಯಾವುದೇ ಭೂಮಿಯ ವಾಸ್ತವಿಕ ಸ್ವಾಧೀನವನ್ನು ಹೊಂದಿದ್ದನೆಂದು ಅಥವಾ ಸಾಗುವಳಿಯನ್ನು ಮಾಡುತ್ತಿದ್ದನೆಂದು; ಮತ್ತು

(ii) 45ನೇ ಅಥವಾ 49ನೇ ಪ್ರಕರಣದ ಮೇರೆಗೆ ಅಂಥ ಭೂಮಿಯ ಅಧಿಭೋಗದಾರನಾಗಿ ನೋಂದಾಯಿತನಾಗಲು ಹಕ್ಕುಳ್ಳವನಾಗಿದ್ದರೂ, 48ಎ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ಅವಧಿಯೊಳಗೆ, ಅಂಥ ಭೂಮಿಯ ಸಂಬಂಧದಲ್ಲಿ ಅಧಿಭೋಗದ ಹಕ್ಕಿನ ನೋಂದಣಿಗಾಗಿ ಅರ್ಜಿ ಸಲ್ಲಿಸಲು ವಿಫಲನಾಗಿದ್ದಾನೆಂದು; ಮತ್ತು

(iii) ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1997ರ ಪ್ರಾರಂಭದ ದಿನಾಂಕದಂದು ಅಂಥ ಭೂಮಿಯ ವಾಸ್ತವಿಕ ಸ್ವಾಧೀನ ಹೊಂದಿರುವುದನ್ನು ಹಾಗೂ ಸಾಗುವಳಿ ಮಾಡುತ್ತಿರುವುದನ್ನು ಮುಂದುವರಿಸಿದ್ದನೆಂದು

– ಮನದಟ್ಟಾದರೆ, ಅವರು ಅಂಥ ವ್ಯಕ್ತಿಗೆ ಅಂಥ ನಿಯಮಿಸಬಹುದಾದಂಥ ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟು ಅಂಥ ರೀತಿಯಲ್ಲಿ ಭೂಮಿಯನ್ನು ಮಂಜೂರು ಮಾಡಬಹುದು [3][xxx][3].

(2) 77ನೇ ಪ್ರಕರಣದ (2ಎ) ಮತ್ತು (2ಬಿ) ಉಪಪ್ರಕರಣಗಳ ಉಪಬಂಧಗಳು ಹಾಗೂ 78ನೇ ಪ್ರಕರಣದ ಉಪಬಂಧಗಳು (1)ನೇ ಉಪಪ್ರಕರಣದ ಮೇರೆಗೆ ಭೂಮಿಯ ಮಂಜೂರಾತಿಗೆ ಸಂಬಂಧಪಟ್ಟಂತೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು:][1]

1. 1998ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.11.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1998ರ ಅಧಿನಿಯಮ ಸಂಖ್ಯೆ 34ರ ಮೂಲಕ ದಿನಾಂಕ 15.02.1999 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಲಾಗಿದೆ.

3. 2001ರ ಅಧಿನಿಯಮ ಸಂಖ್ಯೆ 22ರ ಮೂಲಕ ದಿನಾಂಕ 15.02.1999 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆಯೆಂದು ಭಾವಿಸಲಾಗಿದೆ,

[1][ಪರಂತು, ಅಂಥ ವ್ಯಕ್ತಿಯು ಈಗಾಗಲೇ ಧಾರಣ ಮಾಡಿರುವ ಭೂಮಿಯು ಸೇರಿದಂತೆ ಹಾಗೆ ಮಂಜೂರು ಮಾಡಿದ ಭೂಮಿಯು 2 ಹೆಕ್ಟೇರುಗಳ ಡಿ ದರ್ಜೆಯ ಭೂಮಿಯನ್ನು ಅಥವಾ ಅದಕ್ಕೆ ಸಮನಾದ ಭೂಮಿಯನ್ನು ಮೀರತಕ್ಕದ್ದಲ್ಲ.][1]

1. 1998ರ ಅಧಿನಿಯಮ ಸಂಖ್ಯೆ 34ರ ಮೂಲಕ ದಿನಾಂಕ 15.02.1999 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**78. ಹೆಚ್ಚುವರಿ ಭೂಮಿ ಖರೀದಿ ಬೆಲೆ.**– (1) 77ನೇ ಪ್ರಕರಣದ [1][xxx][1] ಮೇರೆಗೆ ಭೂಮಿಯನ್ನು ಮಂಜೂರು ಮಾಡಿದಾಗ, ಹಾಗೆ ಮಂಜೂರಾದ ಭೂಮಿಯ ಖರೀದಿ ಬೆಲೆಯನ್ನು, ಭೂ ಮಂಜೂರಾತಿ ಪಡೆದವನು ಒಂದೇ ಮೊತ್ತದಲ್ಲಾಗಲಿ ಅಥವಾ [2][ನಿಯಮಿಸಬಹುದಾದಂಥ ಕಾಲದೊಳಗಾಗಿ ಮೊದಲನೇ ಕಂತು ಸಂದಾಯವಾಗುವಂತೆ ತಹಸೀಲ್ದಾರರು ನಿರ್ಧರಿಸಬಹುದಾದಂತೆ][2] ಇಪ್ಪತ್ತಕ್ಕೆ ಮೀರದ ವಾರ್ಷಿಕ ಕಂತುಗಳಲ್ಲಿ, [3][ನ್ಯಾಯಾಧಿಕರಣದಲ್ಲಿ][3] ಠೇವಣಿ ಮಾಡಲು ಅವಕಾಶವಿರತಕ್ಕದ್ದು.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(2) ಖರೀದಿ ಬೆಲೆಯು,–

(i) ಅನುಸೂಚಿ 1ರ 'ಎ' ಭಾಗದಲ್ಲಿ ಉಲ್ಲೇಖಿಸಿರುವ 'ಎ' ದರ್ಜೆಯ 'ಬಿ' ದರ್ಜೆಯ ಮತ್ತು 'ಸಿ' ದರ್ಜೆಯ ಭೂಮಿಗಳ ಸಂದರ್ಭದಲ್ಲಿ 72ನೇ ಪ್ರಕರಣದ (4)ನೇ ಉಪ ಪ್ರಕರಣದ ಮೇರೆಗೆ ಸಂದಾಯವಾಗಬೇಕಾದ ಮೊಬಲಗು ಯಾವುದಾದರೂ ಇದ್ದರೆ ಅದರ ಜೊತೆಗೆ ಸದರಿ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿರುವ ನಿವ್ವಳ ವಾರ್ಷಿಕ ವರಮಾನದ ಹದಿನೈದರಷ್ಟು,

(ii) ಸದರಿ ಅನುಸೂಚಿಯ 'ಎ' ಭಾಗದಲ್ಲಿ ಉಲ್ಲೇಖಿತವಾದ 'ಡಿ' ವರ್ಗದ ಭೂಮಿಗಳ ಸಂದರ್ಭದಲ್ಲಿ, 72ನೇ ಪ್ರಕರಣದ (4)ನೇ ಉಪ ಪ್ರಕರಣದ ಮೇರೆಗೆ ಸಂದಾಯವಾಗಬೇಕಾದ ಮೊಬಲಗು

ಯಾವುದಾದರೂ ಇದ್ದರೆ ಅದರ ಜೊತೆಗೆ ಸದರಿ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿರುವ ನಿವ್ವಳ ವಾರ್ಷಿಕ ವರಮಾನದ ಇಪ್ಪತ್ತರಷ್ಟು – ಇರತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಖರೀದಿ ಬೆಲೆಯನ್ನು ಕಂತುಗಳಲ್ಲಿ ಸಂದಾಯ ಮಾಡಬೇಕಾಗಿರುವಲ್ಲಿ ಖರೀದಿ ಬೆಲೆಯನ್ನು ಭೂ ಮಂಜೂರಾತಿ ಪಡೆದವನು [1][ತನ್ನ ಸ್ವಂತ ನಿಧಿಯಿಂದ ಸಂದಾಯ ಮಾಡುವುದಾದರೆ, ಪ್ರತಿಯೊಂದು ಕಂತನ್ನು ಸಂದಾಯ ಮಾಡಿದ ನಂತರ ಬಾಕಿ ಉಳಿದ ಮೊಬಲಗಿಗೆ ವರ್ಷ ಒಂದಕ್ಕೆ ಶೇಕಡಾ [2][ಐದೂವರೆಯಷ್ಟು][2] ಬಡ್ಡಿ ಇರತಕ್ಕದ್ದು. ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು ಅಥವಾ ಕ್ರೆಡಿಟ್ ಏಜೆನ್ಸಿಯು ಖರೀದಿ ಬೆಲೆಯ ಸಂದಾಯಕ್ಕಾಗಿ ಹಣವನ್ನು ಸಾಲ ನೀಡಿದ್ದರೆ ಯಾವುದೇ ಬಡ್ಡಿ ಇರತಕ್ಕದ್ದಲ್ಲ.][1]

1. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(4) ಭೂ ಮಂಜೂರಾತಿ ಪಡೆದವರಿಂದ ಬರಬೇಕಾಗಿರುವ ಎಲ್ಲ ಮೊಬಲಗುಗಳು ಹಾಗೆ ಮಂಜೂರಾದ ಭೂಮಿಯ ಮೇಲೆ ಮೊದಲ ಋಣಭಾರ ಆಗಿರತಕ್ಕದ್ದು ಮತ್ತು ಆ ಮೊಬಲಗುಗಳು ಆ ಭೂಮಿಯ ಭೂ ಕಂದಾಯದ ಬಾಕಿಯಂತೆಯೇ ವಸೂಲು ಮಾಡುವಂತಹವುಗಳು ಆಗಿರತಕ್ಕದ್ದು.

[1][(5) ಹೆಚ್ಚುವರಿ ಭೂಮಿಯ ಮಂಜೂರಾತಿಯನ್ನು ಪಡೆದಂಥ ಪ್ರತಿಯೊಬ್ಬ ವ್ಯಕ್ತಿಯು, ಖರೀದಿ ಬೆಲೆಯನ್ನು ಸಂದಾಯ ಮಾಡುವುದಕ್ಕಾಗಿ ಕರ್ನಾಟಕ ಕೃಷಿ ಕಾರ್ಯಾಚರಣೆ ಮತ್ತು ಸಂಕೀರ್ಣ ಉಪಬಂಧಗಳ ಅಧಿನಿಯಮ, 1974ರಲ್ಲಿ (1975ರ ಕರ್ನಾಟಕ ಅಧಿನಿಯಮ 2) ಪರಿಭಾಷಿಸಿರುವ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕಿನಿಂದ ಅಥವಾ ಕ್ರೆಡಿಟ್ ಏಜೆನ್ಸಿಯಿಂದ ನಿಯಮಿಸಬಹುದಾದಂಥ ನಿಯಮಗಳಿಗನುಸಾರವಾಗಿ ನೆರವನ್ನು ಪಡೆಯುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದು.

(6) ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರಲ್ಲಿ (1959ರ ಕರ್ನಾಟಕ ಅಧಿನಿಯಮ 11) ಏನೇ ಒಳಗೊಂಡಿದ್ದರೂ, (5)ನೇ ಉಪಪ್ರಕರಣದ ಮೇರೆಗೆ ಭೂ ಮಂಜೂರಾತಿ ಪಡೆದವನಿಗೆ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು ನೀಡಿದ ಸಾಲದ ಮೊಬಲಗನ್ನು ಭೂ ಕಂದಾಯದ ಬಾಕಿಯನ್ನು ವಸೂಲು ಮಾಡುವ ರೀತಿಯಲ್ಲಿಯೇ ರಾಜ್ಯ ಸರ್ಕಾರವು ವಸೂಲು ಮಾಡತಕ್ಕದ್ದು ಮತ್ತು ಸದರಿ ಬ್ಯಾಂಕಿಗೆ ಜಮೆ ಮಾಡತಕ್ಕದ್ದು.

(7) ಕ್ರೆಡಿಟ್ ಏಜೆನ್ಸಿಯು ಭೂ ಮಂಜೂರಾತಿ ಪಡೆದವನು ನೀಡಿದ ಸಾಲದ ಮೊಬಲಗನ್ನು ಕರ್ನಾಟಕ ಕೃಷಿ ಕಾರ್ಯಾಚರಣೆಗಳ ಹಾಗೂ ಸಂಕೀರ್ಣ ಉಪಬಂಧಗಳ ಅಧಿನಿಯಮ, 1974ರ (1975ರ ಕರ್ನಾಟಕ ಅಧಿನಿಯಮ ಸಂಖ್ಯೆ 2) ಅರ್ಥವ್ಯಾಪ್ತಿಯೊಳಗೆ, ಸದರಿ ಅಧಿನಿಯಮದ 12ನೇ ಪ್ರಕರಣದ ಮೇರೆಗೆ ಬರಬೇಕಾದ ಬಾಕಿಗಳ ವಸೂಲಿಯ ಉದ್ದೇಶಕ್ಕಾಗಿ ಹಣಕಾಸು ನೆರವೆಂದು ಭಾವಿಸತಕ್ಕದ್ದು ಮತ್ತು ಅದರ ಉಪಬಂಧಗಳು, ಹಾಗೆ ನೀಡಿದ ಮೊಬಲಗಿನ ಸಂಬಂಧದಲ್ಲಿ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.][1]

1. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ (5), (6) ಮತ್ತು (7)ನೇ ಉಪಪ್ರಕರಣಗಳನ್ನು ಸೇರಿಸಲಾಗಿದೆ.

**79. ಹೆಚ್ಚುವರಿ ಭೂಮಿಗಳ ನಿರ್ವಹಣೆ.–** [1][ತಹಶೀಲ್ದಾರರು,][1] ಈ ಬಗ್ಗೆ ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು, 77ನೇ ಪ್ರಕರಣದಲ್ಲಿ ಉಲ್ಲೇಖಿಸಿರುವ ಹೆಚ್ಚುವರಿ ಭೂಮಿಗಳನ್ನು, ಸದರಿ ಪ್ರಕರಣದ ಮೇರೆಗೆ ಅವುಗಳು ವಿಲೇವಾರಿಯಾಗುವ ತನಕ ಗೇಣಿಗೆ ಕೊಡುವುದರ ಮೂಲಕ ಅಥವಾ ಅನ್ಯಥಾ ಅವುಗಳ ಸಾಗುವಳಿಗೆ ಮತ್ತು ರಕ್ಷಣೆಗೆ ವ್ಯವಸ್ಥೆ ಮಾಡುವ ಮೂಲಕ ನಿರ್ವಹಣೆ ಮಾಡತಕ್ಕದ್ದು.

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

## ಅಧ್ಯಾಯ – V

## ಕೃಷಿ ಭೂಮಿಗಳನ್ನು [1][ಧಾರಣ ಮಾಡಲು ಅಥವಾ][1] ವರ್ಗಾವಣೆ ಮಾಡಲು ನಿರ್ಬಂಧಗಳು

[2][**79ಎ. ಕೆಲವು ವ್ಯಕ್ತಿಗಳು ಭೂಮಿಯನ್ನು ಆರ್ಜಿಸಲು ನಿಷೇಧ.–** (1) [3][ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ 1995ರ][3] ಪ್ರಾರಂಭದ ದಿನಾಂಕದಂದು ಅಥವಾ ಅಂದಿನಿಂದ ಕೃಷಿ ಭೂಮಿಗಳಿಂದಲ್ಲದೆ ಇತರ ಮೂಲಗಳಿಂದ [3][ಎರಡು ಲಕ್ಷ][3] ರೂಪಾಯಿಗಳಿಗೆ ಕಡಿಮೆಯಿಲ್ಲದಷ್ಟು ಖಚಿತ ವಾರ್ಷಿಕ ವರಮಾನವಿರುವ ವ್ಯಕ್ತಿಗೆ ಅಥವಾ ಕುಟುಂಬಕ್ಕೆ ಅಥವಾ ಅವಿಭಕ್ತ ಕುಟುಂಬಕ್ಕೆ ಭೂ ಒಡೆಯನಾಗಿ, ಭೂ ಮಾಲೀಕನಾಗಿ, ಗೇಣಿದಾರನಾಗಿ ಅಥವಾ ಅಡಮಾನದಾರನಾಗಿ ಸ್ವಾಧೀನದ ಸಹಿತ ಅಥವಾ ಅನ್ಯಥಾ ಅಥವಾ ಭಾಗಶಃ ಒಂದು ಸಾಮರ್ಥ್ಯದಲ್ಲಿ ಮತ್ತು ಭಾಗಶಃ ಇನ್ನೊಂದು ಸಾಮರ್ಥ್ಯದಲ್ಲಿ ಯಾವುದೇ ಭೂಮಿಯನ್ನು ಆರ್ಜಿಸಲು ಹಕ್ಕಿರತಕ್ಕದ್ದಲ್ಲ.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ 79ಎ, 79ಬಿ ಮತ್ತು 79ಸಿ ಪ್ರಕರಣಗಳನ್ನು ಸೇರಿಸಲಾಗಿದೆ.

3. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ ದಿನಾಂಕ 20.10.1995 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಉಪ ಪ್ರಕರಣ (1) ರ ಉದ್ದೇಶಗಳಿಗಾಗಿ,–

(i) ಕೃಷಿ ಭೂಮಿಯಿಂದಲ್ಲದೆ ಇತರ ಮೂಲಗಳಿಂದ ಕುಟುಂಬದ ಅಥವಾ ಅವಿಭಕ್ತ ಕುಟುಂಬದ ಎಲ್ಲರ ಒಟ್ಟು ಆದಾಯವನ್ನು ಸಂದರ್ಭಾನುಸಾರ ಆ ಕುಟುಂಬಕ್ಕೆ ಅಥವಾ ಆ ಅವಿಭಕ್ತ ಕುಟುಂಬಕ್ಕೆ ಅಂಥ ಮೂಲಗಳಿಂದ ಬಂದ ಆದಾಯವೆಂದು ಭಾವಿಸತಕ್ಕದ್ದು;

(ii) ಕೃಷಿ ಭೂಮಿಯಿಂದಲ್ಲದೆ ಇತರ ಮೂಲಗಳಿಂದ ಯಾರೇ ವ್ಯಕ್ತಿಗೆ ಅಥವಾ ಕುಟುಂಬಕ್ಕೆ ಅಥವಾ ಅವಿಭಕ್ತ ಕುಟುಂಬಕ್ಕೆ [1][ಎರಡು ಲಕ್ಷ][1] ರೂಪಾಯಿಗಳಿಗಿಂತ ಕಡಿಮೆಯಿಲ್ಲದಷ್ಟು ಸರಾಸರಿ ವಾರ್ಷಿಕ ವರಮಾನವು ಯಾವುದೇ ಒಂದು ದಿನಕ್ಕೆ ಹಿಂದಿನ ಒಂದಾದ ಮೇಲೊಂದರಂತೆ ಅನುಕ್ರಮವಾಗಿ ಬಂದ ಐದು ವರ್ಷಗಳ ಅವಧಿಯಲ್ಲಿ ಇದ್ದರೆ, ಅಂಥ ದಿನದಂದು, ಅಂಥ ವ್ಯಕ್ತಿಗೆ ಅಥವಾ ಕುಟುಂಬಕ್ಕೆ ಅಥವಾ ಅವಿಭಕ್ತ ಕುಟುಂಬಕ್ಕೆ ಅಂಥ ಮೂಲಗಳಿಂದ [1][ಎರಡು ಲಕ್ಷ][1] ರೂಪಾಯಿಗಳಿಗೆ ಕಡಿಮೆಯಿಲ್ಲದ ಖಚಿತ ವಾರ್ಷಿಕ ವರಮಾನವು ಇತ್ತೆಂದು ಭಾವಿಸತಕ್ಕದ್ದು.

**ವಿವರಣೆ.**– [1][ಎರಡು ಲಕ್ಷ][1] ರೂಪಾಯಿಗಳಿಗಿಂತ ಕಡಿಮೆಯಿಲ್ಲದ ಒಟ್ಟು ವಾರ್ಷಿಕ ವರಮಾನದ ಮೇಲೆ ಒಂದಾದ ಮೇಲೊಂದರಂತೆ ಅನುಕ್ರಮವಾಗಿ ಬರುವ ಐದು ವರ್ಷಗಳಿಗೆ ವರಮಾನ ತೆರಿಗೆ ಅಧಿನಿಯಮ, 1961ರ (1961ರ ಕೇಂದ್ರ ಅಧಿನಿಯಮ 43)ರ ಮೇರೆಗೆ ಯಾವ ವ್ಯಕ್ತಿಯ ಅಥವಾ ಕುಟುಂಬದ ಅಥವಾ ಅವಿಭಕ್ತ ಕುಟುಂಬದ ವರಮಾನ ತೆರಿಗೆಯನ್ನು ನಿರ್ಧರಣೆ ಮಾಡಲಾಗಿದೆಯೋ, ಆ ವ್ಯಕ್ತಿಗೆ ಅಥವಾ ಕುಟುಂಬಕ್ಕೆ ಅಥವಾ ಅವಿಭಕ್ತ ಕುಟುಂಬಕ್ಕೆ ಕೃಷಿ ಭೂಮಿಗಳಿಂದಲ್ಲದೆ ಇತರ ಮೂಲಗಳಿಂದ [1][ಎರಡು ಲಕ್ಷ][1] ರೂಪಾಯಿಗಳಿಗೆ ಕಡಿಮೆಯಿಲ್ಲದ ಸರಾಸರಿ ವಾರ್ಷಿಕ ವರಮಾನವಿರುವುದೆಂದು ಭಾವಿಸತಕ್ಕದ್ದು.

1. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ ದಿನಾಂಕ 20.10.1995 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ವಾರಸುದಾರಿಕೆಯಿಂದಲ್ಲದೇ ಅಥವಾ ಮರಣ ಶಾಸನದಾನದಿಂದಲ್ಲದೆ ಈ ಪ್ರಕರಣವನ್ನು ಉಲ್ಲಂಘಿಸಿ ಅನ್ಯಥಾ ಮಾಡಿದ ಪ್ರತಿಯೊಂದು ಭೂ ಆರ್ಜನೆಯೂ ಅನೂರ್ಜಿತವಾಗತಕ್ಕದ್ದು.

(4) ಯಾರೇ ವ್ಯಕ್ತಿಯು (1)ನೇ ಉಪಪ್ರಕರಣವನ್ನು ಉಲ್ಲಂಘಿಸಿ ಭೂಮಿಯನ್ನು ಆರ್ಜಿಸಿದಲ್ಲಿ ಅಥವಾ ಮರಣ ಶಾಸನದಾನದ ಮೂಲಕ ಅಥವಾ ವಾರಸುದಾರಿಕೆಯಿಂದ ಅದನ್ನು ಆರ್ಜಿಸಿದಲ್ಲಿ ಅವನು ಆರ್ಜಿಸಿದ ಆ ಭೂಮಿಯ ಅಥವಾ ಅದರ ಹೆಚ್ಚಿನ ಭಾಗವು ಯಾವ ತಾಲ್ಲೂಕಿನಲ್ಲಿ ಇದೆಯೊ ಆ ತಾಲ್ಲೂಕಿನ ಮೇಲೆ ಅಧಿಕಾರ ವ್ಯಾಪ್ತಿಯುಳ್ಳ ತಹಸೀಲ್ದಾರರಿಗೆ ಈ ಕೆಳಕಂಡ ವಿವರಗಳು ಇರುವ ಘೋಷಣೆಯನ್ನು ಈ ಆರ್ಜನೆಯ ದಿನಾಂಕದಿಂದ ತೊಂಬತ್ತು ದಿನಗಳೊಳಗಾಗಿ ಸಲ್ಲಿಸತಕ್ಕದ್ದು, ಎಂದರೆ:–

(i) ಎಲ್ಲ ಭೂಮಿಗಳ ವಿವರಗಳು;

(ii) ತನ್ನ ಅಥವಾ ಕುಟುಂಬದ ಸರಾಸರಿ ವಾರ್ಷಿಕ ಆದಾಯ;

(iii) ನಿಯಮಿಸಬಹುದಾದಂಥ ಇತರ ವಿವರಗಳು.

(5) ಉಪಪ್ರಕರಣ (4)ರ ಮೇರೆಗಿನ ಘೋಷಣೆಯನ್ನು ಸ್ವೀಕರಿಸಿದ ಮೇಲೆ ಮತ್ತು ನಿಯಮಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ನಂತರ, ತಹಸೀಲ್ದಾರರು ಅಂಥ ಭೂಮಿಗೆ ಸಂಬಂಧಿಸಿದಂತೆ ನಿಯಮಿಸಿದ ವಿವರಗಳನ್ನೊಳಗೊಂಡಿರುವ ತಃಖ್ತೆಯನ್ನು ಡೆಪ್ಯುಟಿ ಕಮೀಷನರರಿಗೆ ಕಳುಹಿಸಿಕೊಡತಕ್ಕದ್ದು ಮತ್ತು ಅವರು ಅಧಿಸೂಚನೆ ಮೂಲಕ, ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ದಿನಾಂಕದಿಂದ ಅಂಥ ಭೂಮಿಯು ಪುನಃ ವರ್ಗಾವಣೆಗೆ ಆಸ್ಪದವಿಲ್ಲದಂತೆ ಎಲ್ಲ ಋಣಭಾರಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರಕ್ಕೆ ವರ್ಗಾವಣೆ ಆಗಿದೆಯೆಂದು ಮತ್ತು ರಾಜ್ಯ ಸರ್ಕಾರದಲ್ಲಿ ನಿಹಿತವಾಗಿದೆಯೆಂದು ಘೋಷಿಸತಕ್ಕದ್ದು. ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಿಂದ ಡೆಪ್ಯುಟಿ ಕಮೀಷನರರವರು ಅಂಥ ಭೂಮಿಯನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು.

(6) ಉಪಪ್ರಕರಣ (5)ರ ಮೇರೆಗೆ ರಾಜ್ಯ ಸರ್ಕಾರದಲ್ಲಿ ನಿಹಿತವಾಗುವ ಭೂಮಿಯು ಮರಣಶಾಸನದಾನದ ಅಥವಾ ವಾರಸುದಾರಿಕೆಯ ಮೂಲಕ ಆರ್ಜನೆಯಾಗಿರುವಲ್ಲಿ, ಆ ಭೂಮಿಗೆ 72ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವಂತೆ ಹಣವನ್ನು ಸಂದಾಯ ಮಾಡತಕ್ಕದ್ದು ಮತ್ತು ಆ ಆರ್ಜನೆಯು ಮರಣಶಾಸನದಾನದ ಅಥವಾ ವಾರಸುದಾರಿಕೆಯ ಮೂಲಕವಲ್ಲದೆ ಅನ್ಯಥಾ ಆಗಿರುವಲ್ಲಿ [1][ಯಾವುದೇ ಹಣವನ್ನು][1] ಸಂದಾಯ ಮಾಡತಕ್ಕದ್ದಲ್ಲ.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**79ಬಿ. ಕೆಲವು ವ್ಯಕ್ತಿಗಳು ಕೃಷಿ ಭೂಮಿಯನ್ನು ಧಾರಣ ಮಾಡಲು ನಿಷೇಧ.**– (1) ತಿದ್ದುಪಡಿ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ಮತ್ತು ಅಂದಿನಿಂದ ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು,–

(ಎ) ಭೂಮಿಯನ್ನು ಸ್ವಂತ ಸಾಗುವಳಿ ಮಾಡುತ್ತಿರುವ ವ್ಯಕ್ತಿ ಅಲ್ಲದ ಇತರ ಯಾರೇ ವ್ಯಕ್ತಿಗೆ ಭೂಮಿಯನ್ನು ಧಾರಣ ಮಾಡಲು ಹಕ್ಕಿರತಕ್ಕದ್ದಲ್ಲ; ಮತ್ತು

(ಬಿ) ಯಾವುದೇ ಭೂಮಿಯನ್ನು,–

(i) ಸ್ವತ್ತನ್ನು ಧಾರಣ ಮಾಡಲು ಸಾಮರ್ಥ್ಯವುಳ್ಳ 63ನೇ ಪ್ರಕರಣದ (7) ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿರುವ ಸಂಸ್ಥೆಯಲ್ಲದ ಅಥವಾ ಸಂಘವಲ್ಲದ ಅಥವಾ ಟ್ರಸ್ಟ್ ಅಲ್ಲದ, ಶೈಕ್ಷಣಿಕ, ಧಾರ್ಮಿಕ ಅಥವಾ ಧರ್ಮಾದಾಯ ಸಂಸ್ಥೆಯು ಅಥವಾ ಸಂಘವು ಅಥವಾ ಟ್ರಸ್ಟ್;

(ii) ಕಂಪನಿಯು;

(iii) ಅವಿಭಕ್ತ ಕುಟುಂಬ ಅಲ್ಲದ, ನಿಗಮಿತವಾಗಿರಲಿ ಅಥವಾ ಆಗಿರದಿರಲಿ, ವ್ಯಕ್ತಿಗಳ ಸಂಘವು ಅಥವಾ ಇತರ ನಿಕಾಯವು; ಅಥವಾ

(iv) ಸಹಕಾರ ಕೃಷಿ ಕ್ಷೇತ್ರವಲ್ಲದ ಸಹಕಾರ ಸಂಘವು,

– ಧಾರಣ ಮಾಡುವುದು ಕಾನೂನುಬದ್ಧವಾಗಿರತಕ್ಕದ್ದಲ್ಲ.

(2) ಯಾವ ಸಂಸ್ಥೆಯು, ಸಂಘವು, ಟ್ರಸ್ಟ್, ಕಂಪೆನಿಯು, ವ್ಯಕ್ತಿಗಳ ಸಂಘವು, ನಿಕಾಯವು ಅಥವಾ ಸಹಕಾರ ಸಂಘವು,–

(ಎ) ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದಂದು ಭೂಮಿಗಳನ್ನು ಧಾರಣ ಮಾಡಿದೆಯೋ ಮತ್ತು (1)ನೇ ಉಪಪ್ರಕರಣದ ಮೇರೆಗೆ ಭೂಮಿಗಳನ್ನು ಯಾವುದಕ್ಕೆ ಧಾರಣ ಮಾಡಲು ಹಕ್ಕಿಲ್ಲವೊ ಆ ಪ್ರತಿಯೊಂದು ಸಂಸ್ಥೆಯು, ಸಂಘವು, ಟ್ರಸ್ಟ್, ಕಂಪನಿಯು, ವ್ಯಕ್ತಿಗಳ ಸಂಘವು, ನಿಕಾಯವು ಅಥವಾ ಸಹಕಾರ ಸಂಘವು ಅಂಥ ಭೂಮಿಯ ಹೆಚ್ಚಿನ ಭಾಗವು ಯಾವ ತಹಸೀಲ್ದಾರರ ಅಧಿಕಾರ ವ್ಯಾಪ್ತಿಯಲ್ಲಿ ಇದೆಯೋ ಆ ತಹಸೀಲ್ದಾರರಿಗೆ ಅಂಥ ಭೂಮಿಯ ವಿವರಗಳನ್ನು ಮತ್ತು ನಿಯಮಿಸಬಹುದಾದಂಥ ಇತರ ವಿವರಗಳನ್ನು ಒಳಗೊಂಡಿರುವ ಘೋಷಣೆಯನ್ನು ಸದರಿ ದಿನಾಂಕದಿಂದ ತೊಂಬತ್ತು ದಿನಗಳೊಳಗೆ ಸಲ್ಲಿಸತಕ್ಕದ್ದು; ಮತ್ತು

(ಬಿ) ಸದರಿ ದಿನಾಂಕದ ತರುವಾಯ ಅಂಥ ಭೂಮಿಯನ್ನು ಯಾವ ಸಂಸ್ಥೆಯು, ಸಂಘವು, ಟ್ರಸ್ಟ್, ವ್ಯಕ್ತಿಗಳ ಸಂಘವು, ನಿಕಾಯವು ಅಥವಾ ಸಹಕಾರ ಸಂಘವು ಆರ್ಜಿಸುವುದೋ ಆ ಪ್ರತಿಯೊಂದು ಸಂಸ್ಥೆಯು, ಸಂಘವು, ಟ್ರಸ್ಟ್, ವ್ಯಕ್ತಿಗಳ ಸಂಘವು, ನಿಕಾಯವು ಅಥವಾ ಸಹಕಾರ ಸಂಘವು ಅದೇ ರೀತಿಯ ಘೋಷಣೆಯನ್ನು ನಿಯಮಿಸಿದ ಅವಧಿಯೊಳಗೆ ಸಲ್ಲಿಸತಕ್ಕದ್ದು.

(3) ಉಪಪ್ರಕರಣ (2)ರ ಮೇರೆಗಿನ ಘೋಷಣೆಯನ್ನು ಸ್ವೀಕರಿಸಿದ ಮೇಲೆ ಮತ್ತು ನಿಯಮಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ನಂತರ, ತಹಸೀಲ್ದಾರರು ಅಂಥ ಭೂಮಿಗೆ ಸಂಬಂಧಿಸಿದಂತೆ ನಿಯಮಿಸಿದ ವಿವರಗಳನ್ನೊಳಗೊಂಡ ಹೇಳಿಕೆಯನ್ನು ಡೆಪ್ಯೂಟಿ ಕಮೀಷನರವರಿಗೆ ಕಳುಹಿಸಿಕೊಡತಕ್ಕದ್ದು ಮತ್ತು ಅವರು ಅಂಥ ಭೂಮಿಯ ಎಲ್ಲ ಋಣಭಾರಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದೆಂದು ಅಧಿಸೂಚನೆಯ ಮೂಲಕ ಘೋಷಿಸತಕ್ಕದ್ದು ಮತ್ತು ನಿಯಮಿಸಿದ ರೀತಿಯಲ್ಲಿ ಅದನ್ನು ಸ್ವಾಧೀನಕ್ಕೆ ತೆಗೆದುಕೊಳ್ಳತಕ್ಕದ್ದು.

(4) ಈ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರದಲ್ಲಿ ನಿಹಿತವಾಗುವ ಭೂಮಿಗೆ 72ನೆಯ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಹಣವನ್ನು ಸಂದಾಯ ಮಾಡತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ, ಸಂಸ್ಥೆಯ, ಟ್ರಸ್ಟ್‌ನ, ಕಂಪನಿಯ, ವ್ಯಕ್ತಿಗಳ ಸಂಘದ ಅಥವಾ ನಿಕಾಯದ ಪರವಾಗಿ ವ್ಯಕ್ತಿಯು ಭೂಮಿಯನ್ನು ಧಾರಣ ಮಾಡಿದ್ದರೆ ಆ ಭೂಮಿಯನ್ನು ಆ ಸಂಸ್ಥೆಯು, ಆ ಟ್ರಸ್ಟ್ , ಆ ಕಂಪನಿಯು ಅಥವಾ ವ್ಯಕ್ತಿಗಳ ಆ ಸಂಘವು ಅಥವಾ ಆ ನಿಕಾಯವು ಧಾರಣ ಮಾಡಿದೆ ಎಂದು ಪೂರ್ವಭಾವನೆ ಮಾಡತಕ್ಕದ್ದು.

**79ಸಿ. ಘೋಷಣೆಯನ್ನು ಸಲ್ಲಿಸಲು ತಪ್ಪಿದ್ದಕ್ಕಾಗಿ ದಂಡ.–** (1) 79ಎ ಅಥವಾ 79ಬಿ ಪ್ರಕರಣದ ಮೇರೆಗಿನ ಘೋಷಣೆಯನ್ನು ವ್ಯಕ್ತಿಯು ಸಲ್ಲಿಸಲು ತಪ್ಪಿದಲ್ಲಿ ಅಥವಾ ಸುಳ್ಳೆಂದು ತಿಳಿದಿದ್ದರೂ ಅಥವಾ ಸುಳ್ಳೆಂದು ತನಗೆ ನಂಬಲು ಕಾರಣವಿದ್ದರೂ ಘೋಷಣೆಯನ್ನು ಸಲ್ಲಿಸಿದಲ್ಲಿ, ತಹಸೀಲ್ದಾರರು ಅಂಥ ವ್ಯಕ್ತಿಗೆ ನಿಯಮಿಸಲಾದ ನಮೂನೆಯಲ್ಲಿ ನೋಟೀಸನ್ನು ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದಂತೆ ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡವನ್ನು ಅವನಿಗೆ ಏಕೆ ವಿಧಿಸಕೂಡದೆಂಬುದಕ್ಕೆ ಆ ನೋಟಿಸು ಜಾರಿಯಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಕಾರಣ ತೋರಿಸುವಂತೆ ನೋಟೀಸನ್ನು ಕೊಡತಕ್ಕದ್ದು.

(2) ಉತ್ತರ ಏನಾದರು ಸಲ್ಲಿಸಿದ್ದರೆ ತಹಶೀಲ್ದಾರರು ಅದನ್ನು ಪರಿಶೀಲಿಸಿದ ತರುವಾಯ, ಆ ವ್ಯಕ್ತಿಯು ಸಮಂಜಸ ಕಾರಣವಿಲ್ಲದೆ ಆ ಘೋಷಣೆಯನ್ನು ಸಲ್ಲಿಸಲು ತಪ್ಪಿದ್ದಾನೆಂದು ಅಥವಾ ಅದು ಸುಳ್ಳೆಂದು ತಿಳಿದಿದ್ದರೂ ಅಥವಾ ಸುಳ್ಳೆಂದು ತನಗೆ ನಂಬಲು ಕಾರಣವಿದ್ದರೂ ಅದನ್ನು ಸಲ್ಲಿಸಿದ್ದಾನೆಂದು ತಹಸೀಲ್ದಾರರಿಗೆ ಮನದಟ್ಟಾದರೆ, ಅವರು ಆದೇಶದ ಮೂಲಕ ದಂಡವನ್ನು ವಿಧಿಸಬಹುದು ಮತ್ತು ಆ ಆದೇಶದ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗೆ ಎಲ್ಲ ವಿವರಗಳನ್ನು, ಸಂಪೂರ್ಣವಾಗಿ ಒಳಗೊಂಡಿರುವ ನಿಜವಾದ ಮತ್ತು ಸರಿಯಾದ ಘೋಷಣೆಯನ್ನು ಸಲ್ಲಿಸುವಂತೆ ಆ ವ್ಯಕ್ತಿಯನ್ನು ಅಗತ್ಯಪಡಿಸಬಹುದು.

(3) ಆ ವ್ಯಕ್ತಿಯು ಅಂಥ ಆದೇಶವನ್ನು ಪಾಲಿಸಲು ತಪ್ಪಿದರೆ, ಆ ಭೂಮಿಯ ಮೇಲೆ ಅವನಿಗೆ ಇರುವ ಹಕ್ಕು, ಹಕ್ಕು ಸ್ವಾಮ್ಯ ಮತ್ತು ಹಿತಾಸಕ್ತಿಯು ದಂಡವಾಗಿ ಸರ್ಕಾರಕ್ಕೆ ಮುಟ್ಟುಗೋಲಾಗತಕ್ಕದ್ದು ಮತ್ತು ಸರ್ಕಾರದಲ್ಲಿ ನಿಹಿತವಾಗತಕ್ಕದ್ದು.][2]

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 1–3–1974ರಿಂದ ಜಾರಿಗೆ ಬರುವಂತೆ 79ಎ, 79ಬಿ ಮತ್ತು 79ಸಿ ಪ್ರಕರಣಗಳನ್ನು ಸೇರಿಸಲಾಗಿದೆ.

**80. ಕೃಷಿಕರಲ್ಲದವರಿಗೆ ವರ್ಗಾವಣೆ ಮಾಡುವುದಕ್ಕೆ ನಿಷೇಧ. –** [1][(1)][1] (ಎ) ಯಾವುದೇ ಭೂಮಿಯ ಅಥವಾ ಅದರಲ್ಲಿರುವ ಯಾವುದೇ ಹಿತಾಸಕ್ತಿಯ ಮಾರಾಟವನ್ನು (ಸಿವಿಲ್ ನ್ಯಾಯಾಲಯದ ಡಿಕ್ರಿಯನ್ನು ಜಾರಿ ಮಾಡುವಾಗ ಅಥವಾ ಭೂ ಕಂದಾಯದ ಬಾಕಿಯನ್ನು ವಸೂಲಿ ಮಾಡಲು ಅಥವಾ ಭೂಕಂದಾಯದ ಬಾಕಿಗಳಂತೆ ವಸೂಲಿ ಮಾಡಬಹುದಾದ ಮೊಬಲಗಿಗಾಗಿ ಮಾಡುವ ಮಾರಾಟಗಳನ್ನು ಒಳಗೊಂಡು) ದಾನವನ್ನು ಅಥವಾ ವಿನಿಮಯವನ್ನು ಅಥವಾ ಗುತ್ತಿಗೆಯನ್ನು; ಅಥವಾ

(ಬಿ) ಅಡಮಾನ ಮಾಡಿದ ಯಾವ ಸ್ವತ್ತಿನ ಸ್ವಾಧೀನವನ್ನು ಅಡಮಾನದಾರನಿಗೆ ಒಪ್ಪಿಸಲಾಗಿದೆಯೋ ಆ ಯಾವುದೇ ಭೂಮಿಯ ಅಥವಾ ಅದರಲ್ಲಿನ ಹಿತಾಸಕ್ತಿಯ ಯಾವ ಅಡಮಾನವನ್ನು,–

(i) ಕೃಷಿಕನಲ್ಲದ; ಅಥವಾ

(ii) ಕೃಷಿಕನಾಗಿರುವ 63ನೇ ಅಥವಾ 64ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಮಿತಿಗಳನ್ನು ಯಾವ ಭೂಮಿಯು ಮೀರುವುದೋ ಆ ಭೂಮಿಯ ಒಡೆಯನಾಗಿ ಅಥವಾ ಗೇಣಿದಾರನಾಗಿ ಅಥವಾ ಭಾಗಶಃ ಒಡೆಯನಾಗಿ ಮತ್ತು ಭಾಗಶಃ ಗೇಣಿದಾರನಾಗಿ ಧಾರಣ ಮಾಡಿರುವ; ಅಥವಾ

[2][(iii) ಕೃಷಿ ಕಾರ್ಮಿಕನಲ್ಲದ; ಅಥವಾ

(iv) 79ಎ ಅಥವಾ 79ಬಿ ಪ್ರಕರಣದ ಮೇರೆಗೆ ಯಾವುದೇ ಭೂಮಿಯನ್ನು ಆರ್ಜಿಸಲು ಅಥವಾ ಧಾರಣ ಮಾಡಲು ಹಕ್ಕಿಲ್ಲದ,][2]

– ಯಾರೇ ವ್ಯಕ್ತಿಗೆ ಮಾಡಿದರೆ ಅದು [3][ಕಾನೂನು ಸಮ್ಮತವಾದುದಾಗತಕ್ಕದ್ದಲ್ಲ:][3]

ಪರಂತು, ಯಾವುದೇ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯುಳ್ಳ ಅಸಿಸ್ಟೆಂಟ್ ಕಮೀಷನರವರು ಅಥವಾ ಯಾವುದೇ ಪ್ರದೇಶದ ಸಂಬಂಧದಲ್ಲಿ ಈ ಬಗ್ಗೆ ರಾಜ್ಯ ಸರ್ಕಾರದಿಂದ ಅಧಿಕಾರ ಹೊಂದಿರುವ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಿಮೆ ದರ್ಜೆಯವನಲ್ಲದ ಯಾರೇ ಅಧಿಕಾರಿಯು [2][79ಎ ಅಥವಾ 79ಬಿ ಪ್ರಕರಣದ ಮೇರೆಗೆ ಭೂಮಿಯನ್ನು ಆರ್ಜಿಸಲು ಅಥವಾ ಧಾರಣ ಮಾಡಲು ಹಕ್ಕಿಲ್ಲದ ವ್ಯಕ್ತಿಯಲ್ಲದ ವ್ಯಕ್ತಿಗೆ,][2] ಕೃಷಿಯನ್ನು ಕೈಗೊಳ್ಳುವ ಸದ್ಭಾವನೆಯ ಉದ್ದೇಶ ಇದ್ದರೆ ಆ ವ್ಯಕ್ತಿಗೆ ಭೂಮಿಯನ್ನು ಆರ್ಜಿಸಲು ಅಥವಾ ಧಾರಣ ಮಾಡಲು ಸಾಧ್ಯವಾಗುವಂತೆ ಮಾಡುವುದಕ್ಕಾಗಿ ಹಾಗೆ ಮಾರಾಟ

ಮಾಡಲು, ದಾನ ಮಾಡಲು ಅಥವಾ ವಿನಿಮಯ ಮಾಡಿಕೊಳ್ಳಲು ಈ ಕೆಳಕಂಡ ಷರತ್ತುಗಳ ಜೊತೆಗೆ ನಿಯಮಿಸಬಹುದಾದಂಥ ಷರತ್ತುಗಳ ಮೇಲೆ ಅನುಮತಿಯನ್ನು ಕೊಡಬಹುದು, ಎಂದರೆ:–

(i) ವರ್ಗಾವಣೆ ಪಡೆದವನು ಆ ಭೂಮಿಯನ್ನು ಆರ್ಜಿಸಿದ ದಿನಾಂಕದಿಂದ ಒಂದು ವರ್ಷದೊಳಗಾಗಿ ಕೃಷಿಯನ್ನು ಕೈಕೊಳ್ಳಬೇಕು, ಮತ್ತು

(ii) ವರ್ಗಾವಣೆ ಪಡೆದವನು ಐದು ವರ್ಷದೊಳಗಾಗಿ ಕೃಷಿ ಮಾಡುವುದನ್ನು ಕೈಬಿಟ್ಟರೆ ಆ ಭೂಮಿಯ ನಿವ್ವಳ ವಾರ್ಷಿಕ ವರಮಾನದ ಎಂಟರಷ್ಟು ಮೊಬಲಗಿಗೆ ಸಮನಾದ ಮೊಬಲಗನ್ನು ಅಥವಾ ಭೂಮಿಯನ್ನು ಖರೀದಿ ಮಾಡಿದರೆ ಆ ಭೂಮಿಗೆ ಸಂದಾಯ ಮಾಡಿದ ಬೆಲೆಯು ಆ ಭೂಮಿಯ ನಿವ್ವಳ ವಾರ್ಷಿಕ ವರಮಾನದ ಎಂಟರಷ್ಟಕ್ಕಿಂತ ಕಡಿಮೆ ಇದ್ದಲ್ಲಿ ಅದನ್ನು ಆತನಿಗೆ ಸಂದಾಯ ಮಾಡಬೇಕೆಂಬುದಕ್ಕೆ ಒಳಪಟ್ಟು ಆ ಭೂಮಿಯು ಸರ್ಕಾರದಲ್ಲಿ ನಿಹಿತವಾಗತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 25.11.1980 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(2) ಉಪ ಪ್ರಕರಣ (1)ಲ್ಲಿರುವುದು ಯಾವುದೂ 77ನೇ ಪ್ರಕರಣದ ಮೇರೆಗೆ ಮಂಜೂರು ಮಾಡಿದ ಭೂಮಿಗಳಿಗೆ ಅನ್ವಯವಾಗತಕ್ಕದ್ದಲ್ಲ.][1]

[1][**81. 79ಎ, 79ಬಿ ಮತ್ತು 80ನೇ ಪ್ರಕರಣಗಳು ಕೆಲವು ಸಂದರ್ಭಗಳಲ್ಲಿ ಅನ್ವಯವಾಗದಿರುವುದು.–** (1) 79ಎ ಅಥವಾ 79ಬಿ ಪ್ರಕರಣದಲ್ಲಿ ಅಥವಾ 80ನೇ ಪ್ರಕರಣದಲ್ಲಿ ಇರುವುದು ಯಾವುದೂ,–

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಎ) ಯಾವುದೇ ಭೂಮಿಯನ್ನು ಅಥವಾ ಅದರಲ್ಲಿನ ಹಿತಾಸಕ್ತಿಯನ್ನು [2][ಸರ್ಕಾರಕ್ಕೆ, ರಸ್ತೆ ಸಾರಿಗೆ ನಿಗಮ ಅಧಿನಿಯಮ, 1950ರ ಮೇರೆಗೆ (1950ರ ಕೇಂದ್ರ ಅಧಿನಿಯಮ LXIV) ರಚಿತವಾದ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಗೆ, ಕಂಪನಿಗಳ ಅಧಿನಿಯಮ, 1956ರ ಮೇರೆಗೆ ರಚಿತವಾದ ಕರ್ನಾಟಕ ವಿದ್ಯುಚ್ಛಕ್ತಿ ಪ್ರಸರಣ ನಿಗಮ ನಿಯಮಿತಕ್ಕೆ,][2] [3][ಕರ್ನಾಟಕ ಗೃಹ ನಿರ್ಮಾಣ ಮಂಡಳಿ ಅಧಿನಿಯಮ, 1962ರ ಮೇರೆಗೆ (1963ರ ಕರ್ನಾಟಕ ಅಧಿನಿಯಮ 10) ರಚಿತವಾದ ಕರ್ನಾಟಕ ಗೃಹ ನಿರ್ಮಾಣ ಮಂಡಳಿಗೆ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮ, 1966ರ ಮೇರೆಗೆ (1966ರ ಕರ್ನಾಟಕ ಅಧಿನಿಯಮ 18) ರಚಿತವಾದ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ, ಕರ್ನಾಟಕ ಕೊಳಚೆ ಪ್ರದೇಶಗಳ (ಸುಧಾರಣೆ ಮತ್ತು ನಿರ್ಮೂಲನೆ) ಅಧಿನಿಯಮ, 1973ರ ಮೇರೆಗೆ (1974ರ ಕರ್ನಾಟಕ ಅಧಿನಿಯಮ 33) ಸ್ಥಾಪಿಸಲಾದ ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನಾ ಮಂಡಳಿಗೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1976ರ ಮೇರೆಗೆ (1976ರ ಕರ್ನಾಟಕ ಅಧಿನಿಯಮ ಸಂಖ್ಯೆ 12) ರಚಿತವಾದ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಿಗಳ ಅಧಿನಿಯಮ, 1987ರ ಮೇರೆಗೆ (1987ರ ಕರ್ನಾಟಕ ಅಧಿನಿಯಮ 34) ರಚಿತವಾದ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಾರಾಟ ಮಾಡಿದ್ದಕ್ಕೆ ಅಥವಾ ದಾನವಾಗಿ ನೀಡಿದ್ದಕ್ಕೆ ಅಥವಾ ಅಡಮಾನ ಮಾಡಿದ್ದಕ್ಕೆ;][3]

(ಬಿ) ಯಾವುದೇ ಭೂಮಿಯನ್ನು ಅಥವಾ ಅದರಲ್ಲಿನ ಹಿತಾಸಕ್ತಿಯನ್ನು,–

(i) ಸಹಕಾರ ಸಂಘಕ್ಕೆ;

[4][(ii) ಹಣಕಾಸು ಸಂಸ್ಥೆಗೆ;][4]

[5][(iii) xxx

(iv) xxx

(v) xxx][5]

(vi) 1956ರ ಕಂಪನಿಗಳ ಅಧಿನಿಯಮದ (1956ರ ಕೇಂದ್ರ ಅಧಿನಿಯಮ 1) 3ನೇ ಪ್ರಕರಣದಲ್ಲಿ ಪರಿಭಾಷಿಸಿರುವ ಯಾವ ಕಂಪನಿಯಲ್ಲಿ ಶೇಕಡಾ ಐವತ್ತೊಂದಕ್ಕೆ ಕಡಿಮೆಯಿಲ್ಲದಷ್ಟು ಸಂದಾಯಿತ ಷೇರು ಬಂಡವಾಳವನ್ನು ರಾಜ್ಯ ಸರ್ಕಾರವು [6][ಅಥವಾ ಕೇಂದ್ರ ಸರ್ಕಾರ ಅಥವಾ ಅವರೆಡೂ][6] ಹೊಂದಿದೆಯೋ ಆ ಯಾವುದೇ ಕಂಪನಿಗೆ;

(vii) ಕಂಪನಿಗಳ ಅಧಿನಿಯಮದ (1956ರ ಕೇಂದ್ರ ಅಧಿನಿಯಮ 1) 3ನೇ ಪ್ರಕರಣದಲ್ಲಿ ಪರಿಭಾಷಿಸಿರುವಂತೆ ಕಂಪನಿಯಾಗಿರದ, ರಾಜ್ಯ ಸರ್ಕಾರದಿಂದ [6][ಅಥವಾ ಕೇಂದ್ರ ಸರ್ಕಾರದಿಂದ ಅಥವಾ ಅವರೆಡರಿಂದ][6] ಸ್ಥಾಪಿತವಾದ ಅಥವಾ ರಚಿತವಾದ ಯಾವುದೇ ನಿಗಮಕ್ಕೆ;

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 2003ರ ಅಧಿನಿಯಮ ಸಂಖ್ಯೆ 20ರ ಮೂಲಕ ದಿನಾಂಕ 23.04.2003 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1991ರ ಅಧಿನಿಯಮ ಸಂಖ್ಯೆ 31ರ ಮೂಲಕ ದಿನಾಂಕ 01.01.1988 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

4. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

5. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

6. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(viii) ಕಾಫಿ ಅಧಿನಿಯಮ, 1942ರ (1942ರ ಕೇಂದ್ರ ಅಧಿನಿಯಮ 7) ಮೇರೆಗೆ ರಚಿತವಾದ ಕಾಫಿ ಮಂಡಳಿಗೆ

– ಅಂಥ ಸಂಘವು, ಬ್ಯಾಂಕು, ನಿಗಮವು ಅಥವಾ ಮಂಡಲಿಯು ಕೃಷಿ ಉದ್ದೇಶಗಳಿಗಾಗಿ ಕೊಟ್ಟಿರುವ ಯಾವುದೇ ಸಾಲಕ್ಕೆ ಅಥವಾ ಇತರ ಸೌಕರ್ಯಕ್ಕೆ ಭದ್ರತೆಯಾಗಿ ಅಡಮಾನ ಮಾಡಿದ್ದಕ್ಕೆ.

**ವಿವರಣೆ:**– ಈ ಖಂಡದಲ್ಲಿ, **"ಕೃಷಿ ಉದ್ದೇಶಗಳು"** ಎಂಬುದು ಭೂಮಿಯನ್ನು ಬೇಸಾಯ ಯೋಗ್ಯವನ್ನಾಗಿ ಮಾಡುವುದು, ಭೂ ಸಾಗುವಳಿ, ಭೂ ಅಭಿವೃದ್ಧಿ, ನೀರಾವರಿ ಮೂಲಗಳ ಅಭಿವೃದ್ಧಿ, ಬೆಳೆಗಳನ್ನು ಬೆಳೆಸುವುದು ಮತ್ತು ಕಟಾವು ಮಡುವುದು, ತೋಟಗಾರಿಕೆ, ಅರಣ್ಯ ನಿರ್ಮಾಣ, ಸಸಿ ನೆಡುವುದು ಮತ್ತು ಬೆಳೆಸುವುದು, ಜಾನುವಾರು ತಳಿಸಂವರ್ಧನೆ, ಪಶುಸಂಗೋಪನೆ, ಹೈನುಗಾರಿಕೆ, ಕೃಷಿ ಬೀಜ ಉತ್ಪಾದನೆ, ಮತ್ಸ್ಯ ಕೃಷಿ, ಜೇನು ಕೃಷಿ, ರೇಷ್ಮೆ ಕೃಷಿ, ಹಂದಿಸಾಕಣೆ, ಕೋಳಿ ಸಾಕಣೆಯನ್ನು ಮತ್ತು ಸಾಮಾನ್ಯವಾಗಿ ಕೃಷಿಕರು, ಹೈನುಗಾರರು, ಜಾನುವಾರು ತಳಿಸಂವರ್ಧಕರು, ಕೋಳಿ ಸಾಕಣೆದಾರರು ಮತ್ತು ಕೃಷಿ ಉತ್ಪನ್ನಗಳ ಕ್ರಯ ವಿಕ್ರಯ ಅವುಗಳ ಸಂಗ್ರಹಣೆ ಮತ್ತು ಸಾಗಣೆ ಮತ್ತು ಅಂಥ ಯಾವುದೇ ಇತರ ಕಾರ್ಯಗಳ ಸಂಬಂಧದಲ್ಲಿ ಉಪಕರಣಗಳ ಮತ್ತು ಯಂತ್ರೋಪಕರಣಗಳ ಆರ್ಜನೆ ಇವೇ ಮುಂತಾದ ಕಾರ್ಯಗಳಲ್ಲಿ ನಿರತರಾದ ಇತರ ಪ್ರವರ್ಗದ ವ್ಯಕ್ತಿಗಳು ಕೈಗೊಳ್ಳುವ ಕಾರ್ಯಗಳನ್ನು ಒಳಗೊಳ್ಳುತ್ತದೆ;

(ಸಿ) ಸದರಿ ಭದ್ರತೆಯನ್ನು ಜಾರಿಗೆ ತರುವಲ್ಲಿ (ಬಿ) ಖಂಡದಲ್ಲಿ ಉಲ್ಲೇಖಿಸಿದ ಯಾವುದೇ ಭೂಮಿಯ ಅಥವಾ ಅದರಲ್ಲಿನ ಹಿತಾಸಕ್ತಿಯ ಮಾರಾಟಕ್ಕೆ;

(ಡಿ) ಬಿತ್ತನೆ ಬೀಜ ಉತ್ಪನ್ನ ಕುರಿತಂತೆ ಸಂಶೋಧನೆ ಉದ್ದೇಶಗಳಿಗಾಗಿ ಯಾವುದೇ ಭೂಮಿಯನ್ನು ಸಕ್ಕರೆ ಕಾರ್ಖಾನೆಗೆ ಮಾರಾಟ ಮಾಡುವುದಕ್ಕೆ ಅಥವಾ ಕಾಫಿ ಅಧಿನಿಯಮ 1942ರ (1942ರ ಕೇಂದ್ರಾಧಿನಿಯಮ7) ಮೇರೆಗೆ ರಚಿತವಾದ ಕಾಫಿ ಮಂಡಲಿಗೆ ಮಾರಾಟ ಮಾಡುವುದಕ್ಕೆ

– ಅನ್ವಯವಾಗತಕ್ಕದ್ದಲ್ಲ.

(2) ಭೂಮಿಯನ್ನು ಅಥವಾ ಅದರಲ್ಲಿನ ಹಿತಾಸಕ್ತಿಯನ್ನು ಆರ್ಜಿಸುವ (1)ನೇ ಉಪಪ್ರಕರಣದ (ಬಿ) ಖಂಡದಲ್ಲಿ ಉಲ್ಲೇಖಿಸಿರುವ ಸಂಸ್ಥೆಗಳು, ನಿಯಮಿಸಿದ ಅವಧಿಯೊಳಗೆ ಆ ಭೂಮಿಯನ್ನು ಅಥವಾ ಅದರಲ್ಲಿನ ಹಿತಾಸಕ್ತಿಯನ್ನು ಮಾರಾಟದ ಮೂಲಕ ವಿಲೆ ಮಾಡತಕ್ಕದ್ದು:

ಪರಂತು, ಭೂಮಿಯನ್ನು ಹಾಗೆ ಮಾರಾಟ ಮಾಡುವವರೆಗೆ ಒಂದು ಸಲಕ್ಕೆ ಒಂದು ವರ್ಷಕ್ಕೆ ಮೀರದ ಅವಧಿಯವರೆಗೆ ಗೇಣಿಗೆ ಕೊಡಬಹುದು ಮತ್ತು ಆ ಭೂಮಿಯನ್ನು ಮಾರಾಟ ಮಾಡಿದಾಗ ಅಥವಾ ಒಂದು ವರ್ಷವು ಮುಕ್ತಾಯವಾದಾಗ ಇವುಗಳಲ್ಲಿ ಯಾವುದು ಮೊದಲೋ ಆಗ ಗೇಣಿಯು ಕೊನೆಗೊಳ್ಳತಕ್ಕದ್ದು ಮತ್ತು ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ತದ್ವಿರುದ್ಧವಾದುದು ಏನೇ ಇದ್ದರೂ ಗೇಣಿದಾರನು, ಆ ಭೂಮಿಯಲ್ಲಿ ಗೇಣಿದಾರನಾಗಿ ತಾನು ಹೊಂದಿರುವ ಅಧಿಕಾರದ ಹೊರತು ಬೇರೆ ಯಾವ ಅಧಿಕಾರಕ್ಕೂ ಹಕ್ಕುಳ್ಳವನಾಗಿರತಕ್ಕದ್ದಲ್ಲ.

(3) ಈ ಪ್ರಕರಣದ ಮೇರೆಗೆ ಸಂಸ್ಥೆಯು ಮಾಡುವ ಯಾವುದೇ ಮಾರಾಟವು ಈ ಅಧಿನಿಯಮದ ಇತರ ಉಪಬಂಧಗಳಿಗೆ ಒಳಪಟ್ಟಿರತಕ್ಕದ್ದು.][1]\

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**81ಎ. ಕೆಲವು ಸಂದರ್ಭಗಳಲ್ಲಿ ನೋಂದಣಿ ಪ್ರಾಧಿಕಾರಿಯ ಮುಂದೆ ಘೋಷಣೆ ಮಾಡುವುದು.**– (1) ಮಾರಾಟದ, ದಾನದ, ವಿನಿಮಯದ, ಗೇಣಿಯ, [2][ಸ್ವಾಧೀನಸಹಿತ ಅಡಮಾನದ][2,] ಬಿಟ್ಟು ಕೊಡುವುದರ, ಒಪ್ಪಂದ, ಒಡಂಬಡಿಕೆ ಮೂಲಕವಾಗಲಿ ಅಥವಾ ಅನ್ಯಥಾ ಆಗಲಿ ಭೂಮಿಯ ಯಾವುದೇ ವರ್ಗಾವಣೆಗೆ ಸಂಬಂಧಿಸಿದ ಯಾವುದೇ ದಸ್ತಾವೇಜನ್ನು ವರ್ಗಾವಣೆ ಪಡೆದವನು ತಾನು ಹೊಂದಿರುವ ಭೂಮಿಯ ಒಟ್ಟು ವಿಸ್ತೀರ್ಣದ [3][ಮತ್ತು ತನ್ನ ಖಚಿತ ವಾರ್ಷಿಕ ವರಮಾನದ ಬಗ್ಗೆ ಘೋಷಣೆಯನ್ನು][3] ನಿಯಮಿಸಬಹುದಾದಂಥ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಲಿಖಿತದಲ್ಲಿ ಘೋಷಣೆಯನ್ನು ಮಾಡಿದ್ದ ಹೊರತು ಮತ್ತು ಭಾರತ ನೋಂದಣಿ ಅಧಿನಿಯಮ, 1908ರ (1908ರ ಕೇಂದ್ರಾಧಿನಿಯಮ 16) ಮೇರೆಗೆ ನೋಂದಣಿ ಪ್ರಾಧಿಕಾರಿಯ ಮುಂದೆ ಅದನು ದಾಖಲು ಮಾಡಿದ ಹೊರತು, ನೋಂದಣಿ ಮಾಡತಕ್ಕದ್ದಲ್ಲ.][1]

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1966ರ ಅಧಿನಿಯಮ ಸಂಖ್ಯೆ 38ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಉಪಪ್ರಕರಣ (1)ರಲ್ಲಿ ಉಲ್ಲೇಖಿಸಿದ ನೋಂದಣಿ ಪ್ರಾಧಿಕಾರಿಯು, ವರ್ಗಾವಣೆಯಾದ ಭೂಮಿಯು ಅಥವಾ ಅದರ ಹೆಚ್ಚಿನ ಭಾಗವು ನಿಯಮಿಸಿದ ಯಾವ ಅಧಿಕಾರಿಯ ಅಧಿಕಾರ ವ್ಯಾಪ್ತಿಯೊಳಗೆ ಇದೆಯೋ ಆ ಅಧಿಕಾರಿಗೆ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಘೋಷಣೆಯ ಒಂದು ಪ್ರತಿಯನ್ನು ನಿಯಮಿಸಬಹುದಾದಂಥ ಕಾಲದೊಳಗೆ ಹಾಗೂ ಅಂಥ ರೀತಿಯಲ್ಲಿ ಕಳುಹಿಸಿಕೊಡತಕ್ಕದ್ದು.

(3) ಉಪಪ್ರಕರಣ (2)ರ ಮೇರೆಗೆ ಘೋಷಣೆಯ ಪ್ರತಿಯು ತಲುಪಿದ ಮೇಲೆ ನಿಯಮಿಸಿದ ಅಧಿಕಾರಿಯು ಅವಶ್ಯವಾಗಬಹುದಾದಂಥ ಮಾಹಿತಿಯನ್ನು ಪಡೆಯಬಹುದು ಮತ್ತು ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಮತ್ತು ಈ ಬಗ್ಗೆ ರಚಿಸಬಹುದಾದಂಥ ನಿಯಮಗಳಿಗನುಸಾರವಾಗಿ ಸೂಕ್ತವೆಂದು ತಾನು ಭಾವಿಸುವಂಥ ಕ್ರಮವನ್ನು ಕೈಗೊಳ್ಳಬಹುದು.][1]

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**82. ಕಾನೂನು ಬಾಹಿರ ವ್ಯವಹಾರಗಳನ್ನು ವರದಿ ಮಾಡುವುದು.**– ಪ್ರತಿಯೊಬ್ಬ ಗ್ರಾಮಾಧಿಕಾರಿಯು, ಮತ್ತು ರೆವಿನ್ಯೂ ಇಲಾಖೆಯ, ನೋಂದಣಿ ಮತ್ತು ಭೂ ದಾಖಲೆಗಳ ಇಲಾಖೆಯ ಪ್ರತಿಯೊಬ್ಬ ಅಧಿಕಾರಿಯು, ಯಾವುದೇ ಭೂಮಿಯ ಸಂಬಂಧದಲ್ಲಿ ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಉಲ್ಲಂಘಿಸಿ [1][ತಿದ್ದುಪಡಿ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚೆ ಮಾಡಿದ್ದ ಮತ್ತು ನಂತರ ಮಾಡಿರುವ][1] ಯಾವ ವ್ಯವಹಾರವು, ಅಂಥ ಅಧಿಕಾರಿಯ ಗಮನಕ್ಕೆ ಬರುವುದೋ ಆ ಪ್ರತಿಯೊಂದು ವ್ಯವಹಾರವನ್ನು [2][xxx][2] ನಿಯಮಿಸಿದ ಪ್ರಾಧಿಕಾರಿಗೆ [3][xxx][3] ವರದಿ ಮಾಡತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**83. ಕಾನೂನುಬಾಹಿರ ವ್ಯವಹಾರಗಳ ವಿಚಾರಣೆ.–** ನಿಯಮಿಸಿದ ಪ್ರಾಧಿಕಾರಿಯು 82ನೇ ಪ್ರಕರಣದ ಮೇರೆಗೆ ತಮಗೆ ವರದಿ ಮಾಡಿದ ಅಥವಾ ಬೇರೆ ಯಾವುದೇ ರೀತಿಯಲ್ಲಿ ತಮ್ಮ ಗಮನಕ್ಕೆ ಬಂದ, ವ್ಯವಹಾರವು, [1][ತಿದ್ದುಪಡಿ ಅಧಿನಿಯಮವು ಪ್ರಾರಂಭವಾಗುವದಕ್ಕೂ ಮುಂಚೆ ಅಥವಾ ಆನಂತರ][1] ಈ ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸುವ ಮೂಲಕ ಆದದ್ದೇ [2][ಅಥವಾ ಕಾನೂನು ಬಾಹಿರವಾದುದೇ ಅಥವಾ ಅಸಿಂಧುವಾದುದೇ][2] ಎಂಬುದನ್ನು ಸಂಕ್ಷಿಪ್ತ ವಿಚಾರಣೆ ಮಾಡಿದ ನಂತರ ನಿರ್ಧರಿಸತಕ್ಕದ್ದು ಮತ್ತು ತದನುಸಾರವಾಗಿ ಒಂದು ಘೋಷಣೆಯನ್ನು ಮಾಡತಕ್ಕದ್ದು. [1][ತಿದ್ದುಪಡಿ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚೆ ಆಗಿದ್ದ ಮತ್ತು ಆನಂತರ ಆದ][1] ವ್ಯವಹಾರವನ್ನು ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಉಲ್ಲಂಘಿಸುವ ಮೂಲಕ ಆದದ್ದು ಎಂದು, [2][ಕಾನೂನು ಬಾಹಿರವಾದುದೆಂದು ಅಥವಾ ಅಸಿಂಧುವಾದುದೆಂದು][2] ಘೋಷಿಸಲಾಗಿದೆಯೊ ಅಂಥ ಯಾವುದೇ ವ್ಯವಹಾರವು ಅನೂರ್ಜಿತವಾಗತಕ್ಕದ್ದು. ಅಂಥ ವ್ಯವಹಾರಗಳು ಯಾವ ಭೂಮಿಯ ಸಂಬಂಧದಲ್ಲಿ ಆಗಿದೆಯೋ [1][ಆ ಭೂಮಿಯನ್ನು ದಂಡವಾಗಿ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು [3][ಮತ್ತು ಎಲ್ಲಾ ಋಣಭಾರಗಳಿಂದ ಮುಕ್ತವಾಗಿ][3] ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು ಮತ್ತು ಆ ಭೂಮಿಗೆ ಯಾವುದೇ ಹಣವನ್ನು ಸಂದಾಯ ಮಾಡತಕ್ಕದ್ದಲ್ಲ.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 25.11.1980 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ – VI

## ಸಾಗುವಳಿಯಾಗದಿರುವ ಭೂಮಿಗಳ ಸಾಗುವಳಿಗೆ ಉಪಬಂಧಗಳು

**84. ಸಾಗುವಳಿಯಾಗದ ಭೂಮಿಯನ್ನು ಸಾಗುವಳಿ ಮಾಡಲು ಅಗತ್ಯಪಡಿಸುವುದು.–** ಯಾವ ಪ್ರದೇಶದಲ್ಲಿ ಯಾವ ಭೂಮಿಯಿರುವುದೋ ಆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯುಳ್ಳ ಅಸಿಸ್ಟೆಂಟ್ ಕಮೀಷನರರಿಗೆ, ಅಂಥ ಪ್ರದೇಶದೊಳಗಿನ ಯಾವುದೇ ಭೂಮಿಯು ಸಾಕಷ್ಟು ಕಾರಣಗಳಿಲ್ಲದೆ ನಿರಂತರವಾಗಿ ಎರಡು ವರ್ಷಗಳಿಗಿಂತ ಕಡಿಮೆಯಿಲ್ಲದ ಅವಧಿಯವರೆಗೆ ಸಾಗುವಳಿಯಾಗದೆ ಉಳಿದಿದೆಯೆಂದು ಮನದಟ್ಟಾದರೆ, ಅವರು ಭೂ ಒಡೆಯನಿಗೆ ಅಥವಾ ಆ ಭೂಮಿಯ ಸ್ವಾಧೀನವನ್ನು ಹೊಂದಿರುವ ಅಥವಾ ಅದಕ್ಕೆ ಹಕ್ಕುಳ್ಳ ಇತರ ಯಾರೇ ವ್ಯಕ್ತಿಗೆ ನೋಟೀಸನ್ನು ಜಾರಿ ಮಾಡಿ, ಅಂಥ ನೋಟೀಸು ಜಾರಿಯಾದ ದಿನಾಂಕದಿಂದ ಒಂದು ವರ್ಷದೊಳಗಾಗಿ ಆ ಭೂಮಿಯನ್ನು ಸಾಗುವಳಿ ಮಾಡುವಂತೆ ಅಗತ್ಯಪಡಿಸಬಹುದು.

**85. ಸಾಗುವಳಿಯಾಗದ ಭೂಮಿಯನ್ನು ಗೇಣಿಗೆ ಕೊಡಲು ಅಸಿಸ್ಟೆಂಟ್ ಕಮೀಷನರರ ಅಧಿಕಾರ.–** 84ನೇ ಪ್ರಕರಣದ ಮೇರೆಗೆ ನೋಟೀಸು ಜಾರಿಯಾದ ದಿನಾಂಕದಿಂದ ಒಂದು ವರ್ಷದೊಳಗಾಗಿ ಭೂಮಿಯನ್ನು ಸಾಗುವಳಿ ಮಾಡದಿದ್ದರೆ, ಅಸಿಸ್ಟೆಂಟ್ ಕಮೀಷನರರು ನಿಯಮಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ನಂತರ, ಅಂಥ ಸಾಗುವಳಿಯಾಗದಿರುವ ಇಡೀ ಭೂಮಿಯನ್ನು ಅಥವಾ ಅದರ ಭಾಗವನ್ನು ಅಸಿಸ್ಟೆಂಟ್ ಕಮೀಷನರರು ಗೊತ್ತುಪಡಿಸಬಹುದಾದಂಥ ಯುಕ್ತ ಗೇಣಿಯನ್ನು ಗೇಣಿದಾರನು ಕೊಡತಕ್ಕದ್ದೆಂಬ ಷರತ್ತಿನ ಮೇಲೆ ಅಥವಾ ವಿಧಿಸಬಹುದಾದ ಇತರ ನಿಬಂಧನೆಗಳ ಮೇಲೆ ಯಾರೇ ಯೋಗ್ಯ ಗೇಣಿದಾರನಿಗೆ ಐದು ವರ್ಷಗಳಿಗೆ ಮೀರದ ಅವಧಿಗೆ ಗೇಣಿಗೆ ಕೊಡಬಹುದು.

**86. ಗೇಣಿಯ ರದ್ದಿಯಾತಿ.–** 85ನೇ ಪ್ರಕರಣದ ಮೇರೆಗೆ ಯಾರಿಗೆ ಗೇಣಿಯನ್ನು ಮಂಜೂರು ಮಾಡಲಾಗಿದೆಯೊ ಆ ಯಾರೇ ವ್ಯಕ್ತಿಯು 22ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಯಾವುದೇ ಕಾರ್ಯವನ್ನು ಮಾಡಿದಲ್ಲಿ, ಅಸಿಸ್ಟೆಂಟ್ ಕಮೀಷನರರು ಆ ಗೇಣಿಯನ್ನು ರದ್ದು ಮಾಡಬಹುದು ಮತ್ತು ತಾವು ಸೂಕ್ತವೆಂದು ಭಾವಿಸುವಂಥ ನಿಬಂಧನೆಗಳ ಮತ್ತು ಷರತ್ತುಗಳ ಮೇಲೆ ಇತರ ಯಾರೇ ವ್ಯಕ್ತಿಗೆ ಹೊಸದಾಗಿ ಗೇಣಿಯನ್ನು ಮಂಜೂರು ಮಾಡಬಹುದು ಮತ್ತು ಈ ಪ್ರಕರಣದ ಮೇರೆಗೆ ಯಾವ ವ್ಯಕ್ತಿಯ ಗೇಣಿಯನ್ನು ರದ್ದುಮಾಡಲಾಗಿದೆಯೋ ಆ ವ್ಯಕ್ತಿಯು ತನ್ನ ಗೇಣಿಯ ಮೇರೆಗೆ ತನಗಿರುವ ಎಲ್ಲ ಹಕ್ಕುಗಳನ್ನು ಕಳೆದುಕೊಳ್ಳತಕ್ಕದ್ದು ಮತ್ತು ಪ್ರತಿಯೊಂದು ಪ್ರಕರಣದಲ್ಲಿ ಅಸಿಸ್ಟೆಂಟ್ ಕಮೀಷನರರು ನಿರ್ಧರಿಸಬಹುದಾದಂಥ ಹಣವನ್ನು ನಷ್ಟಪರಿಹಾರವಾಗಿ ಕೊಡಲು ಸಹ ಅವನು ಬದ್ಧನಾಗಿರತಕ್ಕದ್ದು. ನಷ್ಟ ಪರಿಹಾರವೆಂದು ಹಾಗೆ ನಿರ್ಧರಿಸಿದ ಹಣವು ಭೂಕಂದಾಯದ ಬಾಕಿಗಳಂತೆ ವಸೂಲಿ ಮಾಡುವಂತದಾಗಿರತಕ್ಕದ್ದು.

**87. ಗೇಣಿ ಪತ್ರವನ್ನು ಕೊಡುವುದು, ಭೂ ಒಡೆಯರ ಹೊಣೆ, ಇತ್ಯಾದಿ.–** (1) ಈ ಅಧ್ಯಾಯದ ಮೇರೆಗೆ ಮಂಜೂರು ಮಾಡಿದ ಪ್ರತಿಯೊಂದು ಗೇಣಿಗೆ ಭೂ ಒಡೆಯನ ಅಥವಾ ಆ ಭೂಮಿಯ ಸ್ವಾಧೀನವನ್ನು ಹೊಂದಲು ಹಕ್ಕುಳ್ಳ ಇತರ ವ್ಯಕ್ತಿಯ ಪರವಾಗಿ ಅಸಿಸ್ಟೆಂಟ್ ಕಮೀಷನರರು ಗೇಣಿ ಪತ್ರವನ್ನು ಕೊಡತಕ್ಕದ್ದು ಮತ್ತು ಯಾರ ಪರವಾಗಿ ಆ ಗೇಣಿ ಪತ್ರವನ್ನು ಕೊಡಲಾಗಿದೆಯೋ ಆ ವ್ಯಕ್ತಿಗೆ ಆ ಗೇಣಿ ಪತ್ರದಲ್ಲಿ ನಮೂದಿಸಿರುವ ಕಾಲದಲ್ಲಿ, ಮತ್ತು ಅಂಥ ರೀತಿಯಲ್ಲಿ ಗೇಣಿದಾರನು ಗೇಣಿಪತ್ರದಲ್ಲಿ ನಿರ್ದಿಷ್ಟಪಡಿಸಿದ ಗೇಣಿಯನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

(2) ಅಸಿಸ್ಟೆಂಟ್ ಕಮೀಷನರು ಯಾರ ಪರವಾಗಿ ಭೂಮಿಯನ್ನು ಗೇಣಿಗೆ ಕೊಟ್ಟಿರುವರೋ ಆ ಭೂ ಒಡೆಯನು ಅಥವಾ ಇತರ ವ್ಯಕ್ತಿಯು, ಈ ಅಧ್ಯಾಯದ ಮೇರೆಗೆ ರಾಜ್ಯ ಸರ್ಕಾರವು ಸಲ್ಲಿಸಿದ ಸೇವೆಗಾಗಿ, ಆ ಭೂಮಿಯ ಭೂಕಂದಾಯದ ನಾಲ್ಕರಷ್ಟಕ್ಕೆ ಸಮನಾದ ಮೊಬಲಗನ್ನು ಸಂದಾಯ ಮಾಡಲು ರಾಜ್ಯ ಸರ್ಕಾರಕ್ಕೆ ಬದ್ಧನಾಗಿರತಕ್ಕದ್ದು ಮತ್ತು ಸದರಿ ಹಣವು ಭೂ ಕಂದಾಯದ ಬಾಕಿಯಂತೆ ವಸೂಲಿ ಮಾಡುವಂತದ್ದಾಗಿರತಕ್ಕದ್ದು.

(3) 8ನೇ ಮತ್ತು 86ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, ಈ ಅಧ್ಯಾಯದ ಮೇರೆಗೆ ಅಸಿಸ್ಟೆಂಟ್ ಕಮೀಷನರರು ಕೊಟ್ಟ ಪ್ರತಿಯೊಂದು ಗೇಣಿ ಪತ್ರವು ಸಿಂಧುವಾದುದು ಆಗಿರತಕ್ಕದ್ದು ಮತ್ತು ಅದರ ನಿಬಂಧನೆಗಳಿಗನುಸಾರವಾಗಿ ಪರಿಣಾಮಕಾರಿಯಾದದು ಆಗಿರತಕ್ಕದ್ದು.

**88. ಗೇಣಿ ಅವಧಿಯ ನಂತರ ಸ್ವಾಧೀನವನ್ನು ಒಪ್ಪಿಸುವುದು.–** ಈ ಅಧ್ಯಾಯದ ಮೇರೆಗೆ ಮಂಜೂರು ಮಾಡಿದ ಗೇಣಿಯ ಅವಧಿಯು ಮುಗಿದ ನಂತರ, ಅಸಿಸ್ಟೆಂಟ್ ಕಮೀಷನರರು ಆ ಭೂಮಿಯನ್ನು ಸ್ವಾಧೀನಕ್ಕೆ ತೆಗೆದು ಕೊಳ್ಳತಕ್ಕದ್ದು ಮತ್ತು ಅಂಥ ಸ್ವಾಧೀನವನ್ನು ಪಡೆಯಲು ಹಕ್ಕುಳ್ಳ ವ್ಯಕ್ತಿಗೆ ಅದರ ಸ್ವಾಧೀನವನ್ನು ಒಪ್ಪಿಸತಕ್ಕದ್ದು.

## ಅಧ್ಯಾಯ – VII

## ಸಹಕಾರ ಕೃಷಿ ಕ್ಷೇತ್ರಗಳು

**89. ಸಹಕಾರ ಕೃಷಿ ಕ್ಷೇತ್ರದ ರಚನೆ.–** ಒಂದು ಗ್ರಾಮದ ಅಥವಾ ಅಕ್ಕಪಕ್ಕದ ಎರಡು ಅಥವಾ ಹೆಚ್ಚು ಗ್ರಾಮಗಳ ಹತ್ತು ಅಥವಾ ಹೆಚ್ಚು ಜನರು, ಅಂಥ ಗ್ರಾಮದಲ್ಲಿ ಅಥವಾ ಅಕ್ಕಪಕ್ಕದ ಗ್ರಾಮಗಳಲ್ಲಿ ಐವತ್ತು ಅಥವಾ ಅದಕ್ಕಿಂತ ಹೆಚ್ಚು ಎಕರೆಗಳ ಮೇಲೆ ಭೂ ಒಡೆಯರಾಗಿ ಅಥವಾ ಗೇಣಿದಾರರಾಗಿ ಹಕ್ಕುಗಳನ್ನು ಹೊಂದಿದ್ದರೆ ಮತ್ತು ಅವುಗಳ ಸ್ವಾಧೀನವನ್ನು ಹೊಂದಿದ್ದರೆ ಅವರು ಹಾಗೆ ಧಾರಣ ಮಾಡಿರುವ ಮತ್ತು ಸ್ವಾಧೀನ ಹೊಂದಿರುವ ಭೂಮಿಯನ್ನು ಒಳಗೊಂಡ ಒಂದು ಸಹಕಾರ ಕೃಷಿ ಕ್ಷೇತ್ರವನ್ನು ಪ್ರಾರಂಭಿಸಬೇಕೆಂದು ಬಯಸಿದರೆ ಅದರ ನೋಂದಣಿಗಾಗಿ ಅವರು [1][ಕರ್ನಾಟಕ ಸಹಕಾರ ಸಂಘಗಳ ರಿಜಿಸ್ಟ್ರಾರರಿಗೆ][1] (ಇದರಲ್ಲಿ ಇನ್ನು ಮುಂದೆ ರಿಜಿಸ್ಟ್ರಾರರು ಎಂದು ಉಲ್ಲೇಖಿಸಲಾಗಿದೆ) ನಿಯಮಿಸಿದ ನಮೂನೆಯಲ್ಲಿ ಲಿಖಿತದಲ್ಲಿ ಅರ್ಜಿ ಸಲ್ಲಿಸಬಹುದು.

**ವಿವರಣೆ.–** ಈ ಅಧ್ಯಾಯದ ಮೇರೆಗೆ ಯಾವುದೇ ಗ್ರಾಮದಲ್ಲಿ ಒಂದಕ್ಕಿಂತ ಹೆಚ್ಚು ಸಹಕಾರ ಕೃಷಿ ಕ್ಷೇತ್ರಗಳನ್ನು ನೋಂದಣಿ ಮಾಡಬಹುದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

**90. ನೋಂದಣಿಗಾಗಿ ಅರ್ಜಿ.–** ಸಹಕಾರ ಕೃಷಿ ಕ್ಷೇತ್ರದ ನೋಂದಣಿಗಾಗಿ ಸಲ್ಲಿಸುವ ಅರ್ಜಿಯ ಜೊತೆಗೆ ಆ ಗ್ರಾಮದಲ್ಲಿ ಅಥವಾ ಅಕ್ಕಪಕ್ಕದ ಗ್ರಾಮಗಳಲ್ಲಿ ಅರ್ಜಿದಾರಲ್ಲಿ ಪ್ರತಿಯೊಬ್ಬನು ಧಾರಣ ಮಾಡಿರುವ ಎಲ್ಲ ಜಮೀನುಗಳ ಸರ್ವೆ ನಂಬರುಗಳೊಂದಿಗೆ ಒಟ್ಟು ವಿಸ್ತೀರ್ಣವನ್ನು ತೋರಿಸುವ ಹಕ್ಕುಗಳ ದಾಖಲೆಯ ಅಥವಾ ಇತರ ದಾಖಲೆಗಳ ಉದ್ಧೃತ ಭಾಗಗಳು ಇರತಕ್ಕದ್ದು ಮತ್ತು ನಿಯಮಿಸಬಹುದಾದಂಥ ಇತರ ವಿವರಗಳನ್ನು ಅದು ಒಳಗೊಂಡಿರತಕ್ಕದ್ದು.

**91. ಸಹಕಾರ ಕೃಷಿ ಕ್ಷೇತ್ರದ ನೋಂದಣಿ.–** (1) ನಿಯಮಿಸಬಹುದಾದಂಥ ವಿಚಾರಣೆಯನ್ನು ಮಾಡಿದ ನಂತರ, ರಿಜಿಸ್ಟ್ರಾರರು, ಸಹಕಾರ ಕೃಷಿ ಕ್ಷೇತ್ರವನ್ನು ನೋಂದಣಿ ಮಾಡುವುದು ಸಂಬಂಧಪಟ್ಟ ಎಲ್ಲರ ಹಿತದೃಷ್ಟಿಗೆ ತುಂಬಾ ಅನುಗುಣವಾಗಿದೆ ಎಂದು ತನಗೆ ಮನದಟ್ಟಾದರೆ [1][ಕರ್ನಾಟಕ][1] ಸಹಕಾರ ಸಂಘಗಳ ಅಧಿನಿಯಮ, 1959ರ ಮೇರೆಗೆ ಆ ಸಹಕಾರ ಕೃಷಿ ಕ್ಷೇತ್ರವನ್ನು ನೋಂದಣಿ ಮಾಡತಕ್ಕದ್ದು ಮತ್ತು ನೋಂದಣಿಯ ಪ್ರಮಾಣ ಪತ್ರವನ್ನು ಕೊಡತಕ್ಕದ್ದು.

(2) ರಿಜಿಸ್ಟ್ರಾರರು ಪ್ರಮಾಣಪತ್ರದ ಒಂದು ಪ್ರತಿಯನ್ನು ನಿಯಮಿಸಬಹುದಾದಂಥ ಕ್ರಮವನ್ನು ಕೈಕೊಳ್ಳುವುದಕ್ಕಾಗಿ ಡೆಪ್ಯೂಟಿ ಕಮೀಷನರರಿಗೆ ಕಳುಹಿಸಿಕೊಡತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

**92. ಕೃಷಿ ಕ್ಷೇತ್ರಕ್ಕೆ ಸದಸ್ಯರ ಭೂಮಿಯ ವರ್ಗಾವಣೆ.–** (1) 91ನೇ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಒಂದು ಸಹಕಾರ ಕೃಷಿ ಕ್ಷೇತ್ರವನ್ನು ನೋಂದಣಿ ಮಾಡಿಸಿದಾಗ ಆ ಗ್ರಾಮದಲ್ಲಿ ಅಥವಾ ಅಕ್ಕಪಕ್ಕದ ಗ್ರಾಮಗಳಲ್ಲಿ ಸದಸ್ಯನು ಧಾರಣ ಮಾಡಿರುವ, ಹಾಗೂ ಯಾವ ಜಮೀನುಗಳ ಸಂಬಂಧವಾಗಿ ಸಹಕಾರ ಕೃಷಿ ಕ್ಷೇತ್ರವನ್ನು ನೋಂದಾಯಿಸಲಾಗಿದೆಯೋ ಆ ಎಲ್ಲಾ ಜಮೀನುಗಳ ಸ್ವಾಧೀನವು, ಸಹಕಾರ ಕೃಷಿ ಕ್ಷೇತ್ರದ ನೋಂದಣಿಯು ರದ್ದಾಗದಿರುವವರೆಗೆ, ಸಹಕಾರ ಕೃಷಿ ಕ್ಷೇತ್ರಕ್ಕೆ ವರ್ಗಾವಣೆಯಾಗತಕ್ಕದ್ದು ಮತ್ತು ಆನಂತರ ಅಂಥ ಭೂಮಿಯನ್ನು ಆ ಕೃಷಿ ಕ್ಷೇತ್ರವು ಧಾರಣ ಮಾಡತಕ್ಕದ್ದು ಮತ್ತು ಅದನ್ನು ಬೇಸಾಯದ ಉದ್ದೇಶಗಳಿಗಾಗಿ ಬಳಸಬಹುದು.

(2) ಸಹಕಾರ ಕೃಷಿ ಕ್ಷೇತ್ರವು ನೋಂದಣಿಯಾದ ಮೇಲೆ ಯಾರೇ ವ್ಯಕ್ತಿಯನ್ನು ಅದರ ಸದಸ್ಯನಾಗಿ ಸೇರಿಸಿಕೊಂಡರೆ, ಅವನು ಧಾರಣ ಮಾಡಿರುವ ಮತ್ತು ಅವನ ಸ್ವಾಧೀನದಲ್ಲಿರುವ ಯಾವ ಭೂಮಿಗಳ ಸಂಬಂಧದಲ್ಲಿ ಅವನು ಸದಸ್ಯನಾಗುವನೋ ಆ ಭೂಮಿಗಳ ಸ್ವಾಧೀನವು ಸಹಕಾರ ಕೃಷಿ ಕ್ಷೇತ್ರಕ್ಕೆ ವರ್ಗಾವಣೆಯಾಗತಕ್ಕದ್ದು.

(3) ಸಹಕಾರ ಕೃಷಿ ಕ್ಷೇತ್ರದ ಯಾರೇ ಸದಸ್ಯನೂ ನಿಯಮಿಸಬಹುದಾದಂಥ ಷರತ್ತುಗಳನ್ನು ಈಡೇರಿಸಿದ ಹೊರತು ತನ್ನ ಸದಸ್ಯತ್ವವನ್ನು ಹಿಂತೆಗೆದುಕೊಳ್ಳತಕ್ಕದ್ದಲ್ಲ.

(4) ಯಾರೇ ವ್ಯಕ್ತಿಯು ಸಹಕಾರ ಕೃಷಿ ಕ್ಷೇತ್ರದ ಸದಸ್ಯತ್ವವನ್ನು ಹಿಂತೆಗೆದುಕೊಂಡ ಮೇಲೆ, ಯಾವ ಭೂಮಿಗಳ ಸಂಬಂಧದಲ್ಲಿ ಅವನು ಸದಸ್ಯನಾಗಿದ್ದನೋ ಆ ಭೂಮಿಗಳ ಸ್ವಾಧೀನವನ್ನು ನಿಯಮಿಸಬಹುದಾದಂಥ ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟು, ಸಹಕಾರ ಕೃಷಿ ಕ್ಷೇತ್ರವು ಅಂಥ ವ್ಯಕ್ತಿಗೆ ವರ್ಗಾಯಿಸತಕ್ಕದ್ದು.

**93. ನೋಂದಣಿಯ ಪರಿಣಾಮಗಳು.–** 91ನೇ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಯಾವುದೇ ಸಹಕಾರ

ಕೃಷಿ ಕ್ಷೇತ್ರಕ್ಕೆ ನೋಂದಣಿ ಪ್ರಮಾಣಪತ್ರವನ್ನು ನೀಡಿದ್ದರೆ [1][ಕರ್ನಾಟಕ][1] ಸಹಕಾರ ಸಂಘಗಳ ಅಧಿನಿಯಮ, 1959ರ ಉಪಬಂಧಗಳು ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳು, ಈ ಅಧಿನಿಯಮದ ಉಪಬಂಧಗಳಿಗೆ ಅಥವಾ ಅದರ ಮೇರೆಗೆ ರಚಿತವಾದ ನಿಯಮಗಳಿಗೆ ಅಸಂಗತವಾಗದಿರುವಷ್ಟರಮಟ್ಟಿಗೆ, ಸಹಕಾರ ಕೃಷಿ ಕ್ಷೇತ್ರಕ್ಕೆ ಅನ್ವಯವಾಗತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

**94. ಕೃಷಿ ಕ್ಷೇತ್ರದ ಉಪವಿಧಿಗಳು.–** 90ನೇ ಪ್ರಕರಣದ ಮೇರೆಗೆ ಸಲ್ಲಿಸುವ ಪ್ರತಿಯೊಂದು ಅರ್ಜಿಯೊಂದಿಗೆ ಸಹಕಾರ ಕೃಷಿ ಕ್ಷೇತ್ರದ ಉದ್ದೇಶಿತ ಉಪವಿಧಿಗಳ ಒಂದು ಪ್ರತಿಯು ಇರತಕ್ಕದ್ದು ಮತ್ತು ಅಂಥ ಉಪವಿಧಿಗಳನ್ನು, [1][ಕರ್ನಾಟಕ][1] ಸಹಕಾರ ಸಂಘಗಳ ಅಧಿನಿಯಮ, 1959ರ ಉಪಬಂಧಗಳ ಮೇರೆಗೆ ದಾಖಲು ಮಾಡಬೇಕಾಗಿರುವ ಉಪವಿಧಿಗಳೆಂದು ಭಾವಿಸತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

**95. ರಿಜಿಸ್ಟ್ರಾರರಿಂದ ಉಪವಿಧಿಗಳಿಗೆ ತಿದ್ದುಪಡಿ.–** ರಿಜಿಸ್ಟ್ರಾರರು ಸಹಕಾರ ಕೃಷಿ ಕ್ಷೇತ್ರದ ಬಹುಸಂಖ್ಯಾತ ಸದಸ್ಯರು ಸಲ್ಲಿಸಿದ ಅರ್ಜಿಯ ಮೇಲೆ ಅಥವಾ ತಾವಾಗಿಯೇ, ನಿಯಮಿಸಬಹುದಾದಂಥ ರೀತಿಯಲ್ಲಿ ಸಹಕಾರ ಕೃಷಿ ಕ್ಷೇತ್ರಕ್ಕೆ ನೋಟೀಸನ್ನು ಕೊಟ್ಟ ನಂತರ ಮತ್ತು ಅಹವಾಲನ್ನು ಹೇಳಿಕೊಳ್ಳಲು ಆ ಕೃಷಿ ಕ್ಷೇತ್ರಕ್ಕೆ ಅವಕಾಶವನ್ನು ಕೊಟ್ಟ ನಂತರ, ಯಾವುದೇ ಕಾಲದಲ್ಲಿ ಉಪವಿಧಿಗಳಿಗೆ ತಿದ್ದುಪಡಿ ಮಾಡಬಹುದು.

**96. ಕೃಷಿ ಕ್ಷೇತ್ರಕ್ಕೆ ಕೊಟ್ಟ ಭೂಮಿಯು ಭೂ ಒಡೆಯನಲ್ಲಿ ನಿಹಿತವಾಗಿರುವುದು ಮುಂದುವರೆಯುವುದು.–** ಈ ಅಧ್ಯಾಯದಲ್ಲಿರುವುದು ಯಾವುದೂ, ಸಹಕಾರ ಕೃಷಿ ಕ್ಷೇತ್ರಕ್ಕೆ ಭೂ ಒಡೆಯನು ಅಥವಾ ಅವನ ಪರವಾಗಿ ಕೊಟ್ಟ ಭೂಮಿಯಲ್ಲಿ ಭೂ ಒಡೆಯನ ಒಡೆತನದ ಹಕ್ಕು ಅವನಲ್ಲಿ ನಿಹಿತವಾಗಿರುವುದನ್ನು ಕೊನೆಗಾಣಿಸುವುದೆಂದು ಭಾವಿಸತಕ್ಕದ್ದಲ್ಲ.

**97. ಸದಸ್ಯರ ಹಕ್ಕುಗಳು, ವಿಶೇಷಾಧಿಕಾರಗಳು, ಇತ್ಯಾದಿ.–** ಸಹಕಾರ ಕೃಷಿ ಕ್ಷೇತ್ರದ ಪ್ರತಿಯೊಬ್ಬ ಸದಸ್ಯನೂ ನಿಯಮಿಸಬಹುದಾದಂಥ ಹಕ್ಕುಗಳಿಗೆ ಮತ್ತು ವಿಶೇಷಾಧಿಕಾರಗಳಿಗೆ ಹಕ್ಕುಳ್ಳವನಾಗಿರತಕ್ಕದ್ದು, ಅಂಥ ಬಾಧ್ಯತೆಗಳಿಗೆ ಮತ್ತು ಹೊಣೆಗಾರಿಕೆಗಳಿಗೆ ಒಳಪಟ್ಟಿರತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ನಿರ್ವಹಿಸಲು ಬದ್ಧನಾಗಿರತಕ್ಕದ್ದು.

**98. ಸದಸ್ಯನಿಂದ ಕೊಡುಗೆ.–** ನಿಯಮಿಸಬಹುದಾದಂತಹ ವಿನಾಯಿತಿಗಳಿಗೆ ಒಳಪಟ್ಟು, ಪ್ರತಿಯೊಬ್ಬ ಸದಸ್ಯನು ನಿಯಮಿಸಿದ ಪ್ರಮಾಣದಲ್ಲಿ ಮತ್ತು ನಿಯಮಿಸಿದ ರೀತಿಯಲ್ಲಿ ಸಹಕಾರ ಕೃಷಿ ಕ್ಷೇತ್ರಕ್ಕೆ,–

(i) ನಿಧಿಗಳನ್ನು;

(ii) ಸ್ವಯಂ ದುಡಿಮೆಯನ್ನು;

(iii) ಕೃಷಿ ಉಪಕರಣಗಳನ್ನು, ಕೃಷಿಗೆ ಬಳಸುವ ರಾಸುಗಳನ್ನು ಮತ್ತು ನಿಯಮಿಸಬಹುದಾದಂಥ ಇತರ ವಸ್ತುಗಳನ್ನು

– ಒದಗಿಸಲು ಬದ್ಧನಾಗಿರತಕ್ಕದ್ದು.

**99. ಭೂ ಕಂದಾಯಕ್ಕೆ ಮತ್ತು ಇತರ ಬಾಕಿಗಳಿಗೆ ಕೃಷಿ ಕ್ಷೇತ್ರದ ಹೊಣೆಗಾರಿಕೆ.–** ಸಹಕಾರ ಕೃಷಿ ಕ್ಷೇತ್ರವು, ಅದು ಯಾವ ದಿನಾಂಕದಂದು ರಚಿತವಾಯಿತೊ ಅಥವಾ ಹೊಸ ಸದಸ್ಯನನ್ನು ಯಾವ ದಿನಾಂದಂದು ಸೇರಿಸಿಕೊಳ್ಳಲಾಯಿತೋ, ಆ ದಿನಾಂಕದಿಂದ 92ನೇ ಪ್ರಕರಣದ ಮೇರೆಗೆ ಅದಕ್ಕೆ ಯಾವ ಭೂಮಿಯ ಸ್ವಾಧೀನವು ವರ್ಗಾವಣೆಯಾಯಿತೋ ಆ ಭೂಮಿಗೆ ಭೂ ಒಡೆಯನು ಸಂದಾಯ ಮಾಡಬೇಕಾದ ಎಲ್ಲಾ ಭೂ ಕಂದಾಯವನ್ನು, ಉಪಕರಗಳನ್ನು, ನೀರು ದರವನ್ನು, ಅಭಿವೃದ್ಧಿ ವಂತಿಗೆಯನ್ನು ಮತ್ತು ಸ್ಥಳೀಯ ತೆರಿಗೆಗಳನ್ನು ಸಂದಾಯ ಮಾಡಲು ಹೊಣೆಯಾಗಿರತಕ್ಕದ್ದು.

**100. ಹೊಸ ಸದಸ್ಯರ ಸೇರ್ಪಡೆ.–** ಸಹಕಾರ ಕೃಷಿ ಕ್ಷೇತ್ರವು ಯಾವ ಗ್ರಾಮದಲ್ಲಿದೆಯೋ ಆ ಗ್ರಾಮದ ಅಥವಾ ಅಕ್ಕಪಕ್ಕದ ಗ್ರಾಮಗಳ ನಿವಾಸಿಯಾಗಿರುವ ಯಾರೇ ವ್ಯಕ್ತಿಯನ್ನು ನಿಯಮಿಸಬಹುದಾದಂತಹ ನಿಬಂಧನೆಗಳ ಮತ್ತು ಷರತ್ತುಗಳ ಮೇಲೆ ಅದರ ಸದಸ್ಯನನ್ನಾಗಿ ಸೇರಿಸಿಕೊಳ್ಳಬಹುದು.

**101. ವಾರಸುದಾರರನ್ನು ಸಹಕಾರ ಕೃಷಿ ಕ್ಷೇತ್ರದ ಸದಸ್ಯರೆಂದು ಭಾವಿಸುವುದು.–** ಯಾವ ಸದಸ್ಯನ ಭೂಮಿಯು ಸಹಕಾರ ಕೃಷಿ ಕ್ಷೇತ್ರದಲ್ಲಿ ಒಳಗೊಂಡಿದೆಯೋ ಆ ಸದಸ್ಯನು ಮರಣ ಹೊಂದಿದರೆ, ಅವನ ವಾರಸುದಾರರು ಆ ಸಹಕಾರ ಕೃಷಿ ಕ್ಷೇತ್ರದ ಸದಸ್ಯರಾಗಿರುವರೆಂದು ಭಾವಿಸತಕ್ಕದ್ದು.

**102. ಸಹಕಾರ ಕೃಷಿ ಕ್ಷೇತ್ರಕ್ಕೆ ರಿಯಾಯಿತಿಗಳು ಮತ್ತು ಸೌಲಭ್ಯಗಳು.–** (1) ಸಹಕಾರ ಕೃಷಿ ಕ್ಷೇತ್ರವು ನಿಯಮಿಸಬಹುದಾದಂತಹ ರಿಯಾಯಿತಿಗಳಿಗೆ ಮತ್ತು ಸೌಲಭ್ಯಗಳಿಗೆ ಹಕ್ಕಳ್ಳದ್ದಾಗಿರತಕ್ಕದ್ದು,

(2) ಹಿಂದೆ ಹೇಳಿದ ಉಪಬಂಧದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ, ನಿಯಮಿಸಿದ ರಿಯಾಯಿತಿಗಳಲ್ಲಿ ಮತ್ತು ಸೌಲಭ್ಯಗಳಲ್ಲಿ ಈ ಕೆಳಗಿನವುಗಳು ಒಳಗೊಂಡಿರತಕ್ಕದ್ದು,–

(ಎ) ಭೂ ಕಂದಾಯದ ಇಳಿಕೆ;

(ಬಿ) ಕೃಷಿ ವರಮಾನ ತೆರಿಗೆಯ ಇಳಿಕೆ ಅಥವಾ ವಿನಾಯಿತಿ;

(ಸಿ) ಸರ್ಕಾರದಿಂದ ನಿಯೋಜಿತರಾದ ತಜ್ಞರಿಂದ ಉಚಿತ ತಾಂತ್ರಿಕ ಸಲಹೆ;

(ಡಿ) ಆರ್ಥಿಕ ನೆರವು ಮತ್ತು ಸಹಾಯಧನ ಮಂಜೂರು ಮತ್ತು ಬಡ್ಡಿ ಸಹಿತ ಅಥವಾ ಬಡ್ಡಿರಹಿತ ಸಾಲಗಳ ನೀಡಿಕೆ;

(ಇ) ರಾಜ್ಯದ ನೀರಾವರಿ ಕಾಮಗಾರಿಗಳಿಂದ ನೀರಾವರಿಯಲ್ಲಿ ಆದ್ಯತೆ.

(3) ಈ ಪ್ರಕರಣದ ಉದ್ದೇಶಗಳಿಗಾಗಿ, ಸಹಕಾರ ಸಂಘಗಳ ನೋಂದಣಿಗೆ ಸಂಬಂಧಿಸಿದ ಕಾನೂನು ಮೇರೆಗೆ ಗೊತ್ತುಪಡಿಸಿದ ದಿನಕ್ಕೆ ಮುಂಚಿತವಾಗಿ ಸಹಕಾರ ಕೃಷಿ ಕ್ಷೇತ್ರ ಸಂಘವಾಗಿ ನೋಂದಾಯಿತವಾದ ಸಹಕಾರ ಸಂಘವನ್ನು ಸಹಕಾರ ಕೃಷಿ ಕ್ಷೇತ್ರವು ಒಳಗೊಂಡಿದೆಯೆಂದು ಭಾವಿಸತಕ್ಕದ್ದು.

## ಅಧ್ಯಾಯ – VIII

## ವಿನಾಯಿತಿಗಳು

[1][**103.** x x x][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**104. ಪ್ಲಾಂಟೇಷನ್‌ಗಳು.–** [2][38ನೇ ಪ್ರಕರಣದ ಉಪಬಂಧಗಳು,][2] 63ನೇ ಪ್ರಕರಣದ (9)ನೇ ಉಪಪ್ರಕರಣವನ್ನು ಹೊರತುಪಡಿಸಿ ಆ ಪ್ರಕರಣವು, 64, 79ಎ, 79ಬಿ ಮತ್ತು 80ನೇ ಪ್ರಕರಣಗಳ ಉಪಬಂಧಗಳು ಪ್ಲಾಂಟೇಷನ್‌ಗಳಿಗೆ ಅನ್ವಯವಾಗತಕ್ಕದ್ದಲ್ಲ.

**ವಿವರಣೆ.–** ಈ ಪ್ರಕರಣದಲ್ಲಿ **"ಪ್ಲಾಂಟೇಷನ್"** ಎಂದರೆ, ಪ್ರಮುಖವಾಗಿ ಪ್ಲಾಂಟೇಷನ್ ಬೆಳೆ ಬೆಳೆಯುವುದಕ್ಕಾಗಿ ವ್ಯಕ್ತಿಯು ಬಳಸಿದ ಭೂಮಿ ಮತ್ತು ನಿಯಮಿಸಿದ ಪ್ರಾಧಿಕಾರಿಯು ಅಂಥ ಸಾಗುವಳಿಯ ರಕ್ಷಣೆಗೆ ಮತ್ತು ಸಮರ್ಥ ನಿರ್ವಹಣೆಗೆ ಅವಶ್ಯವೆಂದು ನಿರ್ಧರಿಸಬಹುದಾದಷ್ಟು ವಿಸ್ತೀರ್ಣವನ್ನು ಮೀರದಂಥ,–

(i) ಅಂಥ ವ್ಯಕ್ತಿಯು, ಅಂಥ ಬೆಳೆಯನ್ನು ಬೆಳೆಯುವುದಕ್ಕೆ ಸಹಾಯಕವಾಗುವ ಯಾವುದೇ ಉದ್ದೇಶಕ್ಕಾಗಿ ಅಥವಾ ಆ ಬೆಳೆಯನ್ನು ವಿಕ್ರಯಕ್ಕೆ ಸಿದ್ಧಪಡಿಸುವುದಕ್ಕಾಗಿ ಬಳಸಿದ ಯಾವುದೇ ಭೂಮಿಯನ್ನು; ಮತ್ತು

(ii) ಅಂಥ ವ್ಯಕ್ತಿಯು ಅಂಥ ಬೆಳೆಯನ್ನು ಬೆಳೆದಿರುವ ಪ್ರದೇಶದ ಎಲ್ಲೆಗಳೊಳಗೆ ಅಲ್ಲಲ್ಲಿ ಇರುವ ಕೃಷಿ ಭೂಮಿಯನ್ನು

– ಅದು ಒಳಗೊಳ್ಳುತ್ತದೆ.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**105.** x x x][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**106. ಧಾರ್ಮಿಕ ಸಂಸ್ಥೆ ಮೊದಲಾದವುಗಳಿಗೆ ಸಂದಾಯ ಮಾಡಬೇಕಾದ ಮೊಬಲಗು.**– (1) ಸ್ವತ್ತನ್ನು ಧಾರಣ ಮಾಡುವ ಸಾಮರ್ಥ್ಯವಿರುವ ಧಾರ್ಮಿಕ, ಧರ್ಮಾದಾಯ ಅಥವಾ ಇತರ ಸಂಸ್ಥೆಗೆ ಸಂದಾಯ ಮಾಡಬೇಕಾದ ಮೊಬಲಗಿನ ಸಂಬಂಧದಲ್ಲಿ, ಈ ಪ್ರಕರಣದ (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಮಾರ್ಪಾಟುಗಳಿಗೊಳಪಟ್ಟು, 47ನೇ, 50ನೇ ಮತ್ತು 51ನೇ ಪ್ರಕರಣಗಳ ಉಪಬಂಧಗಳು ಪರಿಣಾಮಕಾರಿಯಾಗಿರತಕ್ಕದ್ದು.

(2) ಅಂಥ ಸಂಸ್ಥೆಯು ಧಾರಣ ಮಾಡಿರುವ ಮತ್ತು ಅಧಿನಿಯಮದ ಉಪಬಂಧಗಳ ಮೇರೆಗೆ ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರುವ ಭೂಮಿಗಳ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಮೊಬಲಗು, ಆ ಸಂಸ್ಥೆಯು ಅಸ್ತಿತ್ವದಲ್ಲಿರುವವರೆಗೆ ಸಂದಾಯ ಮಾಡಬೇಕಾದ, 72ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ನಿವ್ವಳ ವಾರ್ಷಿಕ ಆದಾಯಕ್ಕೆ ಸಮನಾದ ಮೊತ್ತದ ಅನ್ಯೂಇಟಿ ಆಗಿರತಕ್ಕದ್ದು. ಸಂದಾಯ ಮಾಡಬೇಕಾದ ಅನ್ಯೂಇಟಿ ಬಾಬ್ತು ಹಸ್ತಾಂತರಣೀಯವಲ್ಲದ ಮತ್ತು ವರ್ಗಾವಣೀಯವಲ್ಲದ ಅನ್ಯೂಇಟಿ ಬಾಂಡನ್ನು ರಾಜ್ಯ ಸರ್ಕಾರವು ಕೊಡತಕ್ಕದ್ದು.

(3) ಉಪಪ್ರಕರಣ (2)ರ ಮೇರೆಗೆ ಯಾವ ಭೂಮಿಯ ಸಂಬಂಧವಾಗಿ ಅನ್ಯೂಇಟಿಯು ಸಂದಾಯವಾಗಬೇಕಾಗಿದೆಯೋ ಆ ಭೂಮಿಯು ಋಣಭಾರಗಳಿಗೆ ಒಳಗಾಗಿರುವಲ್ಲಿ,–

(ಎ) ಋಣಭಾರದ ಮೌಲ್ಯವು ಅನ್ಯೂಇಟಿಯ ಮೊಬಲಗಿಗಿಂತ ಕಡಿಮೆಯಾಗಿದ್ದರೆ ಅನ್ಯೂಇಟಿಯ ಮೊಬಲಗಿನಿಂದ ಪೂರ್ಣ ಹಣವನ್ನು ಋಣಭಾರ ಧಾರಕನಿಗೆ ಸಂದಾಯ ಮಾಡತಕ್ಕದ್ದು ಮತ್ತು ಉಳಿದ ಹಣವನ್ನು ಆ ಸಂಸ್ಥೆಗೆ ಸಂದಾಯ ಮಾಡತಕ್ಕದ್ದು.

(ಬಿ) ಋಣಭಾರದ ಮೌಲ್ಯವು ಅನ್ಯೂಇಟಿಯ ಮೊಬಲಗಿಗಿಂತ ಹೆಚ್ಚಾಗಿರುವಲ್ಲಿ, ಅಂಥ ಮೌಲ್ಯದ ಶೇಕಡಾ ಐದರಷ್ಟನ್ನು ಋಣಭಾರದ ಮೌಲ್ಯವು ಪೂರ್ಣ ಸಂದಾಯವಾಗುವವರೆಗೆ ಅಂಥ ಮೊಬಲಗಿನಿಂದ ಸಂದಾಯ ಮಾಡತಕ್ಕದ್ದು ಮತ್ತು ಉಳಿದ ಹಣವನ್ನು ಸಂಸ್ಥೆಗೆ ಸಂದಾಯ ಮಾಡತಕ್ಕದ್ದು.

(ಸಿ) ಒಂದಕ್ಕಿಂತ ಹೆಚ್ಚು ಋಣಭಾರಗಳಿದ್ದರೆ (ಎ) ಮತ್ತು (ಬಿ) ಖಂಡಗಳ ಮೇರೆಗೆ ಮೊಬಲಗನ್ನು ಆದ್ಯತೆಗನುಸಾರವಾಗಿ ಹಂಚತಕ್ಕದ್ದು.][1]

1. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**107. ಕೆಲವು ಭೂಮಿಗಳಿಗೆ ಈ ಅಧಿನಿಯಮವು ಅನ್ವಯವಾಗತಕ್ಕದ್ದಲ್ಲ.**– (1) 110ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, 8ನೇ ಪ್ರಕರಣದ ಹೊರತು ಈ ಅಧಿನಿಯಮದಲ್ಲಿ ಇರುವುದಾವುದೂ,–

(i) ಸರ್ಕಾರಕ್ಕೆ ಸೇರಿದ;

[2][(ii) xxx][2]

(iii) ಸ್ಥಳೀಯ ಪ್ರಾಧಿಕಾರ, [3][ಕರ್ನಾಟಕ][3] ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ (1966ರ [3][ಕರ್ನಾಟಕ ಅಧಿನಿಯಮ][3] 27) ಮೇರೆಗೆ ರಚಿತವಾದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಭಾರತದಲ್ಲಿ ಕಾನೂನಿನ ಮೂಲಕ ಸ್ಥಾಪಿತವಾದ ವಿಶ್ವವಿದ್ಯಾನಿಲಯ, [4][ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರವು ಅಥವಾ ಅವರೆರಡರ][4] ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಸಂಶೋಧನಾ ಸಂಸ್ಥೆ, [5][ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಮಾನ್ಯತೆ ಪಡೆದ ಕೃಷಿ ಸಂಶೋಧನಾ ಸಂಸ್ಥೆ,][5] [3][ಕರ್ನಾಟಕ][3] ಭೂದಾನ ಯಜ್ಞ ಅಧಿನಿಯಮ, 1963ರ (1963ರ [3][ಕರ್ನಾಟಕ ಅಧಿನಿಯಮ][3] 34) ಮೇರೆಗೆ ಸ್ಥಾಪಿತವಾದ [3][ಕರ್ನಾಟಕ][3] ಭೂದಾನ ಯಜ್ಞ ಮಂಡಲಿ ಇವುಗಳಿಗೆ ಸೇರಿದ ಅಥವಾ ಇವುಗಳು ಗೇಣಿಯ ಮೇಲೆ ಧಾರಣ ಮಾಡಿದ ಅಥವಾ ಇವುಗಳು ಗೇಣಿಗೆ ಕೊಟ್ಟ;

(iv) ಶೌರ್ಯ ಪ್ರಶಸ್ತಿಗಾಗಿ ಕೊಟ್ಟ;

[6][(ivಎ) ಭಾರತದಲ್ಲಿ ಕಾನೂನಿನ ಮೂಲಕ ಸ್ಥಾಪಿತವಾದ ವಿಶ್ವವಿದ್ಯಾನಿಲಯಕ್ಕೆ ಸಂಯೋಜಿತವಾದ ಸಂಶೋಧನಾ ಸಂಸ್ಥೆಗೆ ರಾಜ್ಯ ಸರ್ಕಾರವು ಮಂಜೂರು ಮಾಡಿದ;][6]

(v) 1971ನೇ ಜನವರಿ 24ನೇ ದಿನಾಂಕದಂದು ಅಸ್ತಿತ್ವದಲ್ಲಿದ್ದಂಥ ಮತ್ತು ರಾಜ್ಯ ಸರ್ಕಾರದಿಂದ ಅನುಮೋದಿತವಾದ ಅಶ್ವ ತಳಿಸಂವರ್ಧನ ಕ್ಷೇತ್ರಗಳಿಗಾಗಿ [6][ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ಬಳಸುತ್ತಿರುವ;][6]

(vi) ಲಿನೋಲೊಯಿ ಬೇಸಾಯಕ್ಕೆ ಬಳಸುತ್ತಿರುವ;

(vii) ಕಾಫಿ ಅಧಿನಿಯಮ, 1942ರ (1942ರ ಕೇಂದ್ರ ಅಧಿನಿಯಮ 7) ಮೇರೆಗೆ ರಚಿತವಾದ ಕಾಫಿ ಮಂಡಲಿಯು ಸಂಶೋಧನೆ, ಅಭಿವೃದ್ಧಿ ಅಥವಾ ಪ್ರಚಾರದ ಉದ್ದೇಶಗಳಿಗಾಗಿ ಧಾರಣ ಮಾಡಿರುವ;

[4][(viii) ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಅಥವಾ ಅವರೆಡರ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ನಿಗಮವು ಧಾರಣ ಮಾಡಿದ][4]

– ಭೂಮಿಗಳಿಗೆ ಅನ್ವಯವಾಗತಕ್ಕದ್ದಲ್ಲ:

ಪರಂತು, [3][ಕರ್ನಾಟಕ ಭೂದಾನ ಯಜ್ಞ ಮಂಡಲಿಗೆ][3] ಸೇರಿದ ಅಥವಾ ಅದರಿಂದ ಗೇಣಿಯ ಮೇಲೆ ಧಾರಣ ಮಾಡಿದ ಭೂಮಿಗಳ ಸಂದರ್ಭದಲ್ಲಿ ಅಂಥ ಭೂಮಿಗಳು, ಸದರಿ ಮಂಡಲಿಗೆ ಅವುಗಳನ್ನು ದೇಣಿಗೆಯಾಗಿ ನೀಡಿದ ದಿನಾಂಕದಂದು ಗೇಣಿದಾರರ ಸ್ವಾಧೀನದಲ್ಲಿದ್ದರೆ ಈ ಪ್ರಕರಣದ ಮೇರೆಗಿನ ವಿನಾಯಿತಿಯು ಅನ್ವಯವಾಗತಕ್ಕದ್ದಲ್ಲ:

[4][ಮತ್ತೂ ಪರಂತು, ಈ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ (iii)ನೇ ಖಂಡದಲ್ಲಿ ಉಲ್ಲೇಖಿಸಿದ ಸ್ಥಳೀಯ ಪ್ರಾಧಿಕಾರಕ್ಕೆ, ಸಮಿತಿಗೆ, ವಿಶ್ವವಿದ್ಯಾನಿಲಯಕ್ಕೆ, ಸಂಸ್ಥೆಗೆ ಅಥವಾ ಮಂಡಳಿಗೆ ಗೇಣಿಗೆ ಕೊಟ್ಟ ಭೂಮಿಯ ವಿಸ್ತೀರ್ಣವನ್ನು ಅದರ ಒಡೆಯನು ತಾನು ಬಿಟ್ಟುಕೊಡಬೇಕಾದ ಹೆಚ್ಚುವರಿ ಭೂಮಿಯನ್ನು ನಿರ್ಧರಿಸುವ ಉದ್ದೇಶಕ್ಕಾಗಿ ಲೆಕ್ಕಹಾಕತಕ್ಕದ್ದು.][4]

(2) ಉಪಪ್ರಕರಣ (1)ರಲ್ಲಿ, ಏನೇ ಒಳಗೊಂಡಿದ್ದರೂ, ಯಾರೇ ವ್ಯಕ್ತಿಯು ತಾನು ಈಗಾಗಲೇ ಲಿನೋಲೊಯಿ ಬೇಸಾಯಕ್ಕಾಗಿ ಯಾವುದಾದರೂ ಭೂಮಿಯನ್ನು ಧಾರಣ ಮಾಡಿದ್ದರೆ ಆ ಭೂಮಿಯು ಸೇರಿದರೆ ಹತ್ತು ಯುನಿಟ್‌ಗಿಂತ ಹೆಚ್ಚಾಗುವ ವಿಸ್ತೀರ್ಣದ ಭೂಮಿಯನ್ನು ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದ ತರುವಾಯ ಲಿನೋಲೊಯಿ ಬೇಸಾಯಕ್ಕಾಗಿ ಯಾವುದೇ ರೀತಿಯಲ್ಲಿ ಆರ್ಜಿಸತಕ್ಕದ್ದಲ್ಲ.

(3) ಉಪಪ್ರಕರಣ (2)ಕ್ಕೆ ತದ್ವಿರುದ್ಧವಾದ ಪ್ರತಿಯೊಂದು ಆರ್ಜನೆಗೆ 66ರಿಂದ 76ರವರೆಗಿನ ಪ್ರಕರಣಗಳ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಡನೆ ಅನ್ವಯವಾಗತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

4. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

5. 1991ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 05.02.1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

6. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**108. ಪ್ರತಿಪಾಲಿತರ ನ್ಯಾಯಾಲಯ, ಇತ್ಯಾದಿಗಳ ಆಡಳಿತಕ್ಕೆ ತೆಗೆದುಕೊಂಡ ಭೂಮಿಗಳು.**– 110ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, 8ನೇ ಪ್ರಕರಣದ ಹೊರತು ಈ ಅಧಿನಿಯಮದ ಉಪಬಂಧಗಳಲ್ಲಿ ಇರುವುದು ಯಾವುದೂ, ಪ್ರತಿಪಾಲಿತರ ನ್ಯಾಯಾಲಯದ ಅಥವಾ ಸಂರಕ್ಷಕರ ಮತ್ತು ಪ್ರತಿಪಾಲಿತರ ಅಧಿನಿಯಮ, 1890ರ ಮೇರೆಗೆ ತನ್ನ ಹುದ್ದೆಯ ಬಲದಿಂದ ಸಂರಕ್ಷಕನಾಗಿ ನೇಮಕಗೊಂಡಿರುವ ಸರ್ಕಾರಿ ಅಧಿಕಾರಿಯ ಆಡಳಿತ ನಿರ್ವಹಣೆಗೆ ತೆಗೆದುಕೊಂಡ ಭೂಮಿಗಳಿಗೆ ಅಥವಾ ಅಂಥ ಆಡಳಿತದ ಅವಧಿಯಲ್ಲಿ ಸಿವಿಲ್, ರೆವಿನ್ಯೂ ಅಥವಾ ಕ್ರಿಮಿನಲ್ ನ್ಯಾಯಾಲಯಗಳು ತಾವೇ ಸ್ವತಃ ಅಥವಾ ತಾವು ನೇಮಕ ಮಾಡಿದ 'ರಿಸೀವರು'ಗಳ ಮೂಲಕ ತಾತ್ಕಾಲಿಕವಾಗಿ ತಮ್ಮ ಆಡಳಿತಕ್ಕೆ ತೆಗೆದುಕೊಂಡ ಭೂಮಿಗಳಿಗೆ ಅನ್ವಯವಾಗತಕ್ಕದ್ದಲ್ಲ:

ಪರಂತು,–

(ಎ) ಆಡಳಿತವನ್ನು ವಹಿಸಿಕೊಳ್ಳುವ ದಿನಾಂಕದಂದು ಅಸ್ತಿತ್ವದಲ್ಲಿರುವ ಗೇಣಿದಾರಿಕೆಯ ಸಂದರ್ಭದಲ್ಲಿ [1][44ನೇ ಪ್ರಕರಣದ ಉಪಬಂಧಗಳು ಅನ್ವಯವಾಗತಕ್ಕದ್ದು ಮತ್ತು ಭೂಮಿಯು ಸರ್ಕಾರದಲ್ಲಿ ನಿಹಿತವಾಗತಕ್ಕದ್ದು;][1]

(ಬಿ) ಆಡಳಿತದ ಅವಧಿಯಲ್ಲಿ ಸೃಜಿಸಿದ ಗೇಣಿದಾರಿಕೆಯ ಸಂದರ್ಭದಲ್ಲಿ ಅಂಥ ಆಡಳಿತದಿಂದ ಭೂಮಿಯನ್ನು ಬಿಡುಗಡೆ ಮಾಡಿದಾಗ, ಗೇಣಿದಾರನನ್ನು ಭೂಮಿಯ ಸ್ವಾಧೀನತೆಯಿಂದ ತಪ್ಪಿಸತಕ್ಕದ್ದು ಮತ್ತು ಭೂಮಿಯ ಸ್ವಾಧೀನತೆಯನ್ನು ಅಂಥ ಸ್ವಾಧೀನತೆಗೆ ಕಾನೂನು ಬದ್ಧವಾಗಿ ಹಕ್ಕುಳ್ಳ ವ್ಯಕ್ತಿಗೆ ಒಪ್ಪಿಸತಕ್ಕದ್ದು;

(ಸಿ) ಅಂಥ ಭೂಮಿಯನ್ನು ಯಾವ ದಿನಾಂಕದಿಂದ ಅಂಥ ಆಡಳಿತದಿಂದ ಬಿಡುಗಡೆ ಮಾಡಲಾಯಿತೋ ಆ ದಿನಾಂಕದಿಂದ ಜಾರಿಗೆ ಬರುವಂತೆ ಅಂಥ ಭೂಮಿಗೆ ಈ ಅಧಿನಿಯಮದ ಎಲ್ಲ ಉಪಬಂಧಗಳೂ ಅನ್ವಯವಾಗತಕ್ಕದ್ದು. [2][xxx][2] .

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**109. ಕೆಲವು ಭೂಮಿಗಳಿಗೆ ಕೆಲವು ಉಪಬಂಧಗಳಿಂದ ವಿನಾಯಿತಿ ನೀಡುವುದು.**– [2][(1) ನಿಯಮಿಸಬಹುದಾದಂಥ ನಿಯಮಗಳಿಗೆ ಮತ್ತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ (1963ರ ಕರ್ನಾಟಕ ಅಧಿನಿಯಮ 11) ಉಪಬಂಧಗಳಿಗೆ ಒಳಪಟ್ಟು, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಯಾವುದೇ ಪ್ರದೇಶದಲ್ಲಿರುವ ಯವುದೇ ಭೂಮಿಗೆ,–

(i) ಕೈಗಾರಿಕಾ ಅಭಿವೃದ್ಧಿಗಾಗಿ ಬಳಸಲಾಗುವ ಇಪ್ಪತ್ತು ಯುನಿಟ್‌ಗಳಿಗಿಂತ ಹೆಚ್ಚಿಲ್ಲದ ವಿಸ್ತೀರ್ಣದ;

(ii) ರಾಜ್ಯ ಸರ್ಕಾರದಿಂದ ಅಥವಾ ಕೇಂದ್ರ ಸರ್ಕಾರದಿಂದ ಮಾನ್ಯತೆ ಪಡೆದ ಶೈಕ್ಷಣಿಕ ಸಂಸ್ಥೆಗಳಿಗಾಗಿ ಕೃಷಿಯೇತರ ಉದ್ದೇಶಕ್ಕಾಗಿ ಬಳಸಲಾಗುವ ನಾಲ್ಕು ಯುನಿಟಗಳಿಗಿಂತ ಹೆಚ್ಚಿಲ್ಲದ ವಿಸ್ತೀರ್ಣದ;

(iii) ಮಾನ್ಯತೆ ಪಡೆದ ಅಥವಾ ನೋಂದಾಯಿತ ಸಂಸ್ಥೆಯು ಸ್ಥಾಪಿಸಿರುವ ಅಥವಾ ನಿರ್ಮಿಸಿರುವ, ಅಧಿಸೂಚನೆಯ ಮೂಲಕ ಸರ್ಕಾರವು ನಿರ್ದಿಷ್ಟಪಡಿಸುವ ಪೂಜಾ ಸ್ಥಳಗಳಿಗಾಗಿ ಕೃಷಿಯೇತರ ಉದ್ದೇಶಕ್ಕಾಗಿ, ಬಳಸಲಾಗುವ ಒಂದು ಯುನಿಟ್‌ಗಳಿಗಿಂತ ಹೆಚ್ಚಿಲ್ಲದ ವಿಸ್ತೀರ್ಣದ;

(iv) ರಾಜ್ಯ ಸರ್ಕಾರದಿಂದ ಅನುಮೋದಿತವಾದ ವಸತಿ ಯೋಜನೆಗಾಗಿ ಬಳಸಲಾಗುವ ಹತ್ತು ಯುನಿಟಗಳಿಗಿಂತ ಹೆಚ್ಚಿಲ್ಲದ ವಿಸ್ತೀರ್ಣದ;

(v) ಪುಷ್ಪ ಕೃಷಿ ಮತ್ತು ಕೃಷಿ ಆಧಾರಿತ ಕೈಗಾರಿಗಳೂ ಸೇರಿದಂತೆ ತೋಟಗಾರಿಕೆ ಉದ್ದೇಶಕ್ಕಾಗಿ ಬಳಸಲಾಗುವ ಇಪ್ಪತ್ತು ಯುನಿಟಗಳಿಗಿಂತ ಹೆಚ್ಚಿಲ್ಲದ ವಿಸ್ತೀರ್ಣದ

– ಯಾವುದೇ ಪ್ರದೇಶದಲ್ಲಿರುವ ಯಾವುದೇ ಭೂಮಿಗೆ 63, 79ಎ, 79ಬಿ ಅಥವಾ 80ನೇ ಪ್ರಕರಣಗಳ ಉಪಬಂಧಗಳಿಂದ ವಿನಾಯಿತಿ ನೀಡಬಹುದು:

[3][ಪರಂತು, ಜಿಲ್ಲಾಧಿಕಾರಿಯವರು ಸಹ–

(i) ಕೈಗಾರಿಕಾ ಅಭಿವೃದ್ಧಿಗಾಗಿ ಬಳಸಲಾಗುವ ಹತ್ತು ಯುನಿಟಗಳಿಗಿಂತ ಹೆಚ್ಚಿಲ್ಲದ ವಿಸ್ತೀರ್ಣದ;

(ii) ಕೃಷಿಯೇತರ ಉದ್ದೇಶಕ್ಕಾಗಿ, ರಾಜ್ಯ ಸರ್ಕಾರದಿಂದ ಅಥವಾ ಕೇಂದ್ರ ಸರ್ಕಾರದಿಂದ ಮಾನ್ಯತೆ ಪಡೆದ ಶೈಕ್ಷಣಿಕ ಸಂಸ್ಥೆಗಳಿಗಾಗಿ ಬಳಸಲಾಗುವ ಎರಡು ಯುನಿಟಗಳಿಗಿಂತ ಹೆಚ್ಚಿಲ್ಲದ ವಿಸ್ತೀರ್ಣದ;

(iii) ಕೃಷಿಯೇತರ ಉದ್ದೇಶಕ್ಕಾಗಿ, ಮಾನ್ಯತೆ ಪಡೆದ ಅಥವಾ ನೋಂದಾಯಿತ ಸಂಸ್ಥೆಯು ಸ್ಥಾಪಿಸಿರುವ ಅಥವಾ ನಿರ್ಮಿಸಿರುವ, ಅಧಿಸೂಚನೆಯ ಮೂಲಕ ಸರ್ಕಾರವು ನಿರ್ದಿಷ್ಟಪಡಿಸುವ ಪೂಜಾ ಸ್ಥಳಗಳಿಗಾಗಿ ಬಳಸಲಾಗುವ ನಾಲ್ಕನೇ ಒಂದು ಯುನಿಟಗಿಂತ ಹೆಚ್ಚಿಲ್ಲದ ವಿಸ್ತೀರ್ಣದ;

(iv) ರಾಜ್ಯ ಸರ್ಕಾರದಿಂದ ಅನುಮೋದಿತವಾದ ವಸತಿ ಯೋಜನೆಗಳಿಗಾಗಿ ಬಳಸಲಾಗುವ ಹತ್ತು ಯುನಿಟಗಳಿಗಿಂತ ಹೆಚ್ಚಿಲ್ಲದ ವಿಸ್ತೀರ್ಣದ;

(v) ಪುಷ್ಪ ಕೃಷಿ ಮತ್ತು ಕೃಷಿ ಆಧಾರಿತ ಕೈಗಾರಿಗಳೂ ಸೇರಿದಂತೆ ತೋಟಗಾರಿಕೆ ಉದ್ದೇಶಕ್ಕಾಗಿ ಬಳಸಲಾಗುವ ಹತ್ತು ಯುನಿಟಗಳಿಗಿಂತ ಹೆಚ್ಚಿಲ್ಲದ ವಿಸ್ತೀರ್ಣದ][3]

– ಭೂಮಿಯ ಸಂಬಂಧದಲ್ಲಿ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿರುವ ನಿಬಂಧನೆಗಳಿಗೆ ಒಳಪಟ್ಟು ಹಾಗೂ ಅಂಥ ರೀತಿಯಲ್ಲಿ ಈ ಉಪಪ್ರಕರಣದ ಮೇರೆಗೆ ರಾಜ್ಯ ಸರ್ಕಾರಕ್ಕೆ ಇರುವ ಅಧಿಕಾರಗಳನ್ನು ಚಲಾಯಿಸಬಹುದು.

(1ಎ) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, ರಾಜ್ಯ ಸರ್ಕಾರವು ಸಾರ್ವಜನಿಕ ಹಿತ ದೃಷ್ಟಿಯಿಂದ ಮತ್ತು ಲಿಖಿತದಲ್ಲಿ ಕಾರಣಗಳನ್ನು ದಾಖಲಿಸಿ [4][ಅಧಿಸೂಚನೆಯ ಮೂಲಕ ಮತ್ತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ, 1961ರ (1963ರ ಕರ್ನಾಟಕ

ಅಧಿನಿಯಮ 11) ಉಪಬಂಧಗಳಿಗೆ ಮತ್ತು ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗೊಳಪಟ್ಟು ಯಾವುದೇ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಗೆ 63, 79ಎ, 79ಬಿ ಅಥವಾ 80ನೇ ಉಪಬಂಧಗಳಿಂದ ವಿನಾಯಿತಿ ನೀಡಬಹುದು:][4]][2]

[5][ಪರಂತು, [6][ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಯವರನ್ನು ಮತ್ತು ಬೆಂಗಳೂರು ಜಿಲ್ಲೆಯ ಜಿಲ್ಲಾಧಿಕಾರಿಯವರನ್ನು ಬಿಟ್ಟು ಉಳಿದ ಜಿಲ್ಲೆಗಳ ಜಿಲ್ಲಾಧಿಕಾರಿಗಳು,][6] ಈ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ನಿಬಂಧನೆಗಳಿಗೆ ಒಳಪಟ್ಟು ಮತ್ತು ಅಂಥ ರೀತಿಯಲ್ಲಿ ಅರ್ಧ ಹೆಕ್ಟೇರ್ ಮೀರದ ವಿಸ್ತೀರ್ಣದ ಭೂಮಿಗೆ ವಿನಾಯಿತಿಗಳನ್ನು ನೀಡಲು ರಾಜ್ಯ ಸರ್ಕಾರಕ್ಕೆ ಇರುವ ಅಧಿಕಾರವನ್ನು ಚಲಾಯಿಸಬಹುದು.][5]

1. 1992ರ ಅಧಿನಿಯಮ ಸಂಖ್ಯೆ 9ರ ಮೂಲಕ ದಿನಾಂಕ 21.04.1992 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1995ರ ಅಧಿನಿಯಮ ಸಂಖ್ಯೆ 31ರ ಮೂಲಕ ದಿನಾಂಕ 20.10.1995 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 2003ರ ಅಧಿನಿಯಮ ಸಂಖ್ಯೆ 20ರ ಮೂಲಕ ದಿನಾಂಕ 23.04.2003 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

4. 1996ರ ಅಧಿನಿಯಮ ಸಂಖ್ಯೆ 8ರ ಮೂಲಕ ದಿನಾಂಕ 20.10.1995 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

5. 2004ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 10.03.2004 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

6. 2005ರ ಅಧಿನಿಯಮ ಸಂಖ್ಯೆ 7ರ ಮೂಲಕ ದಿನಾಂಕ 19.03.2005 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಉಪಪ್ರಕರಣ (1)ರ ಮೇರೆಗೆ ನಿರ್ದಿಷ್ಟಪಡಿಸಿದ ಯಾವುದೇ ಷರತ್ತನ್ನು ಅಥವಾ ನಿರ್ಬಂಧವನ್ನು ಉಲ್ಲಂಘಿಸಿದರೆ [1][ರಾಜ್ಯ ಸರ್ಕಾರವು ಅಥವಾ ಸಂದರ್ಭಾನುಸಾರ ಜಿಲ್ಲಾಧಿಕಾರಿಯವರು][1] [1][ಅದು ಅಥವಾ ಅವರು ಸೂಕ್ತವೆಂದು ಭಾವಿಸುವಂಥ][1] ವಿಚಾರಣೆಯನ್ನು ನಡಿಸಿದ ಮೇಲೆ ಆ ಉಪಪ್ರಕರಣದ ಮೇರೆಗೆ ನೀಡಿರುವ ವಿನಾಯಿತಿಯನ್ನು ರದ್ದುಪಡಿಸಬಹುದು ಮತ್ತು ಯಾವ ಭೂಮಿಗೆ ಸಂಬಂಧಿಸಿದಂತೆ ವಿನಾಯಿತಿಯನ್ನು ಹಾಗೆ ರದ್ದುಪಡಿಸಲಾಗಿದೆಯೋ ಆ ಭೂಮಿಯನ್ನು ದಂಡವನ್ನಾಗಿ ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು ಮತ್ತು ಅದು ಎಲ್ಲಾ ಋಣಭಾರಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು, ಆ ಭೂಮಿಗೆ ಯಾವುದೇ ಹಣವನ್ನು ಸಂದಾಯಮಾಡಬೇಕಾಗಿಲ್ಲ.][1]

1. 2003ರ ಅಧಿನಿಯಮ ಸಂಖ್ಯೆ 20ರ ಮೂಲಕ ದಿನಾಂಕ 23.04.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**110. ಕೆಲವು ಭೂಮಿಗಳಿಗೆ ಕೆಲವು ಉಪಬಂಧಗಳಿಂದ ವಿನಾಯಿತಿ ನೀಡದಿರುವುದು.–** [1][107ನೇ ಮತ್ತು 108ನೇ ಪ್ರಕರಣದಲ್ಲಿ][1] ಉಲ್ಲೇಖಿಸಿರುವ ಯಾವುದೇ ಭೂಮಿಗೆ ಸದರಿ ಪ್ರಕರಣಗಳ ಮೇರೆಗೆ ಈ ಅಧಿನಿಯಮದ ಯಾವ ಉಪಬಂಧಗಳಿಂದ ವಿನಾಯಿತಿ ನೀಡಲಾಗಿದೆಯೋ ಆ ಉಪಬಂಧಗಳಿಂದ ಆ ಭೂಮಿಗೆ ವಿನಾಯಿತಿ ನೀಡತಕ್ಕದ್ದಲ್ಲವೆಂದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದೇಶಿಸಬಹುದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

## ಅಧ್ಯಾಯ – IX

## [1][ನ್ಯಾಯಾಲಯಗಳ][1] ಕಾರ್ಯ ವಿಧಾನ ಮತ್ತು ಅಧಿಕಾರವ್ಯಾಪ್ತಿ ಹಾಗೂ ಅಪೀಲುಗಳು

[2][**111.** x x x ][2]

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**112. ತಹಸೀಲ್ದಾರರ ಮತ್ತು ನ್ಯಾಯಾಧಿಕರಣದ ಕರ್ತವ್ಯಗಳು.–** ತಹಸೀಲ್ದಾರರ ಮತ್ತು ನ್ಯಾಯಾಧಿಕರಣದ ಕರ್ತವ್ಯಗಳು ಮತ್ತು ಪ್ರಕಾರ್ಯಗಳು ಈ ಕೆಳಗೆ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದು:–

**(ಎ) ತಹಸೀಲ್ದಾರರ ಕರ್ತವ್ಯಗಳು.–**

(ಎ) 9ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಸಂದಾಯವಾಗಬೇಕಾಗಿರುವ ಗೇಣಿಯ ಬಗೆಗಿನ ಭೂಮಾಲೀಕನ ಮತ್ತು ಗೇಣಿದಾರನ ನಡುವಣ ವಿವಾದವನ್ನು ತೀರ್ಮಾನಿಸುವುದು;

(ಬಿ) 11ನೇ ಪ್ರಕರಣದ ಮೇರೆಗೆ ಗೇಣಿದಾರನಿಗೆ ಸಂದಾಯ ಮಾಡಬೇಕಾದ ಪರಿಹಾರವನ್ನು ನಿರ್ಧರಿಸುವುದು.

(ಸಿ) 15ನೇ ಪ್ರಕರಣದ (6)ನೇ ಉಪ ಪ್ರಕರಣದಲ್ಲಿ ಅಥವಾ 20ನೇ ಪ್ರಕರಣದಲ್ಲಿ ಉಲ್ಲೇಖಿಸಿರುವ ಭೂಮಿಗಳು ಸರ್ಕಾರದಲ್ಲಿ ನಿಹಿತವಾಗಿರುವುದನ್ನು ಘೋಷಿಸುವುದು;

(ಡಿ) ಗೇಣಿಯ ಬಾಕಿಯನ್ನು ವ್ಯವಹರಣೆಗಳ ವೆಚ್ಚದೊಂದಿಗೆ ಗೇಣಿದಾರನು ಸಂದಾಯ ಮಾಡಿದ ಮೇಲೆ ಸ್ವಾಧೀನವನ್ನು ಭೂ ಮಾಲೀಕನಿಗೆ ವಾಪಸ್ಸು ಮಾಡುವಂತೆ 23ನೇ ಪ್ರಕರಣದ ಮೇರೆಗೆ ಆದೇಶ ಮಾಡದಿರುವುದು;

(ಇ) 27ನೇ ಪ್ರಕರಣದ ಮೇರೆಗೆ ಮರಗಳಿಗೆ ಸಂದಾಯ ಮಾಡಬೇಕಾದ ಪರಿಹಾರವನ್ನು ನಿರ್ಧರಿಸುವುದು;

(ಎಫ್) 30ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಬದುಗಳಿಗೆ ತಗಲಿದ ಖರ್ಚುಗಳನ್ನು ಮತ್ತು ವ್ಯವಹರಣೆಗಳ ಖರ್ಚುಗಳನ್ನು ವಸೂಲು ಮಾಡಲು ಆದೇಶಿಸುವುದು;

(ಜಿ) 37ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಪ್ರಮಾಣಪತ್ರವನ್ನು ನೀಡುವುದು;

(ಹೆಚ್) 39ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಭೂಮಿಯ ಯುಕ್ತ ಬೆಲೆಯನ್ನು ನಿರ್ಧರಿಸುವುದು;

(ಐ) 41ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಸ್ವಾಧೀನಕ್ಕಾಗಿ ಸಲ್ಲಿಸಿದ ಅರ್ಜಿಯ ಮೇಲೆ ಆದೇಶಗಳನ್ನು ಹೊರಡಿಸುವುದು;

(ಜೆ) 41ನೇ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ಬೆಳೆಗಳ ಮುಟ್ಟುಗೋಲಿಗೆ ಮತ್ತು ಖರ್ಚುಗಳ ಮತ್ತು ದಂಡದ ಸಂದಾಯಕ್ಕೆ ಆದೇಶಿಸುವುದು;

(ಕೆ) 42ನೇ ಪ್ರಕರಣದ ಮೇರೆಗೆ ಗೇಣಿ ವಸೂಲಿಗೆ ಸಂಬಂಧಿಸಿದ ಮೊಕದ್ದಮೆಗಳ ವಿಚಾರಣೆ ನಡೆಸುವುದು ಮತ್ತು ಆದೇಶಗಳನ್ನು ಹೊರಡಿಸುವುದು;

(ಎಲ್) 47ನೇ ಪ್ರಕರಣದ ಮೇರೆಗೆ ಸಂದಾಯವಾಗತಕ್ಕ ಮೊಬಲಗನ್ನು ನಿರ್ಧರಿಸುವುದು ಮತ್ತು 48ಬಿ ಪ್ರಕರಣದ ಮೇರೆಗೆ ಮೊಬಲಗಿನ ಹಂಚಿಕೆಯ ತಃಖ್ತೆಯನ್ನು ತಯಾರಿಸುವುದು;

(ಎಂ) 50ನೇ ಪ್ರಕರಣದ ಮೇರೆಗೆ ಋಣಭಾರಗಳನ್ನು ನಿರ್ಧರಿಸುವುದು ಮತ್ತು ಮೊಬಲಗಿನ ಸಂದಾಯಕ್ಕೆ ಏರ್ಪಾಟು ಮಾಡುವುದು;

(ಎನ್) 55ನೇ ಪ್ರಕರಣದ ಮೇರೆಗೆ ಪ್ರಮಾಣಪತ್ರವನ್ನು [2][xxx][2] ನೀಡುವುದು;

(ಒ) ಭೂಮಿಯಲ್ಲಿ ವ್ಯಕ್ತಿಗಿರುವ ಹಕ್ಕನ್ನು, ಹಕ್ಕು ಸ್ವಾಮ್ಯವನ್ನು ಮತ್ತು ಹಿತಾಸಕ್ತಿಯನ್ನು 58ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸುವುದು;

(ಪಿ) 60ನೇ ಪ್ರಕರಣದ ಮೇರೆಗೆ ಸ್ವತಃ ಸಾಗುವಳಿ ಮಾಡಲು ತಪ್ಪಿರುವುದನ್ನು ಮನ್ನಿಸುವುದು;

(ಕ್ಯೂ) 66ಎ ಪ್ರಕರಣದ ಮೇರೆಗೆ ದಂಡ ವಿಧಿಸುವ ಆದೇಶವನ್ನು ಹೊರಡಿಸುವುದು;

[3][(ಆರ್) xxxx][3]

(ಎಸ್) 71ನೇ ಪ್ರಕರಣದ ಮೇರೆಗೆ ಪರಿಹಾರವನ್ನು ನಿರ್ಧರಿಸುವುದು;

(ಟಿ) 79ಸಿ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ದಂಡವನ್ನು ವಿಧಿಸುವ ಮತ್ತು ನಿಜವಾದ ಮತ್ತು ಸರಿಯಾದ ಘೋಷಣೆಯನ್ನು ಒದಗಿಸುವಂತೆ ವ್ಯಕ್ತಿಯನ್ನು ಅಗತ್ಯಪಡಿಸುವ ಆದೇಶವನ್ನು ಹೊರಡಿಸುವುದು;

(ಯು) ಈ ಅಧಿನಿಯಮದ ಇತರ ಯಾವುದೇ ಉಪಬಂಧದ ಮೂಲಕ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಮೇರೆಗೆ ತಹಸೀಲ್ದಾರರಿಗೆ ವಹಿಸಿದಂಥ ಇತರ ಕರ್ತವ್ಯಗಳನ್ನು ಮತ್ತು ಪ್ರಕಾರ್ಯಗಳನ್ನು ನೆರವೇರಿಸುವುದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1977ರ ಅಧಿನಿಯಮ ಸಂಖ್ಯೆ 12ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1976ರ ಅಧಿನಿಯಮ ಸಂಖ್ಯೆ 44ರ ಮೂಲಕ ದಿನಾಂಕ 02.06.1976 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಬಿ) **ನ್ಯಾಯಾಧಿಕರಣದ ಕರ್ತವ್ಯಗಳು.–**

(ಎ) 48ಎ ಪ್ರಕರಣದ ಮೇರೆಗೆ ಗೇಣಿದಾರನನ್ನು ಅಧಿಭೋಗದಾರನನ್ನಾಗಿ ನೋಂದಣಿ ಮಾಡುವುದಕ್ಕೆ ಸಂಬಂಧಿಸಿದ ಸಂದರ್ಭಗಳಲ್ಲಿ [1][(ಸ್ಥಳೀಯ ಪರಿಶೀಲನೆಯು ಒಳಗೊಂಡಂತೆ)][1] ಅವಶ್ಯಕ ಸತ್ಯಾಪನೆ ಮಾಡುವುದು ಅಥವಾ ವಿಚಾರಣೆ ನಡೆಸುವುದು ಮತ್ತು ಆದೇಶಗಳನ್ನು ಹೊರಡಿಸುವುದು;

(ಬಿ) ಒಬ್ಬ ವ್ಯಕ್ತಿಯು ಗೇಣಿದಾರನೇ ಅಥವಾ ಅಲ್ಲವೇ ಎಂಬುದನ್ನು ತೀರ್ಮಾನಿಸುವುದು;

[2][(ಬಿಬಿ) 48ಎ ಪ್ರಕರಣದ ಮೇರೆಗೆ ಅರ್ಜಿಯನ್ನು ಯಾವ ಭೂಮಿಯ ಸಂಬಂಧದಲ್ಲಿ ಸಲ್ಲಿಸಲಾಗಿದೆಯೋ ಅಥವಾ ಗೇಣಿದಾರಿಕೆಯ ಯಾವುದೇ ಪ್ರಶ್ನೆಯನ್ನು ಯಾವ ಭೂಮಿಯ ಸಂಬಂಧದಲ್ಲಿ ಎತ್ತಲಾಗಿದೆಯೋ ಅಥವಾ ಯಾವ ಭೂಮಿಯ ಸಂಬಂಧದಲ್ಲಿ ಅಂಥ ಪ್ರಶ್ನೆಯೂ ಒಳಗೊಂಡಿದೆಯೋ ಆ ಭೂಮಿಯು ಕೃಷಿ ಭೂಮಿಯೇ ಅಥವಾ ಅಲ್ಲವೇ ಎಂಬುದನ್ನು ತೀರ್ಮಾನಿಸುವುದು;

(ಬಿಬಿಬಿ) 133ನೇ ಪ್ರಕರಣದ ಮೇರೆಗೆ ತನಗೆ ಉಲ್ಲೇಖಿಸಿದ ವಿಷಯಗಳನ್ನು ತೀರ್ಮಾನಿಸುವುದು;

(ಬಿಬಿಬಿಬಿ) 48ಸಿ ಪ್ರಕರಣದ ಮೇರೆಗೆ ಮಧ್ಯಂತರ ಆದೇಶಗಳನ್ನು ಹೊರಡಿಸುವುದು;][2]

[3][(ಬಿಬಿಬಿಬಿಬಿ) 67ನೇ ಪ್ರಕರಣದ ಮೇರೆಗೆ ಒಪ್ಪಿಸಬೇಕಾದ ಭೂಮಿಯನ್ನು ನಿರ್ಧರಿಸುವುದು;][3]

[4][(ಸಿ) 38ನೇ ಪ್ರಕರಣದ ಮೇರೆಗೆ ವಾಸದ ಮನೆಗಳ ಹಾಗೂ ಅದಕ್ಕೆ ಹೊಂದಿಕೊಂಡ ಭೂಮಿಯ ಒಡೆಯರನ್ನಾಗಿ ಕೃಷಿ ಕಾರ್ಮಿಕರನ್ನು ನೋಂದಾಯಿಸುವುದಕ್ಕೆ ಸಂಬಂಧಿಸಿದ ಸಂದರ್ಭಗಳಲ್ಲಿ ಸ್ಥಳೀಯ ಪರಿಶೀಲನೆಯು ಒಳಗೊಂಡಂತೆ ವಿಚಾರಣೆಯನ್ನು ನಡೆಸುವುದು ಮತ್ತು ಆದೇಶಗಳನ್ನು ಹೊರಡಿಸುವುದು;][4]

(ಡಿ) ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಮೇರೆಗೆ ತನಗೆ ವಹಿಸದಂಥ ಇತರ ಕರ್ತವ್ಯಗಳನ್ನು ಮತ್ತು ಪ್ರಕಾರ್ಯಗಳನ್ನು ನೆರವೇರಿಸುವುದು.][1]

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1976ರ ಅಧಿನಿಯಮ ಸಂಖ್ಯೆ 27ರ ಮೂಲಕ ದಿನಾಂಕ 16.12.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1976ರ ಅಧಿನಿಯಮ ಸಂಖ್ಯೆ 44ರ ಮೂಲಕ ದಿನಾಂಕ 02.06.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

4. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**113. ಸಿವಿಲ್ ಪ್ರಕ್ರಿಯಾ ಸಂಹಿತೆಯ ಅನ್ವಯ.–** [2][(1)][2] ಈ ಅಧಿನಿಯಮದಲ್ಲಿ ಸ್ಪಷ್ಟವಾಗಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ (1908ರ ಕೇಂದ್ರ ಅಧಿನಿಯಮ V) ಉಪಬಂಧಗಳು, ಈ ಅಧಿನಿಯಮದ ಮೇರೆಗೆ ನ್ಯಾಯಾಲಯದ ಮುಂದಿರುವ ಎಲ್ಲ ಅರ್ಜಿಗಳ ಮತ್ತು ವ್ಯವಹರಣೆಗಳ ಸಂಬಂಧದಲ್ಲಿ ಅನ್ವಯವಾಗತಕ್ಕದ್ದು;][1]

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 19ರ ಮೂಲಕ ದಿನಾಂಕ 06.12.1985 ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

[1][(2) xxx

(3) xxx][1]

1. 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**114. ವ್ಯವಹರಣೆಗಳ ಪ್ರಾರಂಭ.–** ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಸ್ಪಷ್ಟವಾಗಿ ಉಪಬಂಧಿಸಿರುವಂತೆ ಹೊರತು, [1][ತಹಶೀಲ್ದಾರರ][1] ಅಥವಾ ಜಿಲ್ಲಾಧಿಕಾರಿಯವರ ಮುಂದಿರುವ ಎಲ್ಲಾ ವಿಚಾರಣೆಗಳು ಮತ್ತು ವ್ಯವಹರಣೆಗಳು ಈ ಕೆಳಕಂಡ ವಿವರಗಳನ್ನೊಳಗೊಂಡ ಅರ್ಜಿಯನ್ನು ಸಲ್ಲಿಸಿದ ಮೇಲೆ ಪ್ರಾರಂಭವಾಗತಕ್ಕದ್ದು:–

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಎ) ಅರ್ಜಿದಾರನ ಮತ್ತು ಎದುರು ಅರ್ಜಿದಾರನ ಪೂರ್ಣ ಹೆಸರು, ವಯಸ್ಸು, ವೃತ್ತಿ, ವಿಳಾಸ ಮತ್ತು ವಾಸಸ್ಥಳ;

(ಬಿ) ಯಾವ ಸ್ವತ್ತಿನ ಸ್ವಾಧೀನವನ್ನು ಕೋರಲಾಗಿದೆಯೋ ಆ ಸ್ವತ್ತಿನ ಸಂಕ್ಷಿಪ್ತ ವರ್ಣನೆ ಮತ್ತು ಅದು ಇರುವ ಸ್ಥಳ ಅಥವಾ ಸಂದರ್ಭಾನುಸಾರ ಕ್ಲೇಮು ಮಾಡಿರುವ ಮೊಬಲಗು;

(ಸಿ) ವ್ಯಾಜ್ಯಕಾರಣವು ಯಾವ ಸನ್ನಿವೇಶಗಳಿಂದ ಉದ್ಭವಿಸಿದೆಯೋ ಆ ಸನ್ನಿವೇಶಗಳು;

(ಡಿ) ಅರ್ಜಿದಾರನ ದಸ್ತಾವೇಜುಗಳು ಏನಾದರೂ ಇದ್ದರೆ, ಅವುಗಳ ಮತ್ತು ಅವನ ಸಾಕ್ಷಿದಾರರ ಪಟ್ಟಿ ಮತ್ತು ಅಂಥ ಸಾಕ್ಷಿದಾರರನ್ನು ಹಾಜರಾಗಲು ಸಮನು ಮಾಡಲಾಗಿದೆಯೋ; ಅಥವಾ ಅರ್ಜಿದಾರನು ವಿಚಾರಣೆಯ ದಿನಾಂಕದಂದು ಅವರನ್ನು ಹಾಜರುಪಡಿಸುತ್ತಾನೆಯೇ;

(ಇ) ನಿಯಮಿಸಬಹುದಾದಂಥ ಇತರ ವಿವರಗಳು.

**115. ವಿಚಾರಣೆಗಳು.–** (1) [1][ನ್ಯಾಯಾಲಯವು][1] ವಿಚಾರಣೆಗಳನ್ನು ನಡೆಸುವಾಗ, ಸಾಕ್ಷ್ಯವನ್ನು ಮತ್ತು ಅಂಥ ವಿಚಾರಣೆಗಳಲ್ಲಿನ ತೀರ್ಮಾನಗಳನ್ನು ದಾಖಲಿಸುವಾಗ, ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನಲ್ಲಿ, ಲಘು ವಿವಾದಗಳ ನ್ಯಾಯಾಲಯದ ಅಧಿಕಾರಗಳಿಗೆ ಮತ್ತು ಕಾರ್ಯವಿಧಾನಕ್ಕೆ ಸಂಬಂಧಿಸಿದ ಹಾಗೆ ಉಪಬಂಧಿಸಿರುವಂತೆ ಆ ನ್ಯಾಯಾಲಯದ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಆ ಕಾರ್ಯವಿಧಾನಗಳನ್ನು ಅನುಸರಿಸತಕ್ಕದ್ದು.

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಈ ಅಧಿನಿಯಮದ ಮೇರೆಗೆ ಯಾವುದೇ ವಿಚಾರಣೆಯನ್ನು ಅಥವಾ ವ್ಯವಹರಣೆಗಳನ್ನು ನಡೆಸುವ ಉದ್ದೇಶಕ್ಕಾಗಿ, [1][ನ್ಯಾಯಾಧೀಕರಣವು, ಜಿಲ್ಲಾಧಿಕಾರಿಯು][1] ಅಥವಾ ರೆವಿನ್ಯೂ ಇಲಾಖೆಯ ಇತರ ಅಧಿಕಾರಿಯು [2][[3][ಕರ್ನಾಟಕ][3] ಭೂಕಂದಾಯ ಅಧಿನಿಯಮ, 1964ರ][2] ಮೇರೆಗಿನ ಎಲ್ಲ ಅಥವಾ ಯಾವುದೇ [4][xxx][4] ಅಧಿಕಾರಗಳನ್ನು ಚಲಾಯಿಸಬಹುದು ಮತ್ತು ನಿಯಮಿಸಬಹುದಾದಂಥ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ ದಿನಾಂಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

4. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(3) ಯಾವ ವಿಚಾರಣೆಯಲ್ಲಿ ಆದೇಶಗಳನ್ನು ಹೊರಡಿಸುವುದಕ್ಕೆ ಮುಂಚೆ ಪಕ್ಷಕಾರರ ಅಹವಾಲನ್ನು ಆಲಿಸಲಾಗಿದೆಯೋ ಆ ಪ್ರತಿಯೊಂದು ವಿಚಾರಣೆಯಲ್ಲೂ, ಪಕ್ಷಕಾರರಿಗೆ ನೋಟೀಸನ್ನು ಕೊಟ್ಟ ನಂತರ ಬಹಿರಂಗ [1][ನ್ಯಾಯಾಲಯದಲ್ಲಿ][1] ಸದರಿ ಆದೇಶಗಳನ್ನು ಹೇಳತಕ್ಕದ್ದು ಮತ್ತು ನ್ಯಾಯಾಲಯದ ಅಥವಾ [2][ನ್ಯಾಯಾಧಿಕರಣದ, ಜಿಲ್ಲಾಧಿಕಾರಿಯ][2] ಅಥವಾ ಇತರೆ ಅಧಿಕಾರಿಯ ತೀರ್ಮಾನವನ್ನು ಸಂಬಂಧಪಟ್ಟ ಪಕ್ಷಕಾರರಿಗೆ ಅಂಚೆಯ ಮೂಲಕ ತಿಳಿಸತಕ್ಕದ್ದು.

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**116. ಆದೇಶಗಳ ಜಾರಿ.–** (1) ತಹಸೀಲ್ದಾರರ ಅಥವಾ ಇತರ ಪ್ರಾಧಿಕಾರಿಯ ಆದೇಶದ ಮೂಲಕ ಯಾವುದೇ ಮೊಬಲಗಿನ, ಸಂದಾಯಕ್ಕೆ ನಿರ್ದೇಶಿಸಲಾಗಿದೆಯೋ ಆ ಯಾವುದೇ ಮೊಬಲಗು, ಸಂದಾಯ ಮಾಡಲು ಯಾವ ವ್ಯಕ್ತಿಗಳಿಗೆ ಆದೇಶಿಸಲಾಗಿದೆಯೋ ಆ ವ್ಯಕ್ತಿಗಳಿಂದ ಭೂ ಕಂದಾಯದ ಬಾಕಿಯಂತೆ ವಸೂಲು ಮಾಡುವಂಥದ್ದು ಆಗಿರತಕ್ಕದ್ದು.

(2) ಯಾವುದೇ ಭೂಮಿಯ ಸ್ವಾಧೀನವನ್ನು ಕೊಡುವ ಅಥವಾ ಅದರ ಸ್ವಾಧೀನವನ್ನು ಹಿಂದಕ್ಕೊಪ್ಪಿಸುವ ಅಥವಾ ಅದನ್ನು ಬಳಸುವ ಕುರಿತಂತೆ ತಹಸೀಲ್ದಾರರು ಅಥವಾ ಇತರ ಪ್ರಾಧಿಕಾರಿಯು ಹೊರಡಿಸಿದ ಆದೇಶವನ್ನು, [2][ಕರ್ನಾಟಕ][2] ಭೂಕಂದಾಯ ಅಧಿನಿಯಮ 1964ರ ಮೇರೆಗೆ ರೆವಿನ್ಯೂ ಅಧಿಕಾರಿಯು ಹೊರಡಿಸಿದ ಆದೇಶವನ್ನು ಜಾರಿ ಮಾಡುವ ರೀತಿಯಲ್ಲೇ ಜಾರಿ ಮಾಡತಕ್ಕದ್ದು.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

[1][**116ಎ. 116ಬಿ.** xxx][1]

1. 1986ರ ಅಧಿನಿಯಮ ಸಂಖ್ಯೆ 19ರ ಮೂಲಕ ಸೇರಿಸಲಾಗಿದೆ ಮತ್ತು 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**117.** xxx][1]

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ

**118. ಅಪೀಲುಗಳು.–** [1][(1) xxx][1]

[2][(1ಎ) xxx][2]

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 19ರ ಮೂಲಕ ಸೇರಿಸಲಾಗಿದೆ ಮತ್ತು 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ಜಿಲ್ಲಾಧಿಕಾರಿಯು ಅಥವಾ [1][77ನೇ ಪ್ರಕರಣದ (1)ನೇ ಉಪಪ್ರಕರಣದ ಅಥವಾ [2][77ಎ ಪ್ರಕರಣದ (1)ನೇ ಉಪಪ್ರಕರಣದ][2] ಮೇರೆಗೆ ಅಧಿಕೃತನಾದ ಅಧಿಕಾರಿಯು ಅಥವಾ ಅಸಿಸ್ಟೆಂಟ್ ಕಮೀಷನರರು ಅಥವಾ 83ನೇ ಪ್ರಕರಣದ ಮೇರೆಗೆ ನಿಯಮಿಸಿದ ಪ್ರಾಧಿಕಾರಿಯು][1] ಮಾಡಿದ ಪ್ರತಿಯೊಂದು ಆದೇಶದ ಮೇಲೆ [3][ಕರ್ನಾಟಕ ಅಪೀಲು ನ್ಯಾಯಾಧಿಕರಣದಲ್ಲಿ][3] ಅಪೀಲು ಮಾಡಲು ಅವಕಾಶ ಇರತಕ್ಕದ್ದು ಮತ್ತು ಅಂಥ ಅಪೀಲಿನ ಮೇಲೆ ರೆವಿನ್ಯೂ ಅಪೀಲು ನ್ಯಾಯಾಧಿಕರಣವು ನೀಡಿದ ಆದೇಶವು ಅಂತಿಮವಾದುದು ಆಗಿರತಕ್ಕದ್ದು.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 2005ರ ಅಧಿನಿಯಮ ಸಂಖ್ಯೆ 17ರ ಮೂಲಕ ದಿನಾಂಕ 28.05.2005 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(2ಎ) x x x][1]

1. 1968ರ ಅಧಿನಿಯಮ ಸಂಖ್ಯೆ 11ರ ಮೂಲಕ ಸೇರಿಸಲಾಗಿದೆ ಮತ್ತು 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(2ಬಿ) ತಹಸೀಲ್ದಾರರು ಮಾಡಿದ ಪ್ರತಿಯೊಂದು ಆದೇಶದ ಮೇಲೆ ಅಸಿಸ್ಟೆಂಟ್ ಕಮೀಷನರರಿಗೆ ಅಪೀಲು ಸಲ್ಲಿಸಲು ಅವಕಾಶ ಇರತಕ್ಕದ್ದು ಮತ್ತು ಅಂಥ ಅಪೀಲಿನ ಮೇಲೆ ಅಸಿಸ್ಟೆಂಟ್ ಕಮೀಷನರ್‌ರು ನೀಡಿದ ಆದೇಶವು ಅಂತಿಮವಾದುದು ಆಗಿರತಕ್ಕದ್ದು.][1]

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(3), (4), (5), (6) xxx][1]

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**118.ಎ. [2][ರೀಜಿನಲ್ ಕಮೀಷನರ][2] ರಿಂದ ಪುನರೀಕ್ಷಣೆ.–** ಅಸಿಸ್ಟೆಂಟ್ ಕಮೀಷನರರು ಮಾಡಿದ ಯಾವ ಆದೇಶದ ವಿರುದ್ಧವಾಗಿ ಅಪೀಲು ಸಲ್ಲಿಸಲು ಅವಕಾಶವಿಲ್ಲವೋ ಆ ಯಾವುದೇ ಆದೇಶದ ಅಭಿಲೇಖವನ್ನು ಅಥವಾ ತಹಸೀಲ್ದಾರರು ಮಾಡಿದ ಯಾವುದೇ ಅದೇಶದ ಅಭಿಲೇಖವನ್ನು ಅಥವಾ ಅಭಿಲೇಖಿಸಿದ ವ್ಯವಹರಣೆಯನ್ನು ಅಂಥ ಆದೇಶದ ಕಾನೂನು ಸಮ್ಮತತೆಯನ್ನು ಅಥವಾ ಔಚಿತ್ಯವನ್ನು ಅಥವಾ ಅಂಥ ವ್ಯವಹರಣೆಯ ಕ್ರಮಬದ್ಧತೆಯನ್ನು ಸ್ವತಃ ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ [2][ರೀಜಿನಲ್ ಕಮೀಷನರರು][2] ತಾವಾಗಿಯೇ ಅಥವಾ ಯಾರೇ ವ್ಯಕ್ತಿಯು ಸಲ್ಲಿಸಿದ ಅರ್ಜಿಯ ಮೇಲೆ ಯಾವುದೇ ಕಾಲದಲ್ಲಿ ತರಿಸಿಕೊಂಡು ಪರೀಕ್ಷಿಸಬಹುದು ಮತ್ತು ಅದರ ಸಂಬಂಧದಲ್ಲಿ ತಾವು ಸೂಕ್ತವೆಂದು ಭಾವಿಸುವಂಥ ಆದೇಶವನ್ನು ಹೊರಡಿಸಬಹುದು:

ಪರಂತು, ಬಾಧಿತನಾದ ವ್ಯಕ್ತಿಗೆ ತನ್ನ ಅಹವಾಲನ್ನು ಹೇಳಿ ಕೊಳ್ಳಲು ಯುಕ್ತ ಅವಕಾಶವನ್ನು ಕೊಟ್ಟ ನಂತರ ಅಂಥ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 2007ರ ಅಧಿನಿಯಮ ಸಂಖ್ಯೆ 17ರ ಮೂಲಕ ದಿನಾಂಕ 05.01.2007 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**119. ಆದೇಶಗಳ ಜಾರಿಗೆ ತಡೆ.–** (1) [1][xxx][1] [2][xxx][2] ಜಿಲ್ಲಾಧಿಕಾರಿಯು [3][ಅಥವಾ 77ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಅಧಿಕೃತನಾದ ಅಧಿಕಾರಿಯು ಅಥವಾ ಪ್ರಾಧಿಕಾರಿಯು ಅಥವಾ ಅಸಿಸ್ಟೆಂಟ್ ಕಮೀಷನರು ಅಥವಾ 83ನೇ ಪ್ರಕರಣದ ಮೇರೆಗೆ ನಿಯಮಿಸಿದ ಪ್ರಾಧಿಕಾರಿಯು][3] [4][ಅಥವಾ ತಹಸೀಲ್ದಾರರು][4] ಅಪೀಲಿಗಾಗಿ ನಿಯಮಿಸಿದ ಅವಧಿಯು ಮುಗಿಯುವುದಕ್ಕೆ ಮುಂಚೆ ಮತ್ತು ಅಪೀಲನ್ನು ದಾಖಲು ಮಾಡುವವರೆಗೆ, ಯಾವುದೇ ಕಾಲದಲ್ಲಿ, ಸಂದರ್ಭಾನುಸಾರ ಅಂಥ [1][xxx][1] [3][ಅಧಿಕಾರಿಯು ಅಥವಾ ಪ್ರಾಧಿಕಾರಿಯು][3] ಮಾಡಿದ ಯಾವುದೇ ಆದೇಶದ ಜಾರಿಯನ್ನು ತಾನು ಸೂಕ್ತವೆಂದು ಭಾವಿಸುವಷ್ಟು ಅವಧಿಯವರೆಗೆ ತಡೆಹಿಡಿಯುವಂತೆ ನಿರ್ದೇಶಿಸಬಹುದು.

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ

2. 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

4. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಅಪೀಲಿಗೆ ಸಂಬಂಧಿಸಿದ ಮೊಕದ್ದಮೆಯು ಯಾವ ಪ್ರಾಧಿಕಾರಿಯ ಮುಂದೆ ಬಾಕಿ ಇದೆಯೋ ಆ ಯಾರೇ ಪ್ರಾಧಿಕಾರಿಯು ಯಾವ ಆದೇಶದ ಮೇಲೆ ಅಪೀಲು ಮಾಡಲಾಗಿದೆಯೋ ಅಂಥ ಆದೇಶದ ಜಾರಿಯನ್ನು ತಾನು ಸೂಕ್ತವೆಂದು ಭಾವಿಸುವ ಅವಧಿಯವರೆಗೆ ತಡೆಹಿಡಿಯುವಂತೆ ನಿರ್ದೇಶಿಸಬಹುದು.

(3) ಯಾವುದೇ ಆದೇಶದ ಜಾರಿಯನ್ನು ಹಾಗೆ ತಡೆಹಿಡಿಯಲು ನಿರ್ದೇಶಿಸುವ [1][xxx][1] ಅಧಿಕಾರಿಯು ಅಥವಾ ಇತರ ಪ್ರಾಧಿಕಾರಿಯು ತಾನು ಸೂಕ್ತವೆಂದು ಭಾವಿಸುವಂಥ ಷರತ್ತುಗಳನ್ನು ವಿಧಿಸಬಹುದು ಅಥವಾ ಅಂಥ ಭದ್ರತೆಯನ್ನು ಕೊಡುವಂತೆ ಆದೇಶಿಸಬಹುದು.

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**120**. xxx][1]

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**121. ಅಪೀಲಿನ ಮೇಲೆ ಆದೇಶಗಳು.–** (1) ಯಾವ ಆದೇಶದ ವಿರುದ್ಧ ಅಪೀಲು ಮಾಡಲಾಗಿದೆಯೋ ಆ ಆದೇಶವನ್ನು ಅಥವಾ ಅದರ ಜಾರಿಯನ್ನು [1][xxx][1] [2][xxx][2] [3][ಕರ್ನಾಟಕ ಅಪೀಲು ನ್ಯಾಯಾಧಿಕರಣವು][3] [4][ಅಥವಾ ಅಸಿಸ್ಟೆಂಟ್ ಕಮೀಷನರರು][4] ಅಪೀಲಿನ ಮೇಲೆ ಸ್ಥಿರೀಕರಿಸಬಹುದು, ಮಾರ್ಪಡಿಸಬಹುದು ಅಥವಾ ರದ್ದುಪಡಿಸಬಹುದು ಅಥವಾ ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ, ಕಾನೂನುಸಮ್ಮತವಾದುದೆಂದು ಮತ್ತು ನ್ಯಾಯೋಚಿತವಾದುದೆಂದು ತನಗೆ ತೋರಬಹುದಾದಂಥ ಇತರ ಆದೇಶವನ್ನು ಹೊರಡಿಸಬಹುದು.

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

4. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಅಪೀಲಿನ ಮೇಲೆ 1[xxx][1] [2][xxx][2] [3][ಕರ್ನಾಟಕ ಅಪೀಲು ನ್ಯಾಯಾಧಿಕರಣವು][3] ಹೊರಡಿಸಿದ ಆದೇಶಗಳನ್ನು 116ನೇ ಪ್ರಕರಣದ ಮೇರೆಗೆ [1][xxx][1] ಆದೇಶಗಳನ್ನು ಜಾರಿ ಮಾಡಲು ಉಪಬಂಧಿಸಿರುವ ರೀತಿಯಲ್ಲಿಯೇ ಜಾರಿ ಮಾಡತಕ್ಕದ್ದು.

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**121ಎ. ಉಚ್ಚ ನ್ಯಾಯಾಲಯದಿಂದ ಪುನರೀಕ್ಷಣೆ.–** ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಉಪಬಂಧಗಳ ಮೇರೆಗೆ ಅಪೀಲು ನ್ಯಾಯಾಧಿಕರಣವು ಅಭಿಲೇಖಿಸಿದ ಯಾವುದೇ ಆದೇಶದ ಅಥವಾ ವ್ಯವಹರಣೆಯ ದಾಖಲೆಗಳನ್ನು, ಅಂಥ ಆದೇಶದ ಕಾನೂನುಸಮ್ಮತತೆಯನ್ನು ಅಥವಾ ಅಂಥ ವ್ಯವಹರಣೆಯ ಕ್ರಮಬದ್ಧತೆಯನ್ನು ಸ್ವತಃ ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ ಉಚ್ಚ ನ್ಯಾಯಲಯವು ಯಾವುದೇ ಕಾಲದಲ್ಲಿ ತರಿಸಿಕೊಳ್ಳಬಹುದು ಮತ್ತು ಅದರ ಸಂಬಂಧದಲ್ಲಿ ತಾನು ಸೂಕ್ತವೆಂದು ಭಾವಿಸುವಂಥ ಆದೇಶವನ್ನು ಮಾಡಬಹುದು:

ಪರಂತು, ಬಾಧಿತ ವ್ಯಕ್ತಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶ ಕೊಟ್ಟ ನಂತರ ಹೊರತು ಅಂಥ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ಸೇರಿಸಲಾಗಿದೆ, 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ಬಿಟ್ಟುಬಿಡಲಾಗಿದೆ ಮತ್ತು ಪುನಃ 1986ರ ಅಧಿನಿಯಮ ಸಂಖ್ಯೆ 19ರ ಮೂಲಕ ದಿನಾಂಕ 06.12.1985 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**122. ಕಾಲ ಪರಿಮಿತಿ.–** ಆದೇಶವನ್ನು ಘೋಷಿಸಿದ ಕಾಲದಲ್ಲಿ ಪಕ್ಷಕಾರನು ಅಥವಾ ಅವನ ಪರವಾಗಿ ಹಾಜರಾಗುವ ವಕೀಲನು ಉಪಸ್ಥಿತನಿದ್ದರೆ, [1][xxx][1] [2][xxx][2] ಜಿಲ್ಲಾಧಿಕಾರಿಯವರು [3][ಅಥವಾ 77ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಅಧಿಕೃತಗೊಂಡ ಅಧಿಕಾರಿಯು][3] ಅಥವಾ ಅಸಿಸ್ಟೆಂಟ್ ಕಮೀಷನರು [4][ಅಥವಾ ನಿಯಮಿಸಿದ ಅಧಿಕಾರಿಯು ಅಥವಾ ತಹಸೀಲ್ದಾರರು][4] ಮಾಡಿದ ಆದೇಶದ ದಿನಾಂಕದಿಂದ ಅರವತ್ತು ದಿವಸಗಳ ಅವಧಿಯೊಳಗಾಗಿ ಮತ್ತು ಇತರ ಸಂದರ್ಭಗಳಲ್ಲಿ ಆದೇಶವನ್ನು ಅಂಚೆಯ ಮೂಲಕ ಪಕ್ಷಕಾರನಿಗೆ ತಲುಪಿಸಿದ ದಿನಾಂಕದಿಂದ ಅರವತ್ತು ದಿವಸಗಳ ಅವಧಿಯೊಳಗಾಗಿ ಈ ಅಧಿನಿಯಮದ ಮೇರೆಗೆ ಪ್ರತಿಯೊಂದು ಅಪೀಲನ್ನು ಸಲ್ಲಿಸತಕ್ಕದ್ದು. [5][ಕಾಲ ಪರಿಮಿತಿ ಅಧಿನಿಯಮ, 1963ರ][5] 4, 5, 12 ಹಾಗೂ 14ನೇ ಪ್ರಕರಣಗಳ ಉಪಬಂಧಗಳು ಅಂಥ ಅಪೀಲಿಗೆ ಅನ್ವಯವಾಗತಕ್ಕದ್ದು.

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

4. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

5. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**122ಎ. ನ್ಯಾಯಾಧಿಕರಣದಿಂದ ಪುನರವಲೋಕನ.–** ನ್ಯಾಯಾಧಿಕರಣವು ತಾನಾಗಿಯೇ ಅಥವಾ ಅನ್ಯಥ, ತಾನು ಅವಶ್ಯವೆಂದು ಪರ್ಯಾಲೋಚಿಸಿದಂಥ ವಿಚಾರಣೆಯನ್ನು ಮಾಡಿದ ತರುವಾಯ 67ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಆದೇಶವನ್ನು ಮೋಸದಿಂದ, ತಪ್ಪು ನಿರೂಪಣೆಯಿಂದ ಅಥವಾ ವಾಸ್ತವ ಸಂಗತಿಗಳನ್ನು ಮುಚ್ಚಿಟ್ಟದರಿಂದ ಅಥವಾ ಸುಳ್ಳು, ತಪ್ಪು ಅಥವಾ ಅಪೂರ್ಣ ಘೋಷಣೆಯನ್ನು ಒದಗಿಸುವ ಮೂಲಕ ಪಡೆಯಲಾಗಿದೆಯೆಂದು ನ್ಯಾಯಾಧಿಕರಣಕ್ಕೆ ಮನದಟ್ಟಾದರೆ, ಅದು ಅಂಥ ಆದೇಶದ ದಿನಾಂಕದಿಂದ ಎರಡು ವರ್ಷಗಳ ಅವಧಿಯೊಳಗಾಗಿ ಅಥವಾ

[2][[3][1995ರ ಡಿಸೆಂಬರ್ 31ನೇ ದಿನಾಂಕ][3]][2] ದೊಳಗಾಗಿ, ಇವುಗಳಲ್ಲಿ ಯಾವುದು ತರುವಾಯದ್ದೋ, ಆ ಅವಧಿಯೊಳಗಾಗಿ ಮೊಕದ್ದಮೆಯನ್ನು ಪುನರಾರಂಭಿಸಬಹುದು ಮತ್ತು ಅದಕ್ಕೆ ಸಂಬಂಧಿಸಿದಂತೆ ತಾನು ಸೂಕ್ತವೆಂದು ಭಾವಿಸುವಂಥ ಆದೇಶವನ್ನು ಹೊರಡಿಸಬಹುದು:

ಪರಂತು, ಅದರಿಂದ ಬಾಧಿತನಾಗವ ಸಂಭವ ಇರುವ ವ್ಯಕ್ತಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ಕೊಟ್ಟ ತರುವಾಯ ಹೊರತು ಅಂಥ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.][1]

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1982ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1992ರ ಅಧಿನಿಯಮ ಸಂಖ್ಯೆ 9ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**123. ನ್ಯಾಯಾಲಯ – ಫೀಜುಗಳು.–** [1][(1)][1] [2][ಕರ್ನಾಟಕ][2] ನ್ಯಾಯಾಲಯ – ಫೀಜುಗಳು ಮತ್ತು ದಾವೆಗಳ ಮೌಲ್ಯ ನಿರ್ಧರಣೆ ಅಧಿನಿಯಮ, 1958ರಲ್ಲಿ ಏನೇ ಒಳಗೊಂಡಿದ್ದರೂ, [3][ನ್ಯಾಯಾಲಯಕ್ಕೆ,][3] [4][ತಹಶೀಲ್ದಾರರಿಗೆ,][4] ಅಸಿಸ್ಟೆಂಟ್ ಕಮೀಷನರರಿಗೆ, [5][ನ್ಯಾಯಾಧಿಕರಣಕ್ಕೆ,][5] ಜಿಲ್ಲಾಧಿಕಾರಿಯವರಿಗೆ, [3][ಜಿಲ್ಲಾ ನ್ಯಾಯಾಲಯಕ್ಕೆ][3] ಅಥವಾ [2][ಕರ್ನಾಟಕ ಅಪೀಲು ನ್ಯಾಯಾಧಿಕರಣಕ್ಕೆ][2] ಅಥವಾ ಇತರ ಪ್ರಾಧಿಕಾರಿಗೆ ಈ ಅಧಿನಿಯಮದ ಮೇರೆಗೆ ಸಲ್ಲಿಸಿದ ಪ್ರತಿಯೊಂದು ಅರ್ಜಿಯ ಜೊತೆಗೆ ಅಥವಾ ಅಪೀಲಿನ ಜೊತೆಗೆ ನಿಯಮಿಸಬಹುದಾದಂಥ ಮೌಲ್ಯದ ನ್ಯಾಯಾಲಯ – ಫೀಜಿನ ಸ್ಟಾಂಪನ್ನು ಇರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 19ರ ಮೂಲಕ ದಿನಾಂಕ 06.12.1985 ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

2. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

3. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

4. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

5. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(2) ಕರ್ನಾಟಕ ನ್ಯಾಯಾಲಯ ಫೀಜುಗಳು ಮತ್ತು ದಾವೆಗಳ ಮೌಲ್ಯನಿರ್ಧರಣೆ ಅಧಿನಿಯಮ, 1958ರಲ್ಲಿ (1958ರ ಕರ್ನಾಟಕ ಅಧಿನಿಯಮ 6) ಏನೇ ಒಳಗೊಂಡಿದ್ದರೂ, ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1990ರ 17ನೇ ಪ್ರಕರಣದ ಮೇರೆಗೆ ಉಚ್ಚ ನ್ಯಾಯಾಲಯವು ರಿಟ್ ಅರ್ಜಿಯೆಂದು ಪರಿಗಣಿಸಿದ ಪ್ರತಿಯೊಂದು ಅಪೀಲಿನ ಮೇಲೆ ಯಾವುದೇ ನ್ಯಾಯಾಲಯ ಫೀಜನ್ನು ಸಂದಾಯ ಮಾಡತಕ್ಕದ್ದಲ್ಲ.][1]

1. 1986ರ ಅಧಿನಿಯಮ ಸಂಖ್ಯೆ 19ರ ಮೂಲಕ ಸೇರಿಸಲಾಗಿದೆ, ಮತ್ತು 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಲಾಗಿದೆ.

**124. ವಿಚಾರಣೆಗಳು ಮತ್ತು ವ್ಯವಹರಣೆಗಳು.–** [1][xxx][1] ಜಿಲ್ಲಾಧಿಕಾರಿಯವರ, [2][ನ್ಯಾಯಾಧಿಕರಣದ,][2] [3][xxx][3] ಅಸಿಸ್ಟೆಂಟ್ ಕಮೀಷರರ ಅಥವಾ [4][ತಹಶೀಲ್ದಾರರ][4] ಅಥವಾ [5][ಕರ್ನಾಟಕ ಅಪೀಲು ನ್ಯಾಯಾಧಿಕರಣದ][5] ಮುಂದಿರುವ ಎಲ್ಲ ವಿಚಾರಣೆಗಳನ್ನು ಮತ್ತು ವ್ಯವಹರಣೆಗಳನ್ನು ಭಾರತ ದಂಡ ಸಂಹಿತೆಯ 193, 219 ಮತ್ತು 228ನೇ ಪ್ರಕರಣಗಳ ಅರ್ಥವ್ಯಾಪ್ತಿಯೊಳಗೆ ನ್ಯಾಯಿಕ ವ್ಯವಹರಣೆಗಳೆಂದೇ ಭಾವಿಸತಕ್ಕದ್ದು.

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1990ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 08.10.1990 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

4. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

5. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

## ಅಧ್ಯಾಯ – X

## ಅಪರಾಧಗಳು ಮತ್ತು ದಂಡಗಳು

**125. ಅಪರಾಧಗಳು ಮತ್ತು ದಂಡಗಳು.–** (1) ಈ ಕೆಳಕಂಡ ಕೋಷ್ಟಕದ ಮೊದಲನೆಯ ಅಂಕಣದಲ್ಲಿ ನಮೂದಿಸಿರುವ ಪ್ರಕರಣಗಳಲ್ಲಿ ಯಾವುದೇ ಪ್ರಕರಣದ ಯಾವುದೇ ಉಪಬಂಧವನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯನ್ನು ಮ್ಯಾಜಿಸ್ಟ್ರೇಟನಿಂದ ಅಪರಾಧ ನಿರ್ಣಯವಾದ ಮೇಲೆ ಅಂಥ ಪ್ರತಿಯೊಂದು ಅಪರಾಧದ ಬಗ್ಗೆ ಸದರಿ ಕೋಷ್ಟಕದ ಎರಡನೆಯ ಅಂಕಣದಲ್ಲಿ ಆ ಬಗ್ಗೆ ನಮೂದಿಸಿರುವ ಮೊಬಲಗಿನವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಶಿಕ್ಷೆಗೆ ಗುರಿಪಡಿಸತಕ್ಕದ್ದು.

**ಕೋಷ್ಟಕ**

| ಪ್ರಕರಣ | ವಿಧಿಸಬಹುದಾದ ಜುಲ್ಮಾನೆ |
|---|---|
| 1 | 2 |
| | ರೂ.ಗಳು |
| 12ನೇ ಪ್ರಕರಣ | 1000 |
| 33ನೇ ಪ್ರಕರಣ | 500 |
| 41ನೇ ಪ್ರಕರಣ | 1000 |
| 129ನೇ ಪ್ರಕರಣ | 250 |

[1][(1ಎ) 66ನೇ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ಘೋಷಣೆಯನ್ನು ಒದಗಿಸಲು ಯಾವ ವ್ಯಕ್ತಿಯು ಬದ್ಧನಾಗಿರುವನೋ ಆ ಯಾರೇ ವ್ಯಕ್ತಿಯು ಸದರಿ ಉಪಪ್ರಕರಣದ ಮೇರೆಗೆ ಅದಕ್ಕೆ ನಿರ್ದಿಷ್ಟಪಡಿಸಿರುವ ಅವಧಿಯೊಳಗೆ ಘೋಷಣೆಯನ್ನು ಒದಗಿಸಲು ನಿರಾಕರಿಸಿದರೆ ಅಥವಾ ವಿಫಲನಾದರೆ ಅಥವಾ ಸುಳ್ಳೆಂದು ತನಗೆ ತಿಳಿದಿರುವ ಅಥವಾ ಸುಳ್ಳೆಂದು ನಂಬಲು ತನಗೆ ಕಾರಣವಿರುವ ಅಥವಾ ಅಪೂರ್ಣವಾದ ಯಾವುದೇ ಘೋಷಣೆಯನ್ನು ಒದಗಿಸಿದರೆ ಅವನು, ಮ್ಯಾಜಿಸ್ಟ್ರೇಟ್‌ರಿಂದ ಅಪರಾಧ ನಿರ್ಣಯ ಆದ ಬಳಿಕ ಆರು ತಿಂಗಳಿಗಿಂತ ಕಡಿಮೆಯಿರದಂಥ ಆದರೆ ಒಂದು ವರ್ಷದವರೆಗೆ ವಿಸ್ತರಿಸಬಹುದಾದಂಥ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಶಿಕ್ಷೆಗೆ ಗುರಿಯಾಗತಕ್ಕದ್ದು.][1]

1. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) [1][ಉಪಪ್ರಕರಣ (1ಎ)ಯಲ್ಲಿ ಉಪಬಂಧಿಸಿರುವಂತೆ ಹೊರತು,][1] [2][IV ಅಥವಾ Vನೇ ಅಧ್ಯಾಯದ ಮೇರೆಗೆ][2] ಘೋಷಣೆಯನ್ನು ಒದಗಿಸಲು ಯಾವ ವ್ಯಕ್ತಿಯು ಬದ್ಧನಾಗಿರುವನೋ [1][ಆ ಯಾರೇ ವ್ಯಕ್ತಿಯು][1] ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಈ ಬಗ್ಗೆ ನಿರ್ದಿಷ್ಟಪಡಿಸಿದ ಅವಧಿಯೊಳಗಾಗಿ ಘೋಷಣೆಯನ್ನು ಒದಗಿಸಲು ನಿರಾಕರಿಸಿದರೆ ಅಥವಾ ತಪ್ಪಿದರೆ ಅಥವಾ ಸುಳ್ಳೆಂದು ತನಗೆ ಗೊತ್ತಿದ್ದ ಅಥವಾ ಸುಳ್ಳೆಂದು ನಂಬಲು ತನಗೆ ಕಾರಣವಿರುವ ಅಥವಾ ಅಪೂರ್ಣವಾದ ಯಾವುದೇ ಘೋಷಣೆಯನ್ನು ಒದಗಿಸಿದರೆ ಅವನು, ಮ್ಯಾಜಿಸ್ಟ್ರೇಟರಿಂದ ಅಪರಾಧ ನಿರ್ಣಯವಾದ ಬಳಿಕ ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಮೊದಲನೆಯ ಅಪರಾಧ ನಿರ್ಣಯವಾದ ನಂತರ ಸದರಿ ಅಪರಾಧವು ಮುಂದುವರಿಯುವ ಅವದಿಯಲ್ಲಿ ಪ್ರತಿ ದಿನಕ್ಕೆ ಹತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ಶಿಕ್ಷೆಗೆ ಗುರಿಯಾಗತಕ್ಕದ್ದು.

**ವಿವರಣೆ.–** ಸುಳ್ಳು, ಸರಿಯಿಲ್ಲದ ಅಥವಾ ಅಪೂರ್ಣವಾದ ಘೋಷಣೆಯನ್ನು ಒದಗಿಸಿದರೆ, ನಿಜವಾದ, ಸರಿಯಾದ ಮತ್ತು ಪೂರ್ಣವಾದ ಘೋಷಣೆಯನ್ನು ಒದಗಿಸುವವರೆಗೆ ಅಪರಾಧವು ಮುಂದುವರಿಯುವುದೆಂದು ಭಾವಿಸತಕ್ಕದ್ದು.

1. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(2ಎ) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಮೇರೆಗೆ ಯಾವುದೇ [2][ವಿವರ ಪಟ್ಟಿಕೆಯನ್ನು, ವಿವರಣಾ ಪಟ್ಟಿಯನ್ನು ಅಥವಾ][2] ಮಾಹಿತಿಯನ್ನು ಒದಗಿಸಲು ಯಾವ ವ್ಯಕ್ತಿಯು ಬದ್ಧನಾಗಿರುವನೋ ಆ ಯಾರೇ ವ್ಯಕ್ತಿಯು ಸುಳ್ಳೆಂದು ತನಗೆ ಗೊತ್ತಿದ್ದ ಅಥವಾ ಸುಳ್ಳೆಂದು ನಂಬಲು ತನಗೆ ಕಾರಣವಿರುವ ಯಾವುದೇ [2][ವಿವರ ಪಟ್ಟಿಕೆಯನ್ನು, ವಿವರಣಾ ಪಟ್ಟಿಯನ್ನು ಅಥವಾ][2] ಮಾಹಿತಿಯನ್ನು ಒದಗಿಸಿದರೆ, ಅವನು, ಮಾಜಿಸ್ಟ್ರೇಟನಿಂದ ಅಪರಾಧ ನಿರ್ಣಯವಾದ ಬಳಿಕ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಶಿಕ್ಷೆಗೆ ಗುರಿಯಾಗಗತಕ್ಕದ್ದು.

(2ಬಿ) 81ಎ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ನೋಂದಣಿ ಪ್ರಾಧಿಕಾರಿಯ ಮುಂದೆ ಯಾರೇ ವ್ಯಕ್ತಿಯು, ತನಗೆ ಸುಳ್ಳೆಂದು ಗೊತ್ತಿದ್ದ ಅಥವಾ ಸುಳ್ಳೆಂದು ನಂಬಲು ಕಾರಣವಿರುವ ಯಾವುದೇ ಘೋಷಣೆಯನ್ನು ಮಾಡಿದರೆ ಅವನು, ಮ್ಯಾಜಿಸ್ಟ್ರೇಟ್‌ನಿಂದ ಅಪರಾಧ ನಿರ್ಣಯವಾದ ಬಳಿಕ, ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಶಿಕ್ಷೆಗೆ ಗುರಿಯಾಗತಕ್ಕದ್ದು.

(2ಸಿ) ಯಾರೇ ವ್ಯಕ್ತಿಯು, ಈ ಅಧಿನಿಯಮದ ಯಾವುದೇ ಉಪಬಂಧಗಳ ಯಾವ ಉಲ್ಲಂಘನೆಯು ಹಿಂದಿನ ಉಪಪ್ರಕರಣಗಳಲ್ಲಿ ಯಾವುದೇ ಉಪಪ್ರಕರಣದ ಮೇರೆಗೆ ಶಿಕ್ಷಾರ್ಹವಾದುದಾಗಿಲ್ಲವೋ ಆ ಉಲ್ಲಂಘನೆಯನ್ನು ಮಾಡಿದರೆ ಅಥವಾ ಈ ಅಧಿನಿಯಮದ ಮೇರೆಗೆ ಹೊರಡಿಸಿದ ಯಾವುದೇ ಕಾನೂನುಬದ್ಧವಾದ ಆದೇಶವನ್ನು ಬುದ್ಧಿಪೂರ್ವಕವಾಗಿ ಉಲ್ಲಂಘಿಸಿದರೆ ಅವನು, ಮ್ಯಾಜಿಸ್ಟ್ರೇಟನಿಂದ ಅಪರಾಧ ನಿರ್ಣಯವಾದ ಬಳಿಕ, ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಶಿಕ್ಷೆಗೆ ಗುರಿಯಾಗತಕ್ಕದ್ದು.

(2ಡಿ) ಈ ಅಧಿನಿಯಮದ ಯಾವುದೇ ಉಪಬಂಧದ ಮೇರೆಗೆ ಯಾವುದೇ ಭೂಮಿಯು ಸರ್ಕಾರದಲ್ಲಿ ನಿಹಿತವಾಗುವ ದಿನಾಂಕದ ನಂತರ ಮತ್ತು ಈ ಅಧಿನಿಯಮದ ಮೇರೆಗೆ ಅಂಥ ಭೂಮಿಯನ್ನು ವಿಲೆಮಾಡುವುದಕ್ಕೆ ಮುಂಚೆ, ಯಾರೇ ವ್ಯಕ್ತಿಯು ಆ ಭೂಮಿಯಲ್ಲಿರುವ ಮರಗಳನ್ನು ಕಡಿದರೆ ಅಥವಾ ಕಡಿಸಿದರೆ, ಅಥವಾ ಆ ಭೂಮಿಯ ಮೇಲೆ ಕಟ್ಟಿರುವ, ನಿರ್ಮಿಸಿರುವ ಅಥವಾ ನೆಲೆಗೊಳಿಸಿರುವ ಮತ್ತು ಕೃಷಿ ಉದ್ದೇಶಗಳಿಗಾಗಿ ಬಳಸಲಾದ ಯಾವುದೇ ಕಟ್ಟಡವನ್ನು, ಯಂತ್ರೋಪಕರಣವನ್ನು, ಸ್ಥಾವರವನ್ನು ಅಥವಾ ಉಪಕರಣವನ್ನು ತೆಗೆದು ಹಾಕಿದರೆ ಅಥವಾ ತೆಗೆದು ಹಾಕಿಸಿದರೆ, ಅಥವಾ ಆ ಭೂಮಿಯ ಉಪಯುಕ್ತತೆಯನ್ನು ಕಡಿಮೆ ಮಾಡುವ ಸಂಭವವಿರುವ ಯಾವುದೇ ಕೃತ್ಯವನ್ನು ಮಾಡಿದರೆ ಅಥವಾ ಮಾಡಿಸಿದರೆ, ಅವನು, ಮ್ಯಾಜಿಸ್ಟ್ರೇಟರಿಂದ ಅಪರಾಧ ನಿರ್ಣಯವಾದ ಬಳಿಕ, ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ಶಿಕ್ಷೆಗೆ ಗುರಿಯಾಗತಕ್ಕದ್ದು.][1]

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) 12ನೇ ಪ್ರಕರಣ, 33ನೇ ಉಪಪ್ರಕರಣದ (2)ನೇ ಉಪಪ್ರಕರಣದ ಅಥವಾ 41ನೇ ಪ್ರಕರಣದ ಉಪಬಂಧಗಳ ಉಲ್ಲಂಘನೆಯ ಅಪರಾಧವು [1][ಅಥವಾ (2ಡಿ) ಉಪಪ್ರಕರಣದ ಮೇರೆಗೆ ಶಿಕ್ಷಾರ್ಹವಾದ ಅಪರಾಧವು][1] ಸಂಜ್ಞೇಯವಾದುದು ಆಗಿರತಕ್ಕದ್ದು.

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ – XI

## ಸಂಕೀರ್ಣ

**126. ಇನಾಮುಗಳಿಗೆ ಅಧಿನಿಯಮದ ಅನ್ವಯ.–** ಸಂದೇಹಗಳ ನಿವಾರಣೆಗಾಗಿ, ಈ ಅಧಿನಿಯಮದ ಉಪಬಂಧಗಳು, ಅವು ಗೇಣಿದಾರರಿಗೆ ಮತ್ತು ಭೂಮಾಲೀಕರಿಗೆ ಯಾವುವೇ ಅಧಿಕಾರಗಳನ್ನು ಎಷ್ಟರ ಮಟ್ಟಿಗೆ ಪ್ರದಾನ ಮಾಡುತ್ತವೆಯೋ ಅಷ್ಟರ ಮಟ್ಟಿಗೆ ಮತ್ತು ಅವರ ಮೇಲೆ ಬಾಧ್ಯತೆಗಳನ್ನು ಎಷ್ಟರಮಟ್ಟಿಗೆ ವಿಧಿಸುತ್ತವೆಯೋ ಅಷ್ಟರ ಮಟ್ಟಿಗೆ ಇನಾಮು ಪ್ರಕಾರ ಭೂಮಿಗಳನ್ನು ಧಾರಣ ಮಾಡಿರುವ ಮತ್ತು ಯಾವ ಗ್ರಾಮಗಳಲ್ಲಿ ಭೂಮಿಗಳ ಪರಭಾರ ಆಗಿದೆಯೋ ಆ ಭೂಮಿಗಳನ್ನೇ ಧಾರಣ ಮಾಡಿರುವ ಅಥವಾ ಪರಭಾರೆ ಮಾಡಿರುವ ಭೂಮಿಗಳಲ್ಲಿ ಆ ಭೂಮಿಗಳನ್ನು ಧಾರಣ ಮಾಡಿರುವ

ಗೇಣಿದಾರರಿಗೆ, [1][(ಗ್ರಾಮ ಹುದ್ದೆಗಳ ರದ್ದಿಯಾತಿ ಅಧಿನಿಯಮ, 1961ರ 8ನೇ ಪ್ರಕರಣದಲ್ಲಿ ಉಲ್ಲೇಖಿಸಿದ ಗೇಣಿದಾರರು ಒಳಗೊಂಡಂತೆ ಆದರೆ, ಸದರಿ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟ)][1] ಮತ್ತು ಅಂಥ ಗ್ರಾಮಗಳಲ್ಲಿ ಅಥವಾ ಅಂಥ ಭೂಮಿಗಳಲ್ಲಿ ಭೂಮಿಯನ್ನು ಧಾರಣ ಮಾಡುವ ಭೂಮಾಲೀಕರಿಗೆ ಮತ್ತು ಇನಾಮುದಾರರಿಗೆ ಅನ್ವಯವಾಗತಕ್ಕದ್ದು ಎಂದು ಈ ಮೂಲಕ ಘೋಷಿಸಲಾಗಿದೆ.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**127. ಬಡ ಗೇಣಿದಾರರಿಗೆ ಕಾನೂನು ನೆರವು.–** ರಾಜ್ಯ ಸರ್ಕಾರವು ರಚಿಸಬಹುದಾದಂಥ ನಿಯಮಗಳಿಗೊಳಪಟ್ಟು, ಯಾವ ಗೇಣಿದಾರರ ಹಣಕಾಸಿನ ಪರಿಸ್ಥಿತಿಗಳು, ಅಂಥ ಗೇಣಿದಾರರಿಗೆ ಕಾನೂನು ನೆರವು ಬೇಕಾಗಿದೆಯೆಂದು ರಾಜ್ಯ ಸರ್ಕಾರವು ಅಭಿಪ್ರಾಯ ಪಡುವಂಥ ರೀತಿಯಲ್ಲಿ ಇವೆಯೋ ಆ ಗೇಣಿದಾರರಿಗೆ ಈ ಅಧಿನಿಯಮದ ಮೇರೆಗಿನ ವ್ಯವಹರಣೆಗಳಲ್ಲಿ ರಾಜ್ಯ ಸರ್ಕಾರವು ಕಾನೂನು ನೆರವನ್ನು ಒದಗಿಸಬಹುದು.

[1][**127ಎ. ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ಗರಿಷ್ಠ ಮೊಬಲಗು.–** ವ್ಯಕ್ತಿಯು 47ನೇ ಪ್ರಕರಣದ ಮೇರೆಗೆ ಮತ್ತು (6)ನೇ ಉಪಪ್ರಕರಣವನ್ನು ಹೊರತುಪಡಿಸಿ 72ನೇ ಪ್ರಕರಣದ ಮೇರೆಗೆ ಸಹ ಮೊಬಲಗಿನ ಸಂದಾಯಕ್ಕೆ ಹಕ್ಕುಳ್ಳವನಾಗಿರುವಲ್ಲಿ ಸದರಿ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ ಅಂಥ ವ್ಯಕ್ತಿಗೆ ಸಂದಾಯಮಾಡಬೇಕಾದ ಮೊಬಲಗು ಒಟ್ಟು ಎರಡು ಲಕ್ಷ ರೂಪಾಯಿಗಳಿಗೆ ಮೀರತಕ್ಕದ್ದಲ್ಲ.][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**128. ತುಂಡು ಭೂಮಿಗಳ ವಿಲೇವಾರಿ.–** ಈ ಅಧಿನಿಯಮದ ಉಪಬಂಧಗಳ ಮೇರೆಗೆ ಯಾವುದೇ ಭೂಮಿಯು ಸರ್ಕಾರದಲ್ಲಿ ನಿಹಿತವಾಗುವುದರಿಂದ ಅಥವಾ ಯಾವುದೇ ಭೂಮಿಯನ್ನು [1][ಜಿಲ್ಲಾಧಿಕಾರಿಯವರು][1] ಮಂಜೂರು ಮಾಡುವುದರಿಂದ ಅಥವಾ ಅನ್ಯಥಾ, ಈ ಅಧಿನಿಯಮದ ಮೇರೆಗೆ ಒಬ್ಬ ವ್ಯಕ್ತಿಯು ಧಾರಣ ಮಾಡಲು ಹಕ್ಕುಳ್ಳ ಗರಿಷ್ಠ ಮಿತಿ ವಿಸ್ತೀರ್ಣದ ಭೂಮಿಗಿಂತ ಹೆಚ್ಚಿಗೆ ಇರುವ ಯಾವುದೇ ವಿಸ್ತೀರ್ಣದ ಭೂಮಿಯು ತುಂಡು ಭೂಮಿಯಾಗಿ ಉಳಿದರೆ, [1][ಜಿಲ್ಲಾಧಿಕಾರಿಯವರು][1] ಕೃಷಿ ಉದ್ದೇಶಗಳಿಗಾಗಿ ಅದರ ಫಲಪ್ರದವಾದ ಬಳಕೆಯನ್ನು ಗಮನದಲ್ಲಿಟ್ಟುಕೊಂಡು ಮತ್ತು 63ನೇ ಅಥವಾ 64ನೇ ಪ್ರಕರಣದ ಉಪಬಂಧಗಳಲ್ಲಿ ಏನೇ ಒಳಗೊಂಡಿದ್ದರೂ ಆ ತುಂಡು ಭೂಮಿಯನ್ನು ಧಾರಣ ಮಾಡಲು ಅಂಥ ತುಂಡು ಭೂಮಿಯ ಒಡೆಯನಿಗೆ ಅನುಮತಿ ಕೊಡಬಹುದು.

1. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**129. ಸ್ವಾಧೀನ ಹೊಂದಿರುವ ವ್ಯಕ್ತಿಗಳನ್ನು ಕಾನೂನುಬದ್ಧ ಆದೇಶಗಳ ಮೇರೆಗೆ ಹೊರತು ಸ್ವಾಧೀನತೆಯಿಂದ ತಪ್ಪಿಸಲಾಗದು.–** (1) ತತ್ಕಾಲದಲ್ಲಿ ಜಾರಿಯಲ್ಲಿರುವ, ಯಾವುದೇ ಕಾನೂನಿನ ಮೇರೆಗೆ ಹೊರತು, ಭೂಮಿಯ ಸ್ವಾಧೀನವನ್ನು ಕಾನೂನುಬದ್ಧವಾಗಿ ಹೊಂದಿರುವ ಯಾರೇ ಭೂಮಾಲೀಕನನ್ನು, ಗೇಣಿದಾರನನ್ನು ಅಥವಾ ಇತರ ವ್ಯಕ್ತಿಯನ್ನು ಅಂಥ ಭೂಮಿಯ ಸ್ವಾಧೀನದಿಂದ ಯಾರೇ ವ್ಯಕ್ತಿಯು ತಪ್ಪಿಸತಕ್ಕದ್ದಲ್ಲ.

(2) ಉಪಪ್ರಕರಣ (1)ನ್ನು ಉಲ್ಲಂಘಿಸಿ, ಯಾರೇ ವ್ಯಕ್ತಿಯನ್ನು ಯಾವುದೇ ಭೂಮಿಯ ಸ್ವಾಧೀನದಿಂದ ತಪ್ಪಿಸಿದಲ್ಲಿ, ಅಂಥ ವ್ಯಕ್ತಿಯು, ಹಾಗೆ ಸ್ವಾಧೀನವನ್ನು ತಪ್ಪಿಸಿದ ದಿನಾಂಕದಿಂದ ಎರಡು ವರ್ಷದೊಳಗಾಗಿ ಅಂಥ ಉಲ್ಲಂಘನೆಯ ಬಗ್ಗೆ ಆಕ್ಷೇಪಿಸಿ ಲಿಖಿತದಲ್ಲಿ [1][ತಹಸೀಲ್ದಾರ][1]ನಿಗೆ ಅರ್ಜಿಯನ್ನು ಸಲ್ಲಿಸಬಹುದು.

(3) ಉಪಪ್ರಕರಣ (2)ರ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದ ನಂತರ, [1][ತಹಶೀಲ್ದಾರರು][1] ವಿಚಾರಣೆಯನ್ನು ನಡೆಸಿದ ತರುವಾಯ, ಮತ್ತು 125ನೇ ಪ್ರಕರಣದ ಮೇರೆಗೆ ಕೈಗೊಳ್ಳಬಹುದಾದ ಯಾವುದೇ ಕ್ರಮಕ್ಕೆ ಬಾಧಕವಾಗದಂತೆ ಮತ್ತು ಉಪಪ್ರಕರಣವನ್ನು ಉಲ್ಲಂಘಿಸಿದ ವ್ಯಕ್ತಿಯು, ಭೂಮಿಯ ಸ್ವಾಧೀನದಿಂದ ತಪ್ಪಿಸಿದ್ದ ವ್ಯಕ್ತಿಗೆ [1][ತಹಶೀಲ್ದಾರರು][1] ನಿರ್ಧರಿಸಬಹುದಾದಂಥ ಪರಿಹಾರವನ್ನು ಸಂದಾಯ ಮಾಡುವಂತೆ (1)ನೇ ಉಪಪ್ರಕರಣವನ್ನು ಉಲ್ಲಂಘಿಸಿದ ವ್ಯಕ್ತಿಗೆ ನಿರ್ದೇಶನ ನೀಡುವುದು ಸೇರಿದಂತೆ ಆ ಅರ್ಜಿಯ ಮೇಲೆ [1][ಸೂಕ್ತವೆಂದು ತಾವು ಭಾವಿಸುವಂಥ][1] ಆದೇಶವನ್ನು ಹೊರಡಿಸತಕ್ಕದ್ದು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**130. ಕ್ಷಿಪ್ರವಾಗಿ ಒಕ್ಕಲೆಬ್ಬಿಸುವುದು.–** ಯಾರೇ ವ್ಯಕ್ತಿಯು–

(ಎ) ಪಕ್ಷಕಾರರ ಕಾರ್ಯದ ಮೂಲಕವಾಗಲಿ ಅಥವಾ ಕಾನೂನಿನ ಪ್ರವರ್ತನೆಯ ಮೂಲಕವಾಗಲಿ ಯಾವ ಭೂಮಿಯ ವರ್ಗಾವಣೆಯು ಅಥವಾ ಆರ್ಜನೆಯು ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅಸಿಂಧುವಾಗಿದೆಯೋ; ಅಥವಾ

(ಬಿ) ಯಾವ ಭೂಮಿಯ ಬಳಕೆಗೆ ಮತ್ತು ಅಧಿಭೋಗಕ್ಕೆ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅವನು ಹಕ್ಕುಳ್ಳವನಾಗಿಲ್ಲವೊ ಮತ್ತು ಅಂಥ ವ್ಯಕ್ತಿಯನ್ನು ಒಕ್ಕಲೆಬ್ಬಿಸುವ ರೀತಿಯನ್ನು ಸದರಿ ಉಪಬಂಧಗಳಲ್ಲಿ ಉಪಬಂಧವನ್ನು ಕಲ್ಪಿಸಿಲ್ಲವೋ

– ಆ ಯಾವುದೇ ಭೂಮಿಯನ್ನು ಅನಧಿಕೃತವಾಗಿ ಅಧಿಭೋಗಿಸುತ್ತಿದ್ದರೆ ಅಥವಾ ಅದರ ಸ್ವಾಧೀನವನ್ನು ದೋಷಯುಕ್ತವಾಗಿ ಹೊಂದಿದ್ದರೆ ಅವನನ್ನು [1][ತಹಶೀಲ್ದಾರರು][1] [1][ಯುಕ್ತವೆಂದು ತಾನು ಭಾವಿಸುವಂಥ][1] ವಿಚಾರಣೆಯನ್ನು ನಡೆಸಿದ ನಂತರ, ಅಂಥ ಭೂಮಿಯಿಂದ ಕ್ಷಿಪ್ರವಾಗಿ ಒಕ್ಕಲೆಬ್ಬಿಸಬಹುದು ಮತ್ತು ಅಂಥ ಭೂಮಿಯನ್ನು ವಿಲೇ ಮಾಡುವುದಕ್ಕೆ ಸಂಬಂಧಿಸಿದಂತೆ [1][ಯುಕ್ತವೆಂದು ತಾವು ಭಾವಿಸುವಂಥ][1] ಆದೇಶಗಳನ್ನು [1][ತಹಶೀಲ್ದಾರರು][1] ಮಾಡಬಹುದು.

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**131.** xxx][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**132. ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ.–** (1) ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ, [1][xxx][1] ಜಿಲ್ಲಾಧಿಕಾರಿಯವರು, [2][77ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಅಧಿಕಾರ ಪಡೆದ ಅಧಿಕಾರಿಯು, ಅಸಿಸ್ಟೆಂಟ್ ಕಮೀಷನರರು, 83ನೇ ಪ್ರಕರಣದ ಮೇರೆಗೆ ನಿಯಮಿಸಿದ ಪ್ರಾಧಿಕಾರಿಯು,][2] [3][ನ್ಯಾಯಾಧಿಕರಣವು,][3] [4][ತಹಶೀಲ್ದಾರರು,][4] [5][ಕರ್ನಾಟಕ ಅಪೀಲು ನ್ಯಾಯಾಧಿಕರಣ][5] ಅಥವಾ ರಾಜ್ಯ ಸರ್ಕಾರವು ತಮ್ಮ ನಿಯಂತ್ರಣಾ ಅಧಿಕಾರಗಳನ್ನು ಚಲಾಯಿಸಿ ಇತ್ಯರ್ಥಪಡಿಸಬೇಕಾದ, ತೀರ್ಮಾನಿಸಬೇಕಾದ ಅಥವಾ ವ್ಯವಹರಿಸಬೇಕಾದ ಯಾವುದೇ ವಿಷಯವನ್ನು ಇತ್ಯರ್ಥಪಡಿಸಲು, ತೀರ್ಮಾನಿಸಲು ಅಥವಾ ವ್ಯವಹರಿಸಲು ಯಾವುದೇ ಸಿವಿಲ್ ನ್ಯಾಯಾಲಯಕ್ಕೂ ಅಧಿಕಾರ ವ್ಯಾಪ್ತಿ ಇರತಕ್ಕದ್ದಲ್ಲ.

(2) [1][xxx][1] ಜಿಲ್ಲಾಧಿಕಾರಿಯವರು, [2][77ನೇ ಪ್ರಕರಣದ (1)ನೇ ಉಪಪ್ರಕರಣದ ಮೆರೆಗೆ ಅಧಿಕಾರ ಪಡೆದ ಅಧಿಕಾರಿಯು, ಅಸಿಸ್ಟೆಂಟ್ ಕಮೀಷನರರು, 83ನೇ ಪ್ರಕರಣದ ಮೇರೆಗೆ][2] ನಿಯಮಿಸಿದ ಪ್ರಾಧಿಕಾರಿಯು, [3][ನ್ಯಾಯಾಧಿಕರಣವು,][3] [4][ತಹಸೀಲ್ದಾರರು,][4] [5][ಕರ್ನಾಟಕ ಅಪೀಲು ನ್ಯಾಯಾಧಿಕರಣವು][5] ಅಥವಾ ರಾಜ್ಯ ಸರ್ಕಾರವು ಈ ಅಧಿನಿಯಮದ ಮೇರೆಗೆ ಮಾಡಿದ ಯಾವುದೇ ಆದೇಶವನ್ನು ಯಾವುದೇ ಸಿವಿಲ್ ಅಥವಾ ಕ್ರಿಮಿನಲ್ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದ್ದಲ್ಲ.

1. 1976ರ ಅಧಿನಿಯಮ ಸಂಖ್ಯೆ 18ರ ಮೂಲಕ ದಿನಾಂಕ 11.09.1975 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.01.1979 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

4. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

5. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**133. ನ್ಯಾಯಾಧಿಕರಣವು ತೀರ್ಮಾನಿಸಬೇಕಾದ ಪ್ರಶ್ನೆಗಳನ್ನೊಳಗೊಂಡ ದಾವೆಗಳು, ವ್ಯವಹರಣೆಗಳು, ಇತ್ಯಾದಿ.**–(1) ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ,–

(i) ಯಾವುದೇ ಸಿವಿಲ್ ನ್ಯಾಯಾಲಯವು ಅಥವಾ ಕ್ರಿಮಿನಲ್ ನ್ಯಾಯಾಲಯವು ಅಥವಾ ಯಾರೇ ಅಧಿಕಾರಿಯು ಅಥವಾ ಪ್ರಾಧಿಕಾರಿಯು ಭೂಮಿಗೆ ಸಂಬಂಧಿಸಿದ [2][xxx][2] ಯಾವುದೇ ದಾವೆಯಲ್ಲಿ, ಮೊಕದ್ದಮೆಯಲ್ಲಿ ಅಥವಾ ವ್ಯವಹರಣೆಯಲ್ಲಿ ಅಂಥ ಭೂಮಿಯು ಕೃಷಿ ಭೂಮಿಯೇ ಅಥವಾ ಅಲ್ಲವೇ ಹಾಗೂ ಭೂಮಿಯು ಸ್ವಾಧೀನದಲ್ಲಿರುವುದಾಗಿ ಕ್ಲೇಮು ಮಾಡುವ ವ್ಯಕ್ತಿಯು, 1974ರ ಮಾರ್ಚ್ 1ನೇ ದಿನಾಂಕಕ್ಕಿಂತ ಮುಂಚಿನಿಂದ ಸದರಿ ಭೂಮಿಯ ಗೇಣಿದಾರನಾಗಿದ್ದನೇ ಅಥವಾ ಇಲ್ಲವೇ ಎಂಬ ಪ್ರಶ್ನೆಗಳನ್ನು ತೀರ್ಮಾನಿಸತಕ್ಕದ್ದಲ್ಲ;

(ii) ಅಂಥ ನ್ಯಾಯಾಲಯವು ಅಥವಾ ಅಧಿಕಾರಿಯು ಅಥವಾ ಪ್ರಾಧಿಕಾರಿಯು, ಅಂಥ ಪ್ರಶ್ನೆಗೆ ಸಂಬಂಧಪಡುವಷ್ಟರಮಟ್ಟಿಗೆ ಅಂಥ ದಾವೆಯನ್ನು ಅಥವಾ ವ್ಯವಹರಣೆಯನ್ನು ತಡೆಹಿಡಿಯತಕ್ಕದ್ದು ಮತ್ತು ಸದರಿ ಪ್ರಶ್ನೆಯನ್ನು ನ್ಯಾಯಾಧಿಕರಣದ ತೀರ್ಮಾನಕ್ಕೆ ಒಪ್ಪಿಸತಕ್ಕದ್ದು;

(iii) ಅಂಥ ನ್ಯಾಯಾಲಯವು, ಅಧಿಕಾರಿಯು ಅಥವಾ ಪ್ರಾಧಿಕಾರಿಯು ಭೂಮಿಗೆ ಸಂಬಂಧಪಟ್ಟಂತೆ ತಾತ್ಕಾಲಿಕ ನಿರ್ಬಂಧಕಾಜ್ಞೆಯ ರೂಪದಲ್ಲಾಗಲಿ ಅಥವಾ ರಿಸೀವರ್‌ನ ನೇಮಕದ ರೂಪದಲ್ಲಾಗಲಿ ಅಥವಾ ಅನ್ಯಥಾ ಹೊರಡಿಸಿದ ಅಥವಾ ಮಾಡಿದ ಎಲ್ಲಾ ಮಧ್ಯಂತರ ಆದೇಶಗಳು ಸಂಧರ್ಭಾನುಸಾರ ರದ್ದಾಗತಕ್ಕದ್ದು ಅಥವಾ ತೆರವು ಆಗತಕ್ಕದ್ದು;

(iv) ನ್ಯಾಯಾಧಿಕರಣವು, (1)ನೇ ಖಂಡದ ಮೇರೆಗೆ ತನಗೆ ಒಪ್ಪಿಸಿದ ಪ್ರಶ್ನೆಯನ್ನು ತೀರ್ಮಾನಿಸತಕ್ಕದ್ದು ಮತ್ತು ಅಂಥ ನ್ಯಾಯಾಲಯಕ್ಕೆ, ಅಧಿಕಾರಿಗೆ ಅಥವಾ ಪ್ರಾಧಿಕಾರಿಗೆ ತನ್ನ ನಿರ್ಣಯವನ್ನು ತಿಳಿಸತಕ್ಕದ್ದು. ನ್ಯಾಯಾಧಿಕರಣದ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.

(2) ಉಪಪ್ರಕರಣ (1)ರಲ್ಲಿ ಇರುವುದು ಯಾವುದೂ, ಆ ಉಪಪ್ರಕರಣದಲ್ಲಿ ಉಲ್ಲೇಖಿಸಿದ ವಿಷಯವಲ್ಲದ ವಿಷಯಕ್ಕೆ ಸಂಬಂಧಪಟ್ಟಂತೆ ದಾವೆಯನ್ನು, ಮೊಕದ್ದಮೆಯನ್ನು ಅಥವಾ ವ್ಯವಹರಣೆಗಳನ್ನು ಮುಂದುವರಿಸಲು ಸಿವಿಲ್ ಅಥವಾ ಕ್ರಿಮಿನಲ್ ನ್ಯಾಯಾಲಯಕ್ಕೆ ಅಥವಾ ಅಧಿಕಾರಿಗೆ ಅಥವಾ ಪ್ರಾಧಿಕಾರಿಗೆ ಅಡ್ಡಿಯುಂಟು ಮಾಡತಕ್ಕದ್ದಲ್ಲ.][1]

1. 1976ರ ಅಧಿನಿಯಮ ಸಂಖ್ಯೆ 27ರ ಮೂಲಕ ದಿನಾಂಕ 16.12.1975 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1976ರ ಅಧಿನಿಯಮ ಸಂಖ್ಯೆ 44ರ ಮೂಲಕ ದಿನಾಂಕ 02.06.1976 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**134. ನಿಯಂತ್ರಣ.–** ಈ ಅಧಿನಿಯಮದ ಜಾರಿಗೆ ಸಂಬಂಧಿಸಿದ ಎಲ್ಲಾ ವಿಷಯಗಳಲ್ಲಿಯೂ ರಾಜ್ಯ ಸರ್ಕಾರವು ಸಾಮಾನ್ಯ ಮತ್ತು ರೆವಿನ್ಯೂ ಆಡಳಿತದಲ್ಲಿ ರೆವಿನ್ಯೂ ಅಧಿಕಾರಿಗಳ ಮೇಲೆ ತಾನು ಹೊಂದಿರುವಷ್ಟೇ ನಿಯಂತ್ರಣವನ್ನು ಮತ್ತು ಚಲಾಯಿಸುವಂಥದ್ದೇ ಅಧಿಕಾರವನ್ನು ಈ ಅಧಿನಿಯಮದ ಮೇರೆಗೆ ಕಾರ್ಯನಿರ್ವಹಿಸುವ [1][xxx][1] ಜಿಲ್ಲಾಧಿಕಾರಿಯವರು ಮತ್ತು [2][ಇತರ ಅಧಿಕಾರಿಗಳು][2] ಹೊಂದಿರತಕ್ಕದ್ದು ಮತ್ತು ಚಲಾಯಿಸತಕ್ಕದ್ದು.

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**135. ಕಂಪೆನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಕಂಪನಿಯು ಮಾಡಿದ್ದರೆ, ಆ ಅಪರಾಧವು ನಡೆದ ಕಾಲದಲ್ಲಿ ಆ ಕಂಪನಿಯ ವ್ಯವಹಾರಗಳನ್ನು ನಡೆಸುವುದಕ್ಕೆ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಕಂಪನಿಗೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಆ ಕಂಪನಿಯನ್ನು ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ತನ್ನ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಹಾಗೂ ತದನುಸಾರವಾಗಿ ದಂಡಿತನಾಗತಕ್ಕದ್ದು:

ಪರಂತು, ಅಂಥ ಅಪರಾಧವು ತನ್ನ ತಿಳಿವಳಿಕೆಗೆ ಬಾರದೆ ನಡೆಯಿತೆಂದು ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಗಟ್ಟಲು ತಾನು ಎಲ್ಲ ಯಥೋಚಿತ ಜಾಗರೂಕತೆ ವಹಿಸಿದ್ದನೆಂದು ಅಂಥ ಯಾರೇ ವ್ಯಕ್ತಿಯು ರುಜುವಾತುಪಡಿಸಿದರೆ, ಈ ಉಪಪ್ರಕರಣದಲ್ಲಿರುವುದು ಯಾವುದೂ ಅವನನ್ನು ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(2) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವು ಕಂಪೆನಿಯ ಯಾರೇ ನಿರ್ದೇಶಕನ, ವ್ಯವಸ್ಥಾಪಕನ, ಕಾರ್ಯದರ್ಶಿಯ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ನಡೆದಿದೆಯೆಂದು ಅಥವಾ ಅವನ ಯಾವುದೇ ನಿರ್ಲಕ್ಷ್ಯತೆಯ ಕಾರಣದಿಂದ ಆ ಅಪರಾಧವು ನಡೆದಿವೆಯೆಂದು ಆರೋಪಿಸಿರುವುದು ರುಜುವಾತಾದರೆ ಅಂಥ ಯಾರೇ ನಿರ್ದೇಶಕನನ್ನು, ವ್ಯವಸ್ಥಾಪಕನನ್ನು, ಕಾರ್ಯದರ್ಶಿಯನ್ನು ಅಥವಾ ಇತರ ಅಧಿಕಾರಿಯನ್ನು ಸಹ ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ತನ್ನ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಕ್ಕಾಗಿ,–

(ಎ) **"ಕಂಪನಿ"** ಎಂದರೆ ಯಾವುದೇ ನಿಗಮಿತ ನಿಕಾಯ ಮತ್ತು ಅದು ಒಂದು ಫರ್ಮನ್ನು ಮತ್ತು ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮಿನ ಸಂಬಂಧದಲ್ಲಿ **"ನಿರ್ದೇಶಕ"** ಎಂದರೆ ಆ ಫರ್ಮಿನ ಪಾಲುದಾರ;

**136. ರಕ್ಷಣೆ.–** ಈ ಅಧಿನಿಯಮದ ಮೇರೆಗೆ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ಯಾರೇ ವ್ಯಕ್ತಿಯ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

**137. ನಿಯಮಗಳು.–** (1) ರಾಜ್ಯ ಸರ್ಕಾರವು ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಈ ಹಿಂದೆ ಹೇಳಿದ ಅಧಿಕಾರದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು ಈ ಕೆಳಕಂಡ ವಿಷಯಗಳ ಬಗ್ಗೆ ಉಪಬಂಧಿಸಬಹುದು:–

[1][(i) xxx][1],

[2][(ii), (iii), (iv) x x x ][2]

(v) 25ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ [3][ತಹಶೀಲ್ದಾರರ][3] ಕಚೇರಿಯಲ್ಲಿ ಗೇಣಿದಾರಿಕೆಗಳನ್ನು ಬಿಟ್ಟುಕೊಡುವವನ್ನು ನೋಂದಣಿ ಮಾಡುವ ರೀತಿ;

(vi) 33ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಭೂಮಾಲೀಕನು ಯಾವ ರೀತಿಯಲ್ಲಿ ಮತ್ತು ಯಾವ ನಮೂನೆಯಲ್ಲಿ ರಸೀದಿಯನ್ನು ಕೊಡಬೇಕೋ ಆ ರೀತಿ ಮತ್ತು ಆ ನಮೂನೆ;

[2][(vii) x x x][2]

(viii) 39ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ [3][ತಹಶೀಲ್ದಾರರ][3] ಬಳಿ ಯಾವ ಅವಧಿಯೊಳಗೆ ಬೆಲೆಯ ಮೊಬಲಗನ್ನು ಠೇವಣಿಯಿಡಬೇಕೋ ಆ ಅವಧಿ ಮತ್ತು ಸದರಿ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ಕೊಡಬೇಕಾದ ಪ್ರಮಾಣಪತ್ರದ ನಮೂನೆ;

(ix) 40ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ [3][ತಹಶೀಲ್ದಾರರಿಗೆ][3] ಸಲ್ಲಿಸಬೇಕಾದ ಅರ್ಜಿಯ ನಮೂನೆ;

(x) 41ನೇ ಪ್ರಕರಣದ ಮೇರೆಗೆ [3][ತಹಶೀಲ್ದಾರರಿಗೆ][3] ಸಲ್ಲಿಸಬೇಕಾದ ಅರ್ಜಿಯ ನಮೂನೆ;

(xi) 42ನೇ ಪ್ರಕರಣದ ಮೇರೆಗೆ [3][ತಹಶೀಲ್ದಾರರಿಗೆ][3] ಸಲ್ಲಿಸಬೇಕಾದ ಅರ್ಜಿಯ ನಮೂನೆ;

(xii) [3][48ಎ ಪ್ರಕರಣದ (2)ನೇ ಉಪಪ್ರಕರಣದ][3] ಮೇರೆಗೆ ನೀಡಬೇಕಾದ ಸಾರ್ವಜನಿಕ ನೋಟೀಸಿನ ನಮೂನೆ;

(xiii) ಬಾಂಡುಗಳ ರೂಪದಲ್ಲಿ 51ನೇ ಪ್ರಕರಣದ ಮೇರೆಗೆ ಎಷ್ಟು ಕಂತುಗಳಲ್ಲಿ ಮೊಬಲಗನ್ನು ಸಂದಾಯ ಮಾಡಬೇಕೋ ಆ ಕಂತುಗಳ ಸಂಖ್ಯೆ;

[2][(xiv) x x x][2]

[3][(xv) 66ನೇ ಪ್ರಕರಣದ ಮೇರೆಗೆ ಯಾವ ಅವಧಿಯೊಳಗೆ ಮತ್ತು ಯಾವ ನಮೂನೆಯಲ್ಲಿ ಘೋಷಣೆಯನ್ನು ಮಾಡಬೇಕೋ ಆ ಅವಧಿ ಮತ್ತು ನಮೂನೆ;][3]

(xvi) [3][[4][ನ್ಯಾಯಾಧಿಕರಣವು][4] ಮಾಡಬೇಕಾದ ವಿಚಾರಣೆ][3] ಮತ್ತು 67ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಯಾವ ಅವಧಿಯೊಳಗೆ ಹೇಳಿಕೆಯನ್ನು ದಾಖಲು ಮಾಡಬೇಕೋ ಆ ಅವಧಿ;

(xvii) 85ನೇ ಪ್ರಕರಣದ ಮೇರೆಗೆ ನಡೆಸಬೇಕಾದ ವಿಚಾರಣೆ;

(xviii) 89ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರರಿಗೆ ಸಲ್ಲಿಸಬೇಕಾದ ಅರ್ಜಿಯ ನಮೂನೆ;

(xix) 90ನೇ ಪ್ರಕರಣದ ಮೇರೆಗೆ ನಿಯಮಿಸಬೇಕಾದ ಇತರ ವಿವರಗಳು;

(xx) 91ನೇ ಪ್ರಕರಣದ ಮೇರೆಗೆ ನಡೆಸಬೇಕಾದ ವಿಚಾರಣೆ;

(xxi) 92ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಸದಸ್ಯತ್ವವನ್ನು ಹಿಂತೆಗೆದುಕೊಳ್ಳಲು ಪೂರೈಸಬೇಕಾದ ಷರತ್ತುಗಳು ಮತ್ತು ಸದರಿ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ನಿಯಮಿಸಬೇಕಾದ ನಿರ್ಬಂಧಗಳು ಮತ್ತು ಷರತ್ತುಗಳು;

(xxii) 95ನೇ ಪ್ರಕರಣದ ಮೇರೆಗೆ ಸಹಕಾರ ಬೇಸಾಯ ಕ್ಷೇತ್ರಕ್ಕೆ ನೋಟೀಸನ್ನು ಕೊಡುವ ರೀತಿ;

(xxiii) 97ನೇ ಪ್ರಕರಣದ ಮೇರೆಗೆ ಸಹಕಾರ ಬೇಸಾಯ ಕ್ಷೇತ್ರದ ಸದಸ್ಯನು ಯಾವ ಹಕ್ಕುಗಳಿಗೆ ಮತ್ತು ವಿಶೇಷಾಧಿಕಾರಗಳಿಗೆ ಹಕ್ಕುಳ್ಳವನಾಗಿರುವನೋ ಆ ಹಕ್ಕುಗಳು ಮತ್ತು ವಿಶೇಷಾಧಿಕಾರಗಳು, ಯಾವ ಬಾಧ್ಯತೆಗಳಿಗೆ ಮತ್ತು ಹೊಣೆಗಾರಿಕೆಗಳಿಗೆ ಅವನು ಒಳಪಡುವನೋ ಆ ಬಾಧ್ಯತೆಗಳು ಮತ್ತು ಹೊಣೆಗಾರಿಕೆಗಳು ಮತ್ತು ಸದರಿ ಪ್ರಕರಣದ ಮೇರೆಗೆ ನಿರ್ವಹಿಸಲು ಅವನು ಬದ್ಧನಾಗಿರುವನೋ ಆ ಕರ್ತವ್ಯಗಳು;

(xxiv) 98ನೇ ಪ್ರಕರಣದ ಮೇರೆಗೆ ಸಹಕಾರ ಬೇಸಾಯ ಕ್ಷೇತ್ರಕ್ಕೆ ಸದಸ್ಯನು ನೀಡುವ ಕೊಡುಗೆಗಳ ವ್ಯಾಪ್ತಿ ಮತ್ತು ರೀತಿ;

(xxv) 100ನೇ ಪ್ರಕರಣದ ಮೇರೆಗೆ ಸಹಕಾರ ಬೇಸಾಯ ಕ್ಷೇತ್ರಕ್ಕೆ ಸದಸ್ಯರನ್ನಾಗಿ ಸೇರಿಸಿಕೊಳ್ಳುವುದಕ್ಕಾಗಿ ನಿಬಂಧನೆಗಳು ಮತ್ತು ಷರತ್ತುಗಳು;

(xxvi) 102ನೇ ಪ್ರಕರಣದ ಮೇರೆಗೆ ಸಹಕಾರ ಬೇಸಾಯ ಕ್ಷೇತ್ರಕ್ಕೆ ಕೊಡಬೇಕೆಂದು ನಿಯಮಿಸಬೇಕಾದ ರಿಯಾಯಿತಿಗಳು ಹಾಗೂ ಸೌಲಭ್ಯಗಳು;

(xxvii) 123ನೇ ಪ್ರಕರಣದ ಮೇರೆಗೆ ನಿಯಮಿಸಬೇಕಾಗಿರುವ ನ್ಯಾಯಾಲಯದ ಫೀಜುಗಳು;

(xxviii) 127ನೇ ಪ್ರಕರಣದ ಮೇರೆಗೆ ಗೇಣಿದಾರರಿಗೆ ಕೊಡಬೇಕಾದ ಕಾನೂನು ನೆರವಿನ ಸ್ವರೂಪ ಮತ್ತು ವ್ಯಾಪ್ತಿ ಮತ್ತು ಯಾವ ಷರತ್ತುಗಳಿಗೆ ಒಳಪಟ್ಟು ಅಂಥ ನೆರವನ್ನು ನೀಡಬಹುದೋ ಆ ಷರತ್ತುಗಳು;

[5][(xxix) ಈ ಅಧಿನಿಯಮದ ಮೇರೆಗೆ ಅಧಿಕಾರಗಳನ್ನು ಅಥವಾ ಪ್ರಕಾರ್ಯಗಳನ್ನು ಯಾವ ಜಿಲ್ಲಾಧಿಕಾರಿಯವರಿಗೆ ಮತ್ತು ಇತರ ಅಧಿಕಾರಿಗಳಿಗೆ ವಹಿಸಿಕೊಡಲಾಗಿದೆಯೋ ಅಂಥ ಜಿಲ್ಲಾಧಿಕಾರಿಯವರು ಮತ್ತು ಇತರ ಅಧಿಕಾರಿಯವರು ಒಪ್ಪಿಸಬೇಕಾದ ವರದಿ ಮತ್ತು ಜಿಲ್ಲಾಧಿಕಾರಿಯವರು ಇತರ ಅಧಿಕಾರಿಗಳು ಯಾವ ನಮೂನೆಯಲ್ಲಿ ಪುಸ್ತಕಗಳನ್ನು ಇಡಬೇಕೋ, ನಮೂದುಗಳನ್ನು ಮಾಡಬೇಕೋ ಮತ್ತು ಲೆಕ್ಕಗಳನ್ನು ಇಡಬೇಕೋ ಆ ನಮೂನೆಗಳು;][5]

(xxx) ಈ ಅಧಿನಿಯಮದ ಮೇರೆಗಿನ ಆದೇಶಗಳಲ್ಲಿ ಅಥವಾ ತೀರ್ಮಾನಗಳಲ್ಲಿ ಇರುವ ತಪ್ಪುಗಳನ್ನು ಮತ್ತು ಲೋಪಗಳನ್ನು ಸರಿಪಡಿಸುವುದು;

(xxxi) ಈ ಅಧಿನಿಯಮಯದ ಮೇರೆಗೆ ಪ್ರಮಾಣಪತ್ರವನ್ನು ಕೊಡುವುದಕ್ಕಾಗಿ, ದಾಖಲೆಗಳನ್ನು ಪರಿಶೀಲಿಸುವುದಕ್ಕಾಗಿ, ಪ್ರತಿಗಳನ್ನು ಕೊಡುವುದಕ್ಕಾಗಿ ಅಥವಾ ಯಾರೇ ಪ್ರಾಧಿಕಾರಿಯು ನಿರ್ವಹಿಸಿದ ಯಾವುದೇ ಪ್ರಕಾರ್ಯದ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಫೀಜು;

(xxxii) ಈ ಅಧಿನಿಯಮದ ಮೇರೆಗೆ ನೋಟೀಸುಗಳನ್ನು ಮತ್ತು ಆದೇಶಗಳನ್ನು ಜಾರಿ ಮಾಡುವ ವಿಧಾನ;

(xxxiii) ಯಾವ ವಿಷಯವನ್ನು ನಿಯಮಿಸಬೇಕೆಂದು ಈ ಅಧಿನಿಯಮವು ಸ್ಪಷ್ಟವಾಗಿ ಅಗತ್ಯಪಡಿಸಿದೆಯೋ ಅಥವಾ ಅನುಮತಿಸಿದೆಯೋ ಯಾವುದೇ ಇತರ ವಿಷಯ;

(xxxiv) ಈ ಅಧಿನಿಯಮದ ಮೇರೆಗಿನ ವ್ಯವಹರಣೆಗಳಲ್ಲಿ ಅನುಸರಿಸಬೇಕಾದ ಕಾರ್ಯವಿಧಾನವನ್ನು ಸಾಮಾನ್ಯವಾಗಿ ವಿನಿಯಮಿಸುವುದು ಮತ್ತು ಅಳವಡಿಸಿಕೊಳ್ಳಬೇಕಾದ ನಮೂನೆಗಳು;

(xxxv) ಈ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮದ ಉಲ್ಲಂಘನೆಗಾಗಿ ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಗಳು;

(xxxvi) ಈ ಅಧಿನಿಯಮದಲ್ಲಿ ಯಾವ ವಿಷಯಕ್ಕೆ ಉಪಬಂಧ ಕಲ್ಪಿಸಿಲ್ಲವೋ ಅಥವಾ ಸಾಕಷ್ಟು ಉಪಬಂಧವಿಲ್ಲವೋ ಮತ್ತು ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ಉಪಬಂಧವು ಅವಶ್ಯಕವೆಂದು ರಾಜ್ಯ ಸರ್ಕಾರವು ಅಭಿಪ್ರಾಯ ಪಡುವುದೋ ಆ ಇತರ ಯಾವುದೇ ವಿಷಯ.

1. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

4. 1977ರ ಅಧಿನಿಯಮ ಸಂಖ್ಯೆ 23ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

5. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(3) ಈ ಪ್ರಕರಣದ ಮೇರೆಗೆ ನಿಯಮಗಳನ್ನು ರಚಿಸುವಾಗ, ರಾಜ್ಯ ಸರ್ಕಾರವು, ಯಾವುದೇ ನಿಯಮದ ಉಲ್ಲಂಘನೆಗಾಗಿ ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಶಿಕ್ಷೆಗೆ ಗುರಿಯಾಗತಕ್ಕದ್ದೆಂದು ಉಪಬಂಧಿಸಬಹುದು.

(4) ಈ ಅಧಿನಿಯಮದ ಮೇರೆಗಿನ ನಿಯಮವನ್ನು ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮಾಡಬಹುದು ಮತ್ತು ಅಂಥ ನಿಯಮವನ್ನು ರಚಿಸುವಾಗ ಆ ನಿಯಮವನ್ನು ರಚಿಸಲು ಇರುವ ಕಾರಣಗಳನ್ನು ವಿಧಾನಮಂಡಲದ ಉಭಯ ಸದನಗಳ ಮುಂದೆ ಇಡಬೇಕಾದ ವಿವರಣಾ ಪತ್ರದಲ್ಲಿ ನಿರ್ದಿಷ್ಟಪಡಿಸತಕ್ಕದ್ದು. 140ನೇ ಪ್ರಕರಣದ ಮೇರೆಗೆ ಮಾಡುವ ಯಾವುದೇ ಮಾರ್ಪಾಡಿಗೊಳಪಟ್ಟು, ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವು, ಅದು ಈ ಅಧಿನಿಯಮದಲ್ಲಿ ಅಧಿನಿಯಮಿತವಾಗಿದಿದ್ದರೆ ಹೇಗೋ ಹಾಗೆ ಪರಿಣಾಮಕಾರಿಯಾಗಿರತಕ್ಕದ್ದು.][1]

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**138. ಇತರ ಅಧಿನಿಯಮಿತಿಗಳಿಗಿಂತಲೂ ಈ ಅಧಿನಿಯಮವು ಪ್ರಾಧಾನ್ಯತೆವುಳ್ಳದ್ದಾಗಿರುವುದು.–** ಈ ಅಧಿನಿಯಮವು ಮತ್ತು ಅದರ ಮೇರೆಗೆ ರಚಿಸಿದ ಯಾವುದೇ ನಿಯಮವು ಅಥವಾ ಹೊರಡಿಸಿದ ಯಾವುದೇ ಆದೇಶವು ಅಥವಾ ಅಧಿಸೂಚನೆಯು, ಭಾರತ ಸಂವಿಧಾನದ ಏಳನೆಯ ಅನುಸೂಚಿಯ ಪಟ್ಟಿ II ರಲ್ಲಿ ಮತ್ತು ಪಟ್ಟಿ III ರಲ್ಲಿ ನಮೂದಿಸಿದ ವಿಷಯಗಳಿಗೆ ಸಂಬಂಧಪಟ್ಟಂತೆ ಇತರ ಯಾವುದೇ ಅಧಿನಿಯಮಿತಿಯಲ್ಲಿ ಅಥವಾ ಅಂಥ ಇತರ ಯಾವುದೇ ಅಧಿನಿಯಮಿತಿಯ ಕಾರಣದಿಂದ ಪರಿಣಾಮಕಾರಿಯಾಗಿರುವ ಯಾವುದೇ ಲಿಖಿತದಲ್ಲಿ ಅಸಂಗತವಾದದು ಏನೇ ಒಳಗೊಂಡಿದ್ದರೂ, ಪರಿಣಾಮಕಾರಿಯಾಗಿರತಕ್ಕದ್ದು.

**139. ತೊಂದರೆಗಳ ನಿವಾರಣೆ.–** (1) ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವಾಗ ಯಾವುದೇ ಸಂದೇಹ ಅಥವಾ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಆ ಸಂದೇಹವನ್ನು ಅಥವಾ ತೊಂದರೆಯನ್ನು ನಿವಾರಿಸುವ ಸಲುವಾಗಿ ಅವಶ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರುವಂಥ ಉಪಬಂಧಗಳನ್ನು ಅಧಿಸೂಚನೆಯ ಮೂಲಕ ಕಲ್ಪಿಸಬಹುದು.

(2) ಉಪ ಪ್ರಕರಣ (1)ರ ಮೇರೆಗೆ ಯಾವುದೇ ಅಧಿಸೂಚನೆಯ ಮೂಲಕ ಕಲ್ಪಿಸಿದ ಉಪಬಂಧಗಳು, 140ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, ಅವುಗಳನ್ನು ಈ ಅಧಿನಿಯಮದಲ್ಲಿ ಅಧಿನಿಯಮಿಸಿದಿದ್ದರೆ ಹೇಗೋ ಹಾಗೆ ಪರಿಣಾಮಕಾರಿಯಾಗಿರತಕ್ಕದ್ದು ಮತ್ತು ಅಂಥ ಯಾವುದೇ ಅಧಿಸೂಚನೆಯನ್ನು ಗೊತ್ತುಪಡಿಸಿದ ದಿನಕ್ಕೆ ಮುಂಚಿತವಲ್ಲದ ಯಾವುದೇ ದಿನಾಂಕದಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮಾಡಬಹುದು.

**140. ನಿಯಮಗಳನ್ನು ಮತ್ತು ಅಧಿಸೂಚನೆಗಳನ್ನು ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸುವುದು.–** ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು ಮತ್ತು 109ನೇ, 110ನೇ ಮತ್ತು 139ನೇ ಪ್ರಕರಣಗಳ ಮೇರೆಗೆ ಹೊರಡಿಸಿದ ಪ್ರತಿಯೊಂದು ಅಧಿಸೂಚನೆಯನ್ನು

ಅದನ್ನು ರಚಿಸಿದ ನಂತರ ಅಥವಾ ಹೊರಡಿಸಿದ ನಂತರ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದರಂತೆ ಅನುಕ್ರಮವಾಗಿ ಬರುವ ಎರಡು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಮಂಡಿಸತಕ್ಕದ್ದು ಮತ್ತು ಹಾಗೆ ಅದನ್ನು ಯಾವ ಅಧಿವೇಶನದಲ್ಲಿ ಮಂಡಿಸಲಾಯಿತೋ ಆ ಅಧಿವೇಶನವು ಅಥವಾ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ ಆ ನಿಯಮದಲ್ಲಿ ಅಥವಾ ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಡನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು ಅಥವಾ ಅಧಿಸೂಚನೆಯನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ ಆ ನಿಯಮವು ಅಥವಾ ಅಧಿಸೂಚನೆಯು, ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರವೇ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗಿರತಕ್ಕದ್ದಲ್ಲ. ಆದರೆ ಅಂಥ ಯಾವುದೇ ಮಾರ್ಪಾಡು ಅಥವಾ ರದ್ದತಿಯು ಆ ನಿಯಮದ ಅಥವಾ ಅಧಿಸೂಚನೆಯ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವುಂಟು ಮಾಡತಕ್ಕದ್ದಲ್ಲ.

**141. ಭೂ ಹಿಡುವಳಿ ರದ್ದಿಯಾತಿ ಅಧಿನಿಯಮಗಳು.–** ಈ ಅಧಿನಿಯಮದ ಅನುಸೂಚಿ II ರಲ್ಲಿ ನಿರ್ದಿಷ್ಟಪಡಿಸಿರುವ ಭೂ ಹಿಡುವಳಿ ರದ್ದಿಯಾತಿ ಅಧಿನಿಯಮಗಳಲ್ಲಿ ಇರುವ ಯಾವುದೇ ಉಪಬಂಧಗಳಿಗೆ ಅವು, ಯಾರೇ ಒಳ ಹಿಡುವಳಿದಾರನು ಅಥವಾ ಗೇಣಿದಾರನು ಹೊಂದಿರುವ ಯಾವುದೇ ಭೂಮಿಗೆ ಸಂಬಂಧಪಟ್ಟಂತೆ ಅವನಿಗೆ ಅಧಿಭೋಗದಾರನ ಹಕ್ಕನ್ನು ಪ್ರದಾನ ಮಾಡುವುದಕ್ಕೆ ಅಥವಾ ರೈತವಾರಿ ಪಟ್ಟಾವನ್ನು ಮಂಜೂರು ಮಾಡುವುದಕ್ಕೆ ಸಂಬಂಧಿಸಿರುವಷ್ಟರಮಟ್ಟಿಗೆ ಈ ಅಧಿನಿಯಮದಲ್ಲಿ ಇರುವುದು ಯಾವುದೂ ಬಾಧಕವುಂಟುಮಾಡತಕ್ಕದ್ದಲ್ಲ.

**142. ನಿರಸನ ಮತ್ತು ಉಳಿಸುವಿಕೆಗಳು.–** (1) ಈ ಅಧಿನಿಯಮದ ಅನುಸೂಚಿ III ರಲ್ಲಿ ನಿರ್ದಿಷ್ಟಪಡಿಸಿದ ಅಧಿನಿಯಮಿತಿಗಳನ್ನು ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಸಂವಾದಿಯಾದ ಕಾನೂನಿನ ಯಾವುದೇ ಇತರ ಉಪಬಂಧಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, [1][ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು][1] ಅಂಥ ನಿರಸನವು,–

(ಎ) ಸದರಿ ಅಧಿನಿಯಮಿತಿಗಳು ಅಥವಾ ಕಾನೂನಿನ ಉಪಬಂಧಗಳು ಅಥವಾ ಅವುಗಳ ಮೇರೆಗೆ ಯಥೋಚಿತವಾಗಿ ಮಾಡಿದ ಅಥವಾ ಒಳಗಾದ ಯಾವುದೇ ಕಾರ್ಯವು ಈ ಹಿಂದೆ ಜಾರಿಯಲ್ಲಿ ಇದ್ದುದ್ದಕ್ಕೆ; ಅಥವಾ

(ಬಿ) ಸದರಿ ಅಧಿನಿಯಮಿತಿಗಳ ಅಥವಾ ಕಾನೂನಿನ ಉಪಬಂಧಗಳ ಮೇರೆಗೆ ಆರ್ಜಿಸಿದ, ಪ್ರಾಪ್ತವಾದ ಅಥವಾ ವಹಿಸಿದ ಯಾವುವೇ ಹಕ್ಕಿಗೆ, ವಿಶೇಷಾಧಿಕಾರಕ್ಕೆ, ಬಾಧ್ಯತೆಗೆ ಅಥವಾ ಹೊಣೆಗಾರಿಕೆಗೆ; ಅಥವಾ

(ಸಿ) ಸದರಿ ಅಧಿನಿಯಮಿತಿಗಳ ಅಥವಾ ಕಾನೂನಿನ ಉಪಬಂಧಗಳಿಗೆ ವಿರುದ್ಧವಾಗಿ ಮಾಡಿದ ಯಾವುದೇ ಅಪರಾಧದ ಸಂಬಂಧದಲ್ಲಿ ಗುರಿಯಾದ ಯಾವುದೇ ದಂಡಕ್ಕೆ, ಮುಟ್ಟುಗೋಲಿಗೆ ಅಥವಾ ದಂಡನೆಗೆ;

(ಡಿ) ಮೇಲೆ ಹೇಳಿದಂಥ ಹಕ್ಕಿಗೆ, ವಿಶೇಷಾಧಿಕಾರಕ್ಕೆ, ಬಾಧ್ಯತೆಗೆ, ಹೊಣೆಗಾರಿಕೆಗೆ, ದಂಡಕ್ಕೆ, ಮುಟ್ಟುಗೋಲಿಗೆ ಅಥವಾ ದಂಡನೆಗೆ ಸಂಬಂಧಿಸಿದ ಯಾವುದೇ ತನಿಖೆಗೆ, ಕಾನೂನು ವ್ಯವಹರಣೆಗೆ ಅಥವಾ ಪರಿಹಾರಕ್ಕೆ ಬಾಧಕವುಂಟು ಮಾಡತಕ್ಕದ್ದಲ್ಲ

– ಮತ್ತು ಈ ಅಧಿನಿಯಮವನ್ನು ಅಂಗೀಕರಿಸಿರದಿದ್ದರೆ ಹೇಗೋ ಹಾಗೆ, ಅಂಥ ಯಾವುದೇ ತನಿಖೆಯನ್ನು, ಕಾನೂನು ವ್ಯವಹರಣೆಯನ್ನು ಅಥವಾ ಪರಿಹಾರವನ್ನು ಪ್ರಾರಂಭಿಸಬಹುದು, ಮುಂದುವರಿಸಬಹುದು ಅಥವಾ ಜಾರಿಗೊಳಿಸಬಹುದು ಮತ್ತು ಅಂಥ ಯಾವುದೇ ದಂಡವನ್ನು, ಮುಟ್ಟುಗೋಲನ್ನು ಅಥವಾ ದಂಡನೆಯನ್ನು ವಿಧಿಸಬಹುದು:

ಮತ್ತು ಪರಂತು, ಯಾವುದೇ ಅಧಿನಿಯಮಿತಿಯಲ್ಲಿ ಅಥವಾ ಇತರ ಕಾನೂನಿನಲ್ಲಿ ಅಥವಾ ಯಾವುದೇ ಲಿಖಿತದಲ್ಲಿ, ನಿರಸಿತವಾದ ಯಾವುದೇ ಅಧಿನಿಯಮಗಳಲ್ಲಿ ಇರುವ ಯಾವುದೇ ಉಪಬಂಧಕ್ಕೆ ಅಥವಾ ಕಾನೂನಿನ ಉಪಬಂಧಗಳಿಗೆ ಮಾಡಿರುವ ಯಾವುದೇ ಉಲ್ಲೇಖವನ್ನು, ಬೇರೆ ಉದ್ದೇಶವು ಕಂಡುಬಂದ ಹೊರತು, ಈ ಅಧಿನಿಯಮದ ಸಂವಾದಿ ಉಪಬಂಧಕ್ಕೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು.

[2][(1ಎ) ಉಪಪ್ರಕರಣ (1)ರಲ್ಲಿ ಅಥವಾ ಈ ಅಧಿನಿಯಮದ ಪ್ರಾರಂಭಕ್ಕೆ ಮುಂಚೆ ಯಾವುದೇ ಕಾಲದಲ್ಲಿ [3][ಕರ್ನಾಟಕ ರಾಜ್ಯದ][3] ಯಾವುದೇ ಪ್ರದೇಶದಲ್ಲಿ ಜಾರಿಯಲ್ಲಿದ್ದ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ ಸದರಿ ಉಪಪ್ರಕರಣದ ಮೊದಲನೇ ಪರಂತುಕವು ಅಥವಾ ಕಾನೂನಿನ ಇತರ ಯಾವುದೇ ಉಪಬಂಧವು, [3][ಕರ್ನಾಟಕ][3] ಗೇಣಿದಾರರ (ಒಕ್ಕಲೆಬ್ಬಿಸುವುದರಿಂದ ತಾತ್ಕಾಲಿಕ ರಕ್ಷಣೆ) ಅಧಿನಿಯಮ, 1961ರ ಮೂಲಕ ತನ್ನ ಸ್ವಾಧೀನದಲ್ಲಿದ್ದ ಯಾವುದೇ ಭೂಮಿಯಿಂದ ಒಕ್ಕಲೆಬ್ಬಿಸಿದಂತೆ ರಕ್ಷಣೆವುಳ್ಳ ಯಾರೇ ಕೃಷಿಕನನ್ನು ಯಾವುದೇ ಕೃಷಿ ಭೂಮಿಯಿಂದ ಒಕ್ಕಲೆಬ್ಬಿಸುವುದಕ್ಕೆ ಸದರಿ ಪರಂತುಕವು ಅಥವಾ ಕಾನೂನಿನ ಉಪಬಂಧವು ಯಾರೇ ವ್ಯಕ್ತಿಗೆ ಸಾಧ್ಯತೆ ಮಾಡಿಕೊಡುವಷ್ಟರಮಟ್ಟಿಗೆ ಅನ್ವಯವಾಗತಕ್ಕದ್ದಲ್ಲ ಮತ್ತು ಅಂಥ ಯಾರೇ ಕೃಷಿಕನು ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಹೊರತು ಅಂಥ ಭೂಮಿಯಿಂದ ಒಕ್ಕಲೆಬ್ಬಿಸುವುದಕ್ಕೆ ಗುರಿಯಾಗತಕ್ಕದ್ದಲ್ಲ.][2]

1. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ ಮತ್ತು 1966ರ ಅಧಿನಿಯಮ ಸಂಖ್ಯೆ 38ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

(2) ಉಪಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ, ಸದರಿ ಉಪಪ್ರಕರಣದ ಮೊದಲನೆಯ ಪರಂತುಕವನ್ನು ಜಾರಿಗೆ ತರುವ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಸದರಿ ನಿರಸಿತ ಅಧಿನಿಯಮಿತಿಗಳ ಅಥವಾ ಕಾನೂನಿನ ಉಪಬಂಧಗಳ ಮೇರೆಗೆ, ರಚಿಸಿದ ಅಥವಾ ಹೊರಡಿಸಿದ ನಿಯಮಗಳಿಂದ, ಅಧಿಸೂಚನೆಗಳಿಂದ ಮತ್ತು ಆದೇಶಗಳಿಂದ ಕೆಲವನ್ನು ಬಿಟ್ಟುಬಿಡಲು, ಅವುಗಳಿಗೆ ಸೇರಿಸಲು ಮತ್ತು ಅವುಗಳನ್ನು ಅಳವಡಿಸಿಕೊಳ್ಳಲು ಮತ್ತು ಅವುಗಳಲ್ಲಿ ಮಾರ್ಪಾಟು ಮಾಡಲು ಅವಶ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರುವಂಥ ಉಪಬಂಧವನ್ನು ಮಾಡಬಹುದು.

[1][ಅನುಸೂಚಿ – I

ಭಾಗ – ಎ

[2 (ಎ) ಪ್ರಕರಣದ (35ಎ) ನ್ನು ನೋಡಿ]

ಭೂಮಿಗಳ ವರ್ಗೀಕರಣ

**ಎ ವರ್ಗ**

ಒಂದು ವರ್ಷದಲ್ಲಿ ಬತ್ತದ ಎರಡು ಬೆಳೆಗಳನ್ನು [2][ಅಥವಾ ಒಂದು ಕಬ್ಬಿನ ಬೆಳೆಯನ್ನು][2] ಬೆಳೆಸಲು ನೀರು ಸರಬರಾಜು ಮಾಡುವ [3][xxx][3] ಸಾಮರ್ಥ್ಯವುಳ್ಳವುಗಳಾಗಿರುವ ಸರ್ಕಾರಿ ನಾಲೆಗಳಿಂದ ಮತ್ತು ಸರ್ಕಾರಿ ಕೆರೆಗಳಿಂದ ಖಾಯಂ ನೀರಾವರಿ ಸೌಲಭ್ಯ ಪಡೆಯುವ ಭೂಮಿಗಳು.

**ಬಿ ವರ್ಗ**

(i) ಒಂದು ವರ್ಷದಲ್ಲಿ ಬತ್ತದ ಒಂದು ಬೆಳೆ ಮಾತ್ರ ಬೆಳೆಸಲು ನೀರು ಸರಬರಾಜು ಮಾಡುವ [3][xxx][3] ಸಾಮರ್ಥ್ಯವುಳ್ಳವುಗಳಾಗಿರುವ ಸರ್ಕಾರಿ ನಾಲೆಗಳಿಂದ ಮತ್ತು ಸರ್ಕಾರಿ ಕೆರೆಗಳಿಂದ ಖಾಯಂ ನೀರಾವರಿ ಸೌಲಭ್ಯ ಪಡೆಯುವ ಭೂಮಿಗಳು;

(ii)ಒಂದು ವರ್ಷದಲ್ಲಿ ಬತ್ತದ ಎರಡು ಬೆಳೆಗಳನ್ನು [2][ಅಥವಾ ಒಂದು ಕಬ್ಬಿನ ಬೆಳೆಯನ್ನು][2] ಬೆಳೆಸಲು ನೀರು ಸರಬರಾಜು ಮಾಡುವ [3][xxx][3] ಸಾಮರ್ಥ್ಯವುಳ್ಳವುಗಳಾಗಿರುವ ಮತ್ತು ರಾಜ್ಯ ಸರ್ಕಾರವು ನಿರ್ಮಿಸಿ ನಿರ್ವಹಿಸಿಕೊಂಡು ಬರುವ ಏತ ನೀರಾವರಿ ಯೋಜನೆಗಳಿಂದ ನೀರಾವರಿಯಾಗುವ ಭೂಮಿಗಳು.

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

3. 1979ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**ಸಿ ವರ್ಗ**

(i) 'ಎ' ಮತ್ತು 'ಬಿ' ವರ್ಗಗಳಿಗೆ ಸೇರಿದವುಗಳ ಹೊರತು, ಸರ್ಕಾರವು ನಿರ್ಮಿಸಿ ಸುಸ್ಥಿತಿಯಲ್ಲಿ ಇಟ್ಟುಕೊಂಡು ಬರುವ ಏತ ನೀರಾವರಿ ಯೋಜನೆಗಳನ್ನು ಒಳಗೊಂಡ ಬೇರೆ ಯಾವುದೇ ಸರ್ಕಾರಿ ನೀರಾವರಿ ಮೂಲಗಳಿಂದ ನೀರಾವರಿಯಾಗುವ ಭೂಮಿಗಳು;

(ii)ಮಳೆ ನೀರಿನಿಂದ ಬತ್ತದ ಬೆಳೆ ಅಥವಾ ಅಡಿಕೆ ಬೆಳೆಸಬಹುದಾದ ಭೂಮಿಗಳು;

(iii)ನೀರೆತ್ತಲು ಭೂ ಒಡೆಯನು ಹಾಕಿರುವ ಮತ್ತು ಸುಸ್ಥಿತಿಯಲ್ಲಿಟ್ಟುಕೊಳ್ಳಬೇಕಾದ ಪಂಪ ಸೆಟ್ಟಿನಿಂದ ಅಥವಾ ಇತರ ಸಾಧನಗಳಿಂದ ನದಿಯಿಂದ ಅಥವಾ ಸರ್ಕಾರಿ ನಾಲೆಯಿಂದ ಅಥವಾ ಸರ್ಕಾರಿ ಕೆರೆಯಿಂದ ನೀರೆತ್ತುವ ಮೂಲಕ ನೀರಾವರಿಯಾಗುವ ಭೂಮಿಗಳು.

**ಟಿಪ್ಪಣಿ.–**

(1) ಬತ್ತ ಮತ್ತು ಕಬ್ಬಿನ ಬೆಳೆಗಳ ಹೊರತಾಗಿ ಇತರ ಬೆಳೆಗಳನ್ನು ಬೆಳೆಯುವ ಲಘು ನೀರಾವರಿ ಬೆಳೆಯನ್ನು ಬೆಳೆಯಲು ಮಾತ್ರ ಯೋಗ್ಯವಾಗಿರುವಂಥ ನೀರು ಸರಬರಾಜು ವ್ಯವಸ್ಥೆಯಿರುವ ಸರ್ಕಾರಿ ಮೂಲದಿಂದ ನೀರಾವರಿ ಸೌಲಭ್ಯಗಳನ್ನುಳ್ಳ ಭೂಮಿಗಳು ಈ ವರ್ಗಕ್ಕೆ ಸೇರತಕ್ಕದ್ದು.

(2) ನೀರಾವರಿ ಮೂಲವನ್ನು ಮತ್ತು ನೀರು ಸರಬರಾಜು ವ್ಯವಸ್ಥೆಯನ್ನು ಅವಲಂಬಿಸಿರುವ ನೀರಾವರಿ ಬಾಗಾಯ್ತು ಬೆಳೆ ಬೆಳೆಯುವ ಭೂಮಿಗಳು, ಸಂದರ್ಭಾನುಸಾರ ಎ, ಬಿ ಅಥವಾ ಸಿ ವರ್ಗಗಳಿಗೆ ಸೇರುತ್ತವೆ.

**ಡಿ ವರ್ಗ**

ಖುಷ್ಕಿ ಭೂಮಿಗಳೆಂದು ವರ್ಗೀಕರಿಸಲಾದ, ಆದರೆ ಸರ್ಕಾರಿ ಮೂಲದಿಂದ, ಯಾವುದೇ ನೀರಾವರಿ ಸೌಲಭ್ಯ ಇಲ್ಲದಿರುವ ಭೂಮಿಗಳು;

**ಟಿಪ್ಪಣಿ.–** ಎ ವರ್ಗಕ್ಕೆ, ಬಿ ವರ್ಗಕ್ಕೆ ಅಥವಾ ಸಿ ವರ್ಗಕ್ಕೆ ಸೇರದ ಬತ್ತ ಅಥವಾ ಬಾಗಾಯ್ತು ಬೆಳೆಗಳನ್ನು ಬೆಳೆಯುವ ಭೂಮಿಗಳು ಈ ವರ್ಗಕ್ಕೆ ಸೇರುತ್ತವೆ.

ಭಾಗ – ಬಿ

ಬೇರೆ ಬೇರೆ ವರ್ಗಗಳ ಭೂಮಿಯ ಸಮಾನ ವಿಸ್ತೀರ್ಣವನ್ನು ನಿರ್ಧರಿಸುವ ಸೂತ್ರ

8 ಆಣೆಗಿಂತ ಹೆಚ್ಚು ಭೂಸಾರ ವರ್ಗೀಕರಣ ಮೌಲ್ಯದ 'ಎ' ವರ್ಗದ = 1 ಎಕರೆ ಭೂಮಿ

8 ಆಣೆಗಿಂತ ಕಡಿಮೆ ಭೂಸಾರ ವರ್ಗೀಕರಣ ಮೌಲ್ಯದ 'ಎ' ವರ್ಗದ = 1.3 ಎಕರೆ ಭೂಮಿ

8 ಆಣೆಗಿಂತ ಹೆಚ್ಚು ಭೂಸಾರ ವರ್ಗೀಕರಣ ಮೌಲ್ಯದ 'ಬಿ' ವರ್ಗದ = 1.5 ಎಕರೆ ಭೂಮಿ

8 ಆಣೆಗಿಂತ ಕಡಿಮೆ ಭೂಸಾರ ವರ್ಗೀಕರಣ ಮೌಲ್ಯದ 'ಬಿ' ವರ್ಗದ = 2.0 ಎಕರೆ ಭೂಮಿ

8 ಆಣೆಗಿಂತ ಹೆಚ್ಚು ಭೂಸಾರ ವರ್ಗೀಕರಣ ಮೌಲ್ಯದ 'ಸಿ' ವರ್ಗದ = 2.5 ಎಕರೆ ಭೂಮಿ

8 ಆಣೆಗಿಂತ ಕಡಿಮೆ ಭೂಸಾರ ವರ್ಗೀಕರಣ ಮೌಲ್ಯದ 'ಸಿ' ವರ್ಗದ = 3.0 ಎಕರೆ ಭೂಮಿ

'ಡಿ' ವರ್ಗದ = 5.4 ಎಕರೆ ಭೂಮಿ][1]

1. 1974ರ ಅಧಿನಿಯಮ ಸಂಖ್ಯೆ 1ರ ಮೂಲಕ ದಿನಾಂಕ 01.03.1974 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**ಅನುಸೂಚಿ – II**

**(141ನೇ ಪ್ರಕರಣವನ್ನು ನೋಡಿ)**

1. ಮುಂಬಯಿ ವೈಯಕ್ತಿಕ ಇನಾಮುಗಳ ರದ್ದಿಯಾತಿ ಅಧಿನಿಯಮ, 1952 (ಮುಂಬಯಿ ಅಧಿನಿಯಮ ಸಂಖ್ಯೆ 1953ರ, XLI).
2. ಮುಂಬಯಿ (ಸಮುದಾಯಕ್ಕೆ ಉಪಯುಕ್ತವಾದ) ಸೇವಾ ಇನಾಮುಗಳ ರದ್ದಿಯಾತಿ ಅಧಿನಿಯಮ, 1953 (ಮುಂಬಯಿ ಅಧಿನಿಯಮ ಸಂಖ್ಯೆ 1953ರ LXX).
3. ಮುಂಬಯಿ ವಿಲೀನ ರಾಜ್ಯ ಕ್ಷೇತ್ರಗಳ ಮತ್ತು ಪ್ರದೇಶಗಳ (ಜಾಗೀರುಗಳ ರದ್ದಿಯಾತಿ) ಅಧಿನಿಯಮ, 1953 (ಮುಂಬಯಿ ಅಧಿನಿಯಮ ಸಂಖ್ಯೆ 1953ರ XXXIX).
4. ಮುಂಬಯಿ ವಿಲೀನ ಕ್ಷೇತ್ರಗಳ ವಿವಿಧ ಪರಭಾರೆಗಳ ರದ್ದಿಯಾತಿ ಅಧಿನಿಯಮ, 1955 (ಮುಂಬಯಿ ಅಧಿನಿಯಮ ಸಂಖ್ಯೆ 1955ರ XXII).
5. ಹೈದರಾಬಾದು ಇನಾಮುಗಳ ರದ್ದಿಯಾತಿ ಅಧಿನಿಯಮ, 1955 (ಹೈದರಾಬಾದು ಅಧಿನಿಯಮ ಸಂಖ್ಯೆ 1955ರ VIII).
6. ಮದ್ರಾಸ್ ಸಂಪದಗಳ (ರದ್ದಿಯಾತಿ ಮತ್ತು ರೈತವಾರಿ ಪರಿವರ್ತನೆ) ಅಧಿನಿಯಮ, 1948 (ಮದ್ರಾಸ್ ಅಧಿನಿಯಮ ಸಂಖ್ಯೆ 1948ರ XXVI).
7. ಮೈಸೂರು (ವೈಯಕ್ತಿಕ ಮತ್ತು ವಿವಿಧ) ರೀತಿ ಇನಾಮುಗಳ ರದ್ದಿಯಾತಿ ಅಧಿನಿಯಮ, 1954 (ಮೈಸೂರು ಅಧಿನಿಯಮ ಸಂಖ್ಯೆ 1953ರ 1).
8. ಮೈಸೂರು–(ಧಾರ್ಮಿಕ ಮತ್ತು ಧರ್ಮಾಪಾಲಕ) ಇನಾಮುಗಳ ರದ್ದಿಯಾತಿ ಅಧಿನಿಯಮ, 1955 (ಮೈಸೂರು ಅಧಿನಿಯಮ ಸಂಖ್ಯೆ 1955ರ XVIII).

[1][9. ಮುಂಬಯಿ ಪರಗಣ ಮತ್ತು ಕುಲಕರ್ಣಿ ವತನಗಳ (ರದ್ದಿಯಾತಿ) ಅಧಿನಿಯಮ, 1950 (ಮುಂಬಯಿ ಅಧಿನಿಯಮ ಸಂಖ್ಯೆ 1950ರ LX).

10. [2][ಕರ್ನಾಟಕ][2] ಗ್ರಾಮಾಧಿಕಾರಗಳ ರದ್ದಿಯಾತಿ ಅಧಿನಿಯಮ, 1961 ([2][ಕರ್ನಾಟಕ ಅಧಿನಿಯಮ][2] ಸಂಖ್ಯೆ 1961ರ XIV).][1]

1. 1970ರ ಅಧಿನಿಯಮ ಸಂಖ್ಯೆ 6ರ ಮೂಲಕ ದಿನಾಂಕ 15.01.1970 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.

**ಅನುಸೂಚಿ – III**

**(142ನೇ ಪ್ರಕರಣವನ್ನು ನೋಡಿ)**

1. ಮುಂಬಯಿ ಗೇಣಿದಾರಿಕೆ ಮತ್ತು ಕೃಷಿ ಭೂಮಿಗಳ ಅಧಿನಿಯಮ, 1948 (ಮುಂಬಯಿ ಅಧಿನಿಯಮ 1948ರ LXVII).
2. ಹೈದರಾಬಾದು ಗೇಣಿದಾರಿಕೆ ಮತ್ತು ಕೃಷಿ ಭೂಮಿಗಳ ಅಧಿನಿಯಮ, 1950 (ಹೈದರಾಬಾದು ಅಧಿನಿಯಮ 1950ರ XXI).
3. ಮೈಸೂರು ಗೇಣಿದಾರಿಕೆ ಅಧಿನಿಯಮ, 1952 (ಮೈಸೂರು ಅಧಿನಿಯಮ 1952ರ XIII).
4. ಮುಂಬಯಿ ಗೇಣಿದಾರಿಕೆ (ಉಪಬಂಧಗಳ ಅಮಾನತ್ತು ಮತ್ತು ತಿದ್ದುಪಡಿ) ಅಧಿನಿಯಮ, 1957 ([1][ಕರ್ನಾಟಕ ಅಧಿನಿಯಮ][1] 1957ರ XIII).
5. ಕೊಡಗು ಗೇಣಿದಾರರ ಅಧಿನಿಯಮ, 1957 ([1][ಕರ್ನಾಟಕ ಅಧಿನಿಯಮ][1] 1957ರ 14).
6. [1][ಗುಲಬರ್ಗ, ಮಂಗಳೂರು ಮತ್ತು ಕೊಳ್ಳೆಗಾಲ ಪ್ರದೇಶಗಳಿಗೆ][1] ಗೇಣಿದಾರಿಕೆ (ಉಪಬಂಧಗಳ ಅಮಾನತು ಮತ್ತು ತಿದ್ದುಪಡಿ) ಅಧಿನಿಯಮ, 1957 ([1][ಕರ್ನಾಟಕ ಅಧಿನಿಯಮ][1] 1957ರ 15).
7. ಮದ್ರಾಸು ಸಾಗುವಳಿ ಗೇಣಿದಾರರ ರಕ್ಷಣೆ ಅಧಿನಿಯಮ, 1955 (ಮದ್ರಾಸು ಅಧಿನಿಯಮ 1955ರ xxv).
8. ಮದ್ರಾಸು ಸಾಗುವಳಿ ಗೇಣಿದಾರರ (ನ್ಯಾಯೋಚಿತ ಗೇಣಿ ಸಂದಾಯ) ಅಧಿನಿಯಮ, 1956 (ಮದರಾಸು ಅಧಿನಿಯಮ 1956ರ XXIV).
9. [1][ಕರ್ನಾಟಕ][1] ಗೇಣಿದಾರಿಕೆ (ತಿದ್ದುಪಡಿ ಮತ್ತು ಗೇಣಿಗಾರಿಕೆಗಳ ಮುಂದುವರಿಕೆ) ಅಧಿನಿಯಮ, 1957 ([1][ಕರ್ನಾಟಕ ಅಧಿನಿಯಮ][1] 1957ರ 16).
10. ಹೈದರಾಬಾದು ಅಧಿನಿಯಮ 1336ನೇ ಫಸಲಿ 1.

[2][11. [1][ಕರ್ನಾಟಕ][1] ಗೇಣಿದಾರರ (ಒಕ್ಕಲೆಬ್ಬಿಸುವುದರಿಂದ ತಾತ್ಕಾಲಿಕ ರಕ್ಷಣೆ) ಅಧಿನಿಯಮ, 1961 ([1][ಕರ್ನಾಟಕ ಅಧಿನಿಯಮ][1] 1961ರ 37).][2]

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಿಕೊಳ್ಳಲಾಗಿದೆ.
2. 1965ರ ಅಧಿನಿಯಮ ಸಂಖ್ಯೆ 14ರ ಮೂಲಕ ದಿನಾಂಕ 29.07.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಅಧಿಸೂಚನೆ**

**I**

**ಬೆಂಗಳೂರು, ದಿನಾಂಕ: 18ನೇ ಸೆಪ್ಟಂಬರ್ 1965 [ಸಂಖ್ಯೆ. ಆರ್ ಡಿ 86 ಎಲ್‌ಆರ್‌ವೈ 65]**

**ಎಸ್.ಓ. 3166.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ ಸಂಖ್ಯೆ 10) 1ನೇ ಪ್ರಕರಣದ (3)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1965ರ ಅಕ್ಟೋಬರ್ 2ನೇ ದಿನಾಂಕವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಬಿ.ಎಸ್. ಶ್ರೀಕಂಠಯ್ಯ)**

ಸರ್ಕಾರದ ಕಾರ್ಯದರ್ಶಿ

ಕಂದಾಯ ಇಲಾಖೆ

(1965ರ ಸೆಪ್ಟಂಬರ್ ದಿನಾಂಕ 23ರ ಕರ್ನಾಟಕ ರಾಜ್ಯಪತ್ರ, ಭಾಗ IV–2ಸಿ (ii) ಯಲ್ಲಿ ಪುಟಸಂಖ್ಯೆ 2850 ರಲ್ಲಿ ಪ್ರಕಟಿಸಲಾಗಿದೆ)

**II**

**ಬೆಂಗಳೂರು, ದಿನಾಂಕ: 11ನೇ ಏಪ್ರಿಲ್ 1969 [ಸಂಖ್ಯೆ. ಆರ್ ಡಿ 24 ಟಿಸಿಓ 67–II]**

**ಎಸ್.ಓ. 692.–** ಕರ್ನಾಟಕ ಹಿಡುವಳಿಗಳ ತುಂಡೀಕರಣ ವಿರೋಧ ಮತ್ತು ಸಂಯೋಜನೆ ಅಧಿನಿಯಮ, 1966ರ (1967ರ ಕರ್ನಾಟಕ ಅಧಿನಿಯಮ ಸಂಖ್ಯೆ 1)ರ 1ನೇ ಪ್ರಕರಣದ (3)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1969ರ ಮೇ 1ನೇ ದಿನಾಂಕವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಎಸ್. ಸ್ವಾಮಿನಾಥನ್)**

ಭೂ ಸುಧಾರಣೆಗಳ ಆಯುಕ್ತರು

ಮತ್ತು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ

ಕಂದಾಯ ಇಲಾಖೆ

(1969ರ ಏಪ್ರಿಲ್, ದಿನಾಂಕ: 17ರ ಕರ್ನಾಟಕ ರಾಜ್ಯಪತ್ರ,(ವಿಶೇಷ ಸಂಚಿಕೆ) ಭಾಗ IV–2ಸಿ (ii) ಯಲ್ಲಿ, ಪುಟಸಂಖ್ಯೆ 1759ರಲ್ಲಿ ಪ್ರಕಟವಾಗಿದೆ)

**III**

**ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 1995 [ಸಂಖ್ಯೆ. ಆರ್‌ಡಿ 271 ಎಲ್‌ಆರ್‌ಎ 93]**

ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1995 (1995 ರ ಕರ್ನಾಟಕ ಅಧಿನಿಯಮ ಸಂಖ್ಯೆ 31)ರ 1ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1995ರ ಅಕ್ಟೋಬರ್ 20ನೇ ದಿನಾಂಕವನ್ನು ಸದರಿ ಅಧಿನಿಯಮದ 8ನೇ ಪ್ರಕರಣದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಎಚ್. ನಂಜೇಗೌಡ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಅಭಾವ ಪರಿಹಾರ ಮತ್ತು ಭೂ ಸುಧಾರಣೆಗಳು)

**IV**

**ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್ 1998 [ಸಂಖ್ಯೆ. ಆರ್‌ಡಿ 116 ಎಲ್‌ಆರ್‌ಎ 98]**

ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1997 (1998 ರ ಕರ್ನಾಟಕ ಅಧಿನಿಯಮ ಸಂಖ್ಯೆ 23)ರ 1ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1998ರ ನವೆಂಬರ್ 1ನೇ ದಿನಾಂಕವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಮ್. ಎನ್. ನಂದಿನಿಬಾಯಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆಗಳು)

(1998ರ ಅಕ್ಟೋಬರ್ ದಿನಾಂಕ 10ರ ಕರ್ನಾಟಕ ರಾಜ್ಯಪತ್ರ,(ವಿಶೇಷ ಸಂಚಿಕೆ) ಭಾಗ IV–2ಸಿ(ii) ಯಲ್ಲಿ, ಪುಟಸಂಖ್ಯೆ 1039ರಲ್ಲಿ ಪ್ರಕಟಿಸಲಾಗಿದೆ)

V

**ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 1999 [ಸಂಖ್ಯೆ. ಆರ್‌ಡಿ 93 ಎಲ್‌ಆರ್ 98]**

ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 1998 (1998 ರ ಕರ್ನಾಟಕ ಅಧಿನಿಯಮ ಸಂಖ್ಯೆ 34)ರ 1ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1999ರ ಫೆಬ್ರವರಿ 15ನೇ ದಿನಾಂಕವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಎನ್. ನಂದಿನಿಬಾಯಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆಗಳು)

(1999ರ ಫೆಬ್ರವರಿ ದಿನಾಂಕ 18ರ ಕರ್ನಾಟಕ ರಾಜ್ಯಪತ್ರ(ವಿಶೇಷ ಸಂಚಿಕೆ) ಭಾಗ IV–2ಸಿ(ii) ಯಲ್ಲಿ, ಪುಟಸಂಖ್ಯೆ 160ರಲ್ಲಿ ಪ್ರಕಟಿಸಲಾಗಿದೆ)

VI

**ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2001 [ಸಂಖ್ಯೆ. ಆರ್‌ಡಿ 23 ಎಲ್‌ಆರ್‌ಎ 2001]**

ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 2001 (2001ರ ಕರ್ನಾಟಕ ಅಧಿನಿಯಮ ಸಂಖ್ಯೆ 22)ರ 1ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 2001ರ ಆಗಸ್ಟ್ 27ನೇ ದಿನಾಂಕವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಆರ್. ನಾರಾಯಣಮೂರ್ತಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆಗಳು)

VII

**ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2003 [ಸಂಖ್ಯೆ. ಆರ್‌ಡಿ 8 ಎಲ್‌ಆರ್‌ಎ 2001(ಭಾಗ)]**

ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 2003 (2003ರ ಕರ್ನಾಟಕ ಅಧಿನಿಯಮ ಸಂಖ್ಯೆ 34)ರ 1ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 2003ರ ನವೆಂಬರ್ 1ನೇ ದಿನಾಂಕವನ್ನು ಸದರಿ ಅಧಿನಿಯಮದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ವಿ. ರಾಧಾಕೃಷ್ಣ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆಗಳು)

The above Translation of the karnataka Land Reforms Act, 1961 (10 of 1962) shall be authoritative text in the Kannada Language under section 5A of the Karnataka Official Language Act, 1963.

**Governor of Karnataka**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್.ಮುದಗಲ್**

ಸರ್ಕಾರದ ಕಾರ್ಯದರ್ಶಿ, (ಪ್ರಭಾರ)

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**PR.468**
**SC.60**

## ಯುವಜನ ಸೇವಾ ಸಚಿವಾಲಯ

**ಸಂಖ್ಯೆ:ಯುಸೇಇ 24 ಸಮನ 2013 ಬೆಂಗಳೂರು, ದಿನಾಂಕ: 11/06/2013.**

**ಅಧಿಸೂಚನೆ**

**ವಿಷಯ:–** ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 4(1)(ಬಿ) ಪ್ರಕಾರ ಯುವಜನ ಸೇವಾ ಇಲಾಖೆಯ ಮಾಹಿತಿ ಕೈಪಿಡಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ:–** ದಿನಾಂಕ:25/02/2012 ರ ಅಧಿಸೂಚನೆ ಸಂಖ್ಯೆ: ಯುಸೇಇ 129 ಸಮನ 11

ಉಲ್ಲೇಖಿತ ಅಧಿಸೂಚನೆಯಲ್ಲಿ ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 4(1)(ಬಿ) ಪ್ರಕಾರ ಪ್ರಕಟಿಸಲಾಗಿದ್ದ ಯುವಜನ ಸೇವಾ ಇಲಾಖೆಯ ಕೈಪಿಡಿಯನ್ನು ಪರಿಷ್ಕರಿಸಿ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

**4.(1)ಬಿ(1)ಸಂಸ್ಥೆಯ ರಚನೆ ಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು**




**ಈ ಇಲಾಖೆಯ ವಿವಿಧ ಶಾಖೆಗಳಲ್ಲಿ ಈ ಕೆಳಕಂಡ ಕೆಲಸಗಳನ್ನು ನಿರ್ವಹಿಸಲಾಗುತ್ತಿದೆ:**

**ಯುವಜನ ಸೇವಾ ಶಾಖೆ:**

1) ಕರ್ನಾಟಕ ಕ್ರೀಡಾ ಪ್ರಾಧಿಕಾರಕ್ಕೆ ಸಂಬಂಧಿಸಿದ ವಿಷಯಗಳು.
2) ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಅಕಾಡಮಿಗೆ ಸಂಬಂಧಿಸಿದ ವಿಷಯಗಳು.
3) ಯುವಜನ ಸೇವೆಗಳು ಮತ್ತು ಕ್ರೀಡಾ ಇಲಾಖೆಯ ಹಲವು ಯೋಜನಾಭಿವೃದ್ಧಿ ಹಾಗೂ ಕ್ರೀಡಾಭಿವೃದ್ಧಿ ಕುರಿತಾದ ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳ ಅನುಷ್ಠಾನ ಕುರಿತಾದ ವಿಷಯಗಳು
4) ರಾಷ್ಟ್ರೀಯ ಕ್ರೀಡೆಗಳಿಗೆ ಸಂಬಂಧಿಸಿದ ವಿಷಯಗಳು.
5) ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಗೆ ಸಂಬಂಧಿಸಿದ ವಿಷಯಗಳು.
6) ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮೀಣ ಮಟ್ಟದಲ್ಲಿ ಕ್ರೀಡಾ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಕುರಿತಾದ ವಿಷಯಗಳು.

7) ಜಿಲ್ಲಾ ಕ್ರೀಡಾಂಗಣಗಳು, ಕ್ರೀಡಾ ಸಮುಚ್ಚಯಗಳ ನಿರ್ಮಾಣ ಕುರಿತಂತೆ ಆಡಳಿತಾತ್ಮಕ ಅನುಮೋದನೆ ಇತ್ಯಾದಿ ವಿಷಯಗಳು, ರಾಜ್ಯ ವಲಯದಿಂದ ಅನುದಾನ ಬಿಡುಗಡೆ ಮಾಡುವ ಹಾಗೂ ಪಂಚಾಯತ್ ಯುವ ಕ್ರೀಡಾ ಔರ್ ಖೇಲ್ ಅಭಿಯಾನ(ಪೈಕಾ) ಇತ್ಯಾದಿ ಕೇಂದ್ರ ಸರ್ಕಾರದ ಸಹಾಯಾನುದಾನ ಕುರಿತಾದ ವಿಷಯಗಳು,

8) ಯುವ ಪ್ರಶಸ್ತಿಗಳ ಕುರಿತಾದ ವಿಷಯಗಳ ನಿರ್ವಹಣೆ.

9) ಅಖಿಲ ಭಾರತ ನಾಗರೀಕ ಸೇವಾ ಕ್ರೀಡಾ ಪಂದ್ಯದಲ್ಲಿ ಭಾಗವಹಿಸುವ ಸರ್ಕಾರಿ ನೌಕರರ ಆಯ್ಕೆ ಹಾಗೂ ನಿಯೋಜನೆ ಕುರಿತಾದ ಪ್ರಸ್ತಾವನೆಗಳ ನಿರ್ವಹಣೆ.

10) ತಾಲ್ಲೂಕು ಕ್ರೀಡಾಂಗಣಗಳ ನಿರ್ಮಾಣ ಕುರಿತಂತೆ ಆಡಳಿತಾತ್ಮಕ ಅನುಮೋದನೆ ನೀಡುವ ಹಾಗೂ ಕೇಂದ್ರ ಸರ್ಕಾರದ ಸಹಾಯಾನುದಾನ ಪಡೆಯುವ ಕುರಿತಂತೆ ಪ್ರಸ್ತಾವ ಸಲ್ಲಿಸುವ ಬಗೆಗಿನ ವಿಷಯಗಳು.

11) ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಿಸಿದ ವಿಷಯಗಳ ನಿರ್ವಹಣೆ.

12) ಮೇಲಿನ ವಿಷಯಗಳಿಗೆ ಸಂಬಂಧಿಸಿದಂತೆ ಕರ್ನಾಟಕ ವಿಧಾನ ಸಭೆ:ವಿಧಾನ ಪರಿಷತ್ ಪ್ರಶ್ನೆಗಳು, ಭರವಸೆಗಳು, ಅರ್ಜಿಗಳು, ಗಮನ ಸೆಳೆಯುವ ಸೂಚನೆಗಳು, ಇತ್ಯಾದಿ ಹಾಗೂ ನ್ಯಾಯಾಲಯ ಪ್ರಕರಣಗಳು.

13) ರಾಷ್ಟ್ರೀಯ ಸೇವಾ ಯೋಜನಾ ವಿಷಯಕ್ಕೆ ಸಂಬಂಧಿಸಿದ ವಿಷಯಗಳು.

**ಸ್ವೀಕೃತಿ ಮತ್ತು ರವಾನೆ ಶಾಖೆ:**

1) ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಸೇವಾ ವಿಷಯಗಳು ಹಾಗೂ ಇದಕ್ಕೆ ಸಂಬಂಧಿಸಿದಂತೆ ವಿಧಾನಸಭೆ:ವಿಧಾನಪರಿಷತ್ ಪ್ರಶ್ನೆಗಳು, ಭರವಸೆಗಳು, ಅರ್ಜಿಗಳು ಗಮನ ಸೆಳೆಯುವ ಸೂಚನೆಗಳು ಇತ್ಯಾದಿ ಹಾಗೂ ನ್ಯಾಯಾಲಯ ಪ್ರಕರಣಗಳು.

2) ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಸಭೆಗಳು ಹಾಗೂ ಮಾಸಿಕ ಕಾರ್ಯಕ್ರಮ ಅನುಷ್ಠಾನ ವೇಳಾಪಟ್ಟಿ(ಎಂಪಿಕ್) ಸಭೆಗಳ ಕುರಿತು ಸಂಯೋಜನಾ ಕ್ರಮ.

3) ಸಮನ್ವಯ ಶಾಖೆಗೆ ಅನ್ವಯಿಸುವ ಎಲ್ಲ ವಿಷಯಗಳು, ವಿಧಾನಸಭೆ: ವಿಧಾನ ಪರಿಷತ್ ಪ್ರಶ್ನೆಗಳು.

**ಆಂತರಿಕ ಆರ್ಥಿಕ ಸಲಹೆಗಾರರ (ಆಯವ್ಯಯ) ಶಾಖೆ:**

1) ಕಂದಾಯ ಇಲಾಖೆ ಹಾಗೂ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಆಯವ್ಯಯ ತಯಾರಿಕೆ.

2) ಮೇಲ್ಕಂಡ ಇಲಾಖೆಗಳಿಗೆ ಸಂಬಂಧಿಸಿದ ಆಡಿಟ್ ಆಕ್ಷೇಪಣೆ: ಸಿಎಜಿ ಕಂಡಿಕೆಗಳ ಪರಿಶೀಲನೆ.

3) ಆಯವ್ಯಯ ಲೆಕ್ಕಶೀರ್ಷಿಕೆಗೆ ಸಂಬಂಧಿಸಿದ ವಿಷಯಗಳು.

4) ಮಹಾಲೇಖಪಾಲರ ತಪಾಸಣಾ ವರದಿ,ಕರಡು ಕಂಡಿಕೆಗಳು, ಸಿ.ಎ.ಜಿ. ರವರ ವರದಿ ಹಾಗೂ ಸಾರ್ವಜನಿಕ ಲೆಕ್ಕಪತ್ರ ವರದಿಗಳ ಕುರಿತಾದ ವಿಷಯಗಳ ನಿರ್ವಹಣೆ.

**ಆಂತರಿಕ ಆರ್ಥಿಕ ಸಲಹೆಗಾರರ (ಅಭಿಪ್ರಾಯ) ಶಾಖೆ**

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಸೇವಾ ವಿಷಯ ಹಾಗೂ ಅನುದಾನ ಬಿಡುಗಡೆ ಇತ್ಯಾದಿ ಪ್ರಸ್ತಾವನೆಗಳಿಗೆ ಅಭಿಪ್ರಾಯ ನೀಡುವುದು.

**ರಾಷ್ಟ್ರೀಯ ಸೇವಾ ಯೋಜನಾ ಕೋಶ:**

1) ರಾಜ್ಯದ ಎಲ್ಲಾ ವಿಶ್ವವಿದ್ಯಾಲಯ/ನಿರ್ದೇಶನಾಲಯಗಳ ಎನ್.ಎಸ್.ಎಸ್. ಚಟುವಟಿಕೆಗಳ ಮೇಲ್ವಿಚಾರಣೆ ಮತ್ತು ನಿಯಂತ್ರಣ.

2) ವಿಶ್ವವಿದ್ಯಾಲಯ/ನಿರ್ದೇಶನಾಲಯಗಳಿಗೆ ಸರಿಯಾದ ಸಮಯಕ್ಕೆ ಅನುದಾನ ಬಿಡುಗಡೆ

3) ವಿಶ್ವವಿದ್ಯಾಲಯ/ನಿರ್ದೇಶನಾಲಯಗಳ ಎನ್.ಎಸ್.ಎಸ್.ಸಲಹಾ ಸಮಿತಿ ಸಭೆ; ವಿಚಾರ ಸಂಕೀರ್ಣ, ಕಾರ್ಯಗಾರ ಇತರೆ ಕಾರ್ಯಕ್ರಮಗಳಿಗೆ ಸರ್ಕಾರದ ಪರವಾಗಿ ಭಾಗವಹಿಸುವುದು.

4) ಸರ್ಕಾರದ ನಿಯಮಾವಳಿಗಳ ರೀತ್ಯಾ ಅನುದಾನವನ್ನು ಬಳಕೆ ಮಾಡಲಾಗಿದೆಯೇ ಎಂಬ ಬಗ್ಗೆ ಪರಿವೀಕ್ಷಣೆ ಮಾಡುವುದು.

5) ಲೆಕ್ಕ ಪತ್ರದ ವರದಿಗಳು, ಕಾರ್ಯಕ್ರಮಗಳ ವರದಿಗಳು ಕಾಲಾನುಕಾಲಕ್ಕೆ ಬರುವಂತೆ ನೋಡಿಕೊಳ್ಳುವುದು.

6) ರಾಜ್ಯ ಮಟ್ಟದ ಎನ್.ಎಸ್.ಎಸ್. ಸಲಹಾ ಸಮಿತಿ ಸಭೆಯನ್ನು ಏರ್ಪಡಿಸುವುದು.

7) ಅಂತರ ಇಲಾಖಾ ಕಾರ್ಯಕ್ರಮಗಳನ್ನು ಆಯೋಜಿಸುವುದು.

ಅ) ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯೊಂದಿಗೆ ರಾಷ್ಟ್ರೀಯ ಕೋಟೆ, ಸ್ಮಾರಕಗಳ ರಕ್ಷಣೆ.

ಆ) ಕ್ರೆಡಿಲ್‌ನ ಸಹಯೋಗದೊಂದಿಗೆ ಎನರ್ಜಿ ಕ್ಲಬ್‌ಗಳನ್ನು ಕಾಲೇಜುಗಳಲ್ಲಿ ಸ್ಥಾಪನೆ ಮಾಡುವುದು.

ಇ) ರಾಜ್ಯ ಏಡ್ಸ್ ಸೊಸೈಟಿಯೊಂದಿಗೆ ಕಾಲೇಜು ಏಡ್ಸ್ ಶಿಕ್ಷಣ ಕಾರ್ಯಕ್ರಮ(ಎಲ್ಲಾ ಕಾಲೇಜುಗಳಲ್ಲಿ)

ಈ) ಉಚಿತ ಕಾನೂನು ನೆರವು ಶಿಬಿರಗಳು:ಕಾರ್ಯಾಗಾರಗಳು, ವಿಪತ್ತು ನಿರ್ವಹಣಾ ಕಾರ್ಯಕ್ರಮ.

ಉ) ಇನ್ನಿತರ ಕಾರ್ಯಕ್ರಮಗಳನ್ನು ಆಯಾ ಕಾಲಕ್ಕನುಗುಣವಾಗಿ ಏರ್ಪಡಿಸುವುದು.

8) ರಾಜ್ಯ ಮಟ್ಟದ ಕಾರ್ಯಕ್ರಮಗಳಾದ, ರಾಜ್ಯ ಗಣರಾಜ್ಯೋತ್ಸವ ಪಥ ಸಂಚಲನ ತರಬೇತಿ ಪಥ ಸಂಚಲನದಲ್ಲಿ ಭಾಗವಹಿಸುವುದು, ರಾಜ್ಯ ಮಟ್ಟದ ಎನ್.ಎಸ್.ಎಸ್.ಪ್ರಶಸ್ತಿ ರಾಜ್ಯ ಮಟ್ಟದ ಯುವಜನೋತ್ಸವ ಕಾರ್ಯಕ್ರಮ ಕಾರ್ಯಾಗಾರಗಳು, ಎನ್.ಎಸ್.ಎಸ್. ವಿಚಾರ ಸಂಕೀರ್ಣಗಳು ಹಾಗೂ ಇತರೆ ರಾಜ್ಯ ಮಟ್ಟದ ಶಿಬಿರಗಳನ್ನು ಸಂಘಟಿಸುವುದು.

9) ಅನುದಾನಕ್ಕೆ ಸಂಬಂಧಿಸಿದಂತೆ, ಲೆಕ್ಕ ಪರಿಶೋಧನೆ ಹಾಗೂ ಇತರೆ ವರದಿಗಳನ್ನು ಕ್ರೋಢೀಕರಿಸಿ ಮಹಾಲೇಖಪಾಲರು ಮತ್ತು ಕೇಂದ್ರ ಸರ್ಕಾರಕ್ಕೆ ಸಲ್ಲಿಸುವುದು.

10) ಎಲ್ಲಾ ವಿಶ್ವವಿದ್ಯಾಲಯ: ನಿರ್ದೇಶನಾಲಯಗಳ ಎನ್.ಎಸ್.ಎಸ್. ಸಂಯೋಜನಾಧಿಕಾರಿಗಳ ನೇಮಕಾತಿ ಸಮಿತಿ ಸಭೆಯಲ್ಲಿ ಭಾಗ – ವಹಿಸುವುದು.

**4(1)(b)(ii) ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ಕರ್ತವ್ಯಗಳ ವಿವರ**

**ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ:**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ. ಇಲಾಖಾ ಸಚಿವರ ಸಾಮಾನ್ಯ ಅಥವಾ ವಿಶೇಷ ನಿರ್ದೇಶನಗಳಿಗೊಳಪಟ್ಟು ಮತ್ತು ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ನಿಯಮಗಳಿಗೆ ಒಳಪಟ್ಟು ಯುವಜನಸೇವಾ ಮತ್ತು ಕ್ರೀಡಾ ಇಲಾಖೆ, ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಿಸಿದಂತೆ ವ್ಯವಹಾರ ನಿರ್ವಹಣೆಯ ಜವಾಬ್ದಾರಿ ಹೊಂದಿರುತ್ತಾರೆ.

ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ನಿಯಮ 7 ಮತ್ತು 30.

**ಸರ್ಕಾರದ ಉಪ ಕಾರ್ಯದರ್ಶಿ:**

ಪ್ರಧಾನ ಕಾರ್ಯದರ್ಶಿರವರ ನಂತರದ ಅಧಿಕಾರಿಯಾಗಿರುತ್ತಾರೆ. ಇಲಾಖಾ ಸಚಿವರು, ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿರವರು ನೀಡುವ ಸೂಚನೆಗಳ ಪ್ರಕಾರ ಕಾರ್ಯನಿರ್ವಹಿಸುತ್ತಾರೆ. ಈ ಇಲಾಖೆಗೆ ಸಂಬಂಧಪಟ್ಟಂತೆ ಸಂಘಟನೆ ಮತ್ತು ವಿಧಾನಾಧಿಕಾರಿಯಾಗಿರುತ್ತಾರೆ.

ಇವರು ಇಲಾಖೆಗೆ ಸಂಬಂಧಿಸಿದ ಶಾಖೆಗಳ ಮೇಲ್ವಿಚಾರಕರಾಗಿರುತ್ತಾರೆ. ಇಲಾಖೆಗಳಲ್ಲಿನ ಎಲ್ಲಾ ಕಡತಗಳು, ಕಾಗದ ಪತ್ರಗಳು ಮತ್ತು ದಾಖಲೆಗಳನ್ನು ಇವರು ಪರಿಶೀಲಿಸುತ್ತಾರೆ. ಪ್ರಕರಣಗಳ ವಿಲೇವಾರಿ ಬಗ್ಗೆ ಕ್ರಮ ಜರುಗಿಸುವುದು ಹಾಗೂ ಪ್ರಮುಖ ವಿಷಯಗಳ ಮೇಲಿನ ಕ್ರಮದ ಬಗ್ಗೆ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳಿಗೆ ಪ್ರಸ್ತಾವನೆಗಳನ್ನು ಮಂಡಿಸುತ್ತಾರೆ.

**ಸಂಪರ್ಕಾಧಿಕಾರಿ (ರಾಷ್ಟ್ರೀಯ ಸೇವಾ ಯೋಜನಾ ಕೋಶ)ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ:**

ಇವರು ರಾಜ್ಯ ಎನ್‌ಎಸ್‌ಎಸ್ ಕೋಶದ ಮೇಲುಸ್ತುವಾರಿಯಲ್ಲಿ, ವಿಶ್ವವಿದ್ಯಾಲಯ /ನಿರ್ದೇಶನಾಲಯಗಳ ಮುಖಾಂತರ ಎನ್‌ಎಸ್‌ಎಸ್ ಚಟುವಟಿಕೆಗಳ ಮೇಲ್ವಿಚಾರಣೆ, ಕಾಲೇಜು ಮಟ್ಟದಲ್ಲಿ ವಿದ್ಯಾರ್ಥಿಗಳ ವ್ಯಕ್ತಿತ್ವವನ್ನು ಅಭಿವೃದ್ಧಿಗೊಳಿಸುವ ಮೇಲುಸ್ತುವಾರಿ ಕಾರ್ಯ ನಿರ್ವಹಿಸುತ್ತಾರೆ. ರಾಜ್ಯದ ಎಲ್ಲಾ ವಿಶ್ವವಿದ್ಯಾಲಯ/ ನಿರ್ದೇಶನಾಲಯಗಳ ಎನ್.ಎಸ್.ಎಸ್. ಚಟುವಟಿಕೆಗಳ ಮೇಲ್ವಿಚಾರಣೆ ಮತ್ತು ನಿಯಂತ್ರಣ; ವಿಶ್ವವಿದ್ಯಾಲಯ/ ನಿರ್ದೇಶನಾಲಯಗಳಿಗೆ ಅನುದಾನ ಬಿಡುಗಡೆ; ವಿಶ್ವವಿದ್ಯಾಲಯ/ನಿರ್ದೇಶನಾಲಯಗಳ ಎನ್.ಎಸ್.ಎಸ್. ಸಲಹಾ ಸಮಿತಿ ಸಭೆ; ವಿಚಾರ ಸಂಕೀರ್ಣ, ಕಾರ್ಯಗಾರ, ಇತರೆ ಕಾರ್ಯಕಮಗಳಿಗೆ ಸರ್ಕಾರದ ಪರವಾಗಿ ಭಾಗವಹಿಸುವುದು; ಸರ್ಕಾರದ ನಿಯಮಾವಳಿಗಳ ರೀತ್ಯಾ ಅನುದಾನವನ್ನು ಬಳಕೆ ಮಾಡಲಾಗಿದೆಯೇ ಎಂಬ ಬಗ್ಗೆ ಪರಿವೀಕ್ಷಣೆ ಮಾಡುವುದು; ಲೆಕ್ಕ ಪತ್ರದ ವರದಿಗಳು, ಕಾರ್ಯಕ್ರಮಗಳ ವರದಿಗಳು ಕಾಲಾನುಕಾಲಕ್ಕೆ ಬರುವಂತೆ ನೋಡಿಕೊಳ್ಳುವುದು; ರಾಜ್ಯ ಮಟ್ಟದ ಎನ್.ಎಸ್.ಎಸ್. ಸಲಹಾ ಸಮಿತಿ ಸಭೆಯನ್ನು ಏರ್ಪಡಿಸುವುದು; ಅನುದಾನಕ್ಕೆ ಸಂಬಂಧಿಸಿದಂತೆ, ಲೆಕ್ಕ ಪರಿಶೋಧನೆ ಹಾಗೂ ಇತರೆ ವರದಿಗಳನ್ನು ಕ್ರೋಢೀಕರಿಸಿ ಮಹಾಲೇಖಪಾಲರು ಮತ್ತು ಕೇಂದ್ರ ಸರ್ಕಾರಕ್ಕೆ ಸಲ್ಲಿಸುವುದು; ಎಲ್ಲಾ ವಿಶ್ವವಿದ್ಯಾಲಯ:ನಿರ್ದೇಶನಾಲಯಗಳ ಎನ್.ಎಸ್.ಎಸ್. ಸಂಯೋಜನಾಧಿಕಾರಿಗಳ ನೇಮಕಾತಿ ಸಮಿತಿ ಸಭೆಯಲ್ಲಿ ಭಾಗವಹಿಸುವುದು, ಇತ್ಯಾದಿ ಇವರ ಪ್ರಮುಖ ಕರ್ತವ್ಯಗಳಾಗಿರುತ್ತದೆ.

**ಆಂತರಿಕ ಆರ್ಥಿಕ ಸಲಹೆಗಾರರು:**

ಯುವಜನ ಸೇವಾ ಇಲಾಖೆಯ ಆಯವ್ಯಯ, ಮುಂಗಡ, ಲೆಕ್ಕತನಿಖೆ ಆಕ್ಷೇಪಣೆ, ಆಡಿಟ್ ಪ್ಯಾರಾ, ತನಿಖಾ ವರದಿ, ಆಯವ್ಯಯ ಮಾಹಿತಿಗಳನ್ನು ಆರ್ಥಿಕ ಇಲಾಖೆಗೆ ನೀಡುವುದು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಮತ್ತು ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಪಟ್ಟ ಯೋಜನೆ ಮತ್ತು ಯೋಜನೇತರ ಆಯವ್ಯಯ/ ಹಣಕಾಸು ವಿಷಯದ ಬಗ್ಗೆ ಅಭಿಪ್ರಾಯ ನೀಡುತ್ತಾರೆ.

**ಸರ್ಕಾರದ ಅಧೀನ ಕಾರ್ಯದರ್ಶಿ:**

ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಆದೇಶಗಳನ್ನು ಹೊರಡಿಸುವ ಅಧಿಕಾರಿಯಾಗಿರುತ್ತಾರೆ. ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ನಿಯಮ 19 ಕಾರ್ಯನಿರ್ವಹಣೆ ಸಂಬಂಧದಲ್ಲಿ ಹಾಗೂ ಶಿಸ್ತಿನ ಸಂಬಂಧದಲ್ಲಿ ತನ್ನ ಪ್ರಭಾರದಲ್ಲಿರುವ ಶಾಖೆಯ ನಿಯಂತ್ರಣಾಧಿಕಾರವನ್ನು ಚಲಾಯಿಸುತ್ತಾರೆ. ಕಡತಗಳನ್ನು ಉಪಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ರವರಿಗೆ ಸಲ್ಲಿಸುತ್ತಾರೆ.

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಹಾಗೂ ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಿಸಿದ ವಿಷಯಗಳ ಕುರಿತಂತೆ ಯುವಜನ ಸೇವಾ ಶಾಖೆ ಹಾಗೂ ಸ್ವೀಕೃತಿ ಮತ್ತು ರವಾನೆ ಶಾಖೆಯ ಪೀಠಾಧಿಕಾರಿ/ಶಾಖಾಧಿಕಾರಿಯವರಿಂದ ಸಲ್ಲಿಸಲ್ಪಟ್ಟ ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಮೇಲಾಧಿಕಾರಿಗಳಿಗೆ ಮಂಡಿಸುವುದು, ಪ್ರತಿ ತಿಂಗಳು ಮಾಸಿಕ ಕಾರ್ಯಕ್ರಮ ಅನುಷ್ಠಾನ ವೇಳಾಪಟ್ಟಿ(ಎಂಪಿಕ್) ಸಭೆಗೆ ಹಾಜರಾಗಿ ವಿವಿಧ ವಿಷಯಗಳ ಬಗ್ಗೆ ಮುಂದಿನ ಕ್ರಮ ಜರುಗಿಸುವುದು, ವಿಧಾನಸಭೆ/ವಿಧಾನಪರಿಷತ್ತು ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸುವುದು ಇತ್ಯಾದಿ ಹಾಗೂ ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕಾರ್ಯನಿರ್ವಹಿಸುತ್ತಾರೆ.

**ಪೀಠಾಧಿಕಾರಿ (ಯುವಜನ ಸೇವಾ ಇಲಾಖೆ):**

ಇವರು ಶಾಖೆಯ ಮೇಲ್ವಿಚಾರಣೆಯ ಕಾರ್ಯನಿರ್ವಹಿಸುತ್ತಾರೆ. ಶಾಖೆಯ ಸಿಬ್ಬಂದಿಗಳ ಮೇಲ್ವಿಚಾರಣೆ ನಡೆಸುವುದು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಸರ್ಕಾರಿ ವೈಮಾನಿಕ ತರಬೇತಿ ಶಾಲೆಗಳಿಗೆ ಸಂಬಂಧಿಸಿದಂತೆ, ಇಲಾಖಾ ಮುಖ್ಯಸ್ಥರುಗಳಿಂದ ಸ್ವೀಕೃತವಾಗುವ ಎಲ್ಲಾ ಯೋಜನೆ/ಯೋಜನೇತರ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಪ್ರಸ್ತಾವನೆಗಳ ಹಾಗೂ ಸರ್ಕಾರಿ ವೈಮಾನಿಕ ತರಬೇತಿ ಶಾಲೆಯ ಅಧಿಕಾರಿಗಳ ಸೇವಾ ವಿಷಯ ಇವೇ ಮುಂತಾದವುಗಳ ಬಗ್ಗೆ ಸಹಾಯಕರು/ಹಿರಿಯಸಹಾಯಕರುಗಳಿಂದ ಮಂಡಿಸಲಾದ ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಆದೇಶಕ್ಕಾಗಿ ಕಡತವನ್ನು ಮೇಲಾಧಿಕಾರಿಗಳಿಗೆ ಮಂಡಿಸುತ್ತಾರೆ.

**ಶಾಖಾಧಿಕಾರಿ (ಸ್ವೀಕೃತಿ ಮತ್ತು ರವಾನೆ ಶಾಖೆ):**

ಇಲಾಖೆಗೆ ಬರುವ ಎಲ್ಲ ಕಾಗದಪತ್ರಗಳನ್ನು ಸ್ವೀಕರಿಸುವುದು. ಸ್ವೀಕರಿಸಿದ ಪತ್ರಗಳನ್ನು ಸಂಬಂಧಿಸಿದ ಶಾಖೆಗಳಿಗೆ ರವಾನಿಸುವುದು. ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಹಾಗೂ ಕರ್ನಾಟಕ ಕ್ರೀಡಾ ಪ್ರಾಧಿಕಾರಕ್ಕೆ ಸಂಬಂಧಿಸಿದ ಅಧಿಕಾರಿಗಳ ಸೇವಾ ವಿಷಯಗಳ ಬಗ್ಗೆ ಹಾಗೂ ಈ ಇಲಾಖೆಗೆ ಸಂಬಂಧಿಸಿದ ಎಲ್ಲಾ ಸಂಯೋಜನಾ ವಿಷಯಗಳ ಬಗ್ಗೆ ಸಹಾಯಕರು/ಹಿರಿಯ ಸಹಾಯಕರಿಂದ ಸಲ್ಲಿಸಲ್ಪಟ್ಟ ಕಡತಗಳನ್ನು ಪರಿಶೀಲಿಸಿ ಆದೇಶಕ್ಕಾಗಿ ಕಡತವನ್ನು ಮೇಲಾಧಿಕಾರಿಗಳಿಗೆ ಮಂಡಿಸುತ್ತಾರೆ.

**ಶಾಖಾಧಿಕಾರಿ (ಆಂತರಿಕ ಆರ್ಥಿಕ ಸಲಹೆಗಾರರ ಅಭಿಪ್ರಾಯ ಶಾಖೆ):**

ಯುವಜನ ಸೇವಾ ಇಲಾಖೆಗೆ ಸಂಬಂಧಿಸಿದ ಆಡಳಿತಾತ್ಮಕ ಶಾಖೆಗಳಿಂದ ಬಂದ ಸಿಬ್ಬಂದಿಗಳ ಸೇವಾ ವಿಷಯಗಳು ಹಾಗೂ ಹಣಕಾಸಿಗೆ ಸಂಬಂಧಿಸಿದ ಪ್ರಸ್ತಾವನೆಗಳ ಬಗ್ಗೆ ಸಹಾಯಕರು/ಹಿರಿಯ ಸಹಾಯಕರಿಂದ ಮಂಡಿಸಲ್ಪಟ್ಟ ಕಡತಗಳನ್ನು ಪರಿಶೀಲಿಸಿ, ಆಂತರಿಕ ಆರ್ಥಿಕ ಸಲಹೆಗಾರರಿಗೆ ಕಡತವನ್ನು ಮಂಡಿಸುತ್ತಾರೆ.

**ಶಾಖಾಧಿಕಾರಿ (ಆಂತರಿಕ ಆರ್ಥಿಕ ಸಲಹೆಗಾರರ ಆಯವ್ಯಯ ಶಾಖೆ):**

ಯುವಜನ ಸೇವಾ ಇಲಾಖೆಗೆ ಸಂಬಂಧಿಸಿದ ಆಯವ್ಯಯ ತಯಾರಿಕೆ ಹಾಗೂ ಆಡಿಟ್ ಆಕ್ಷೇಪಣೆಗಳ ಬಗ್ಗೆ ಸಹಾಯಕರು/ ಹಿರಿಯಸಹಾಯಕರಿಂದ ಮಂಡಿಸಲ್ಪಟ್ಟ ಕಡತಗಳನ್ನು ಪರಿಶೀಲಿಸಿ, ಆಂತರಿಕ ಆರ್ಥಿಕ ಸಲಹೆಗಾರರಿಗೆ ಕಡತವನ್ನು ಮಂಡಿಸುತ್ತಾರೆ.

**ಹಿರಿಯ ಸಹಾಯಕರು (ಯುವಜನ ಸೇವಾ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಕರ್ನಾಟಕ ಕ್ರೀಡಾ ಪ್ರಾಧಿಕಾರಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳು; ಯುವಪ್ರಶಸ್ತಿ ಮತ್ತು ಕ್ರೀಡಾ ಪ್ರಶಸ್ತಿಗಳ ಕುರಿತಾದ ವಿಷಯಗಳ ನಿರ್ವಹಣೆ; ಅಖಿಲ ಭಾರತ ನಾಗರೀಕ ಸೇವಾ ಕ್ರೀಡಾ ಪಂದ್ಯದಲ್ಲಿ ಭಾಗವಹಿಸುವ ಸರ್ಕಾರಿ ನೌಕರರ ಆಯ್ಕೆ ಹಾಗೂ ನಿಯೋಜನೆ ಕುರಿತಾದ ಪ್ರಸ್ತಾವಗಳ ನಿರ್ವಹಣೆ;ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮೀಣ ಮಟ್ಟದಲ್ಲಿ ಕ್ರೀಡಾ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಕುರಿತಾದ ವಿಷಯಗಳು; ಜಿಲ್ಲಾ ಕ್ರೀಡಾಂಗಣಗಳು, ಕ್ರೀಡಾ ಸಮುಚ್ಚಯಗಳ ನಿರ್ಮಾಣ ಕುರಿತಂತೆ ಆಡಳಿತಾತ್ಮಕ ಅನುಮೋದನೆ ನೀಡುವ, ರಾಜ್ಯ ವಲಯದಿಂದ ಅನುದಾನ ಬಿಡುಗಡೆ ಮಾಡುವ ಹಾಗೂ ಕೇಂದ್ರ ಸರ್ಕಾರದ ಸಹಾಯಾನುದಾನ ಕೋರಿ ಪ್ರಸ್ತಾವ ಸಲ್ಲಿಸುವ ಕುರಿತಾದ ವಿಷಯಗಳು;ತಾಲ್ಲೂಕು ಕ್ರೀಡಾಂಗಣಗಳ ನಿರ್ಮಾಣ ಕುರಿತಂತೆ ಆಡಳಿತಾತ್ಮಕ ಅನುಮೋದನೆ ನೀಡುವ ಕೇಂದ್ರ ಸರ್ಕಾರದ ಸಹಾಯಾನುದಾನ ಪಡೆಯುವ ಕುರಿತಾದ ಪ್ರಸ್ತಾವನೆ ಬಗೆಗಿನ ವಿಷಯಗಳು.

ಈ ವಿಷಯಗಳಿಗೆ ಸಂಬಂಧಿಸಿದಂತೆ ವಿಧಾನಸಭೆ:ವಿಧಾನಪರಿಷತ್ ಪ್ರಶ್ನೆಗಳು. ಭರವಸೆಗಳು, ಅರ್ಜಿಗಳು, ಗಮನಸೆಳೆಯುವ ಸೂಚನೆಗಳು ಇತ್ಯಾದಿ ಹಾಗೂ ನ್ಯಾಯಾಲಯ ಪ್ರಕರಣಗಳು.

**ಹಿರಿಯ ಸಹಾಯಕರು (ಸ್ವೀಮರ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದಂತೆ ಸೇವಾ ವಿಷಯಗಳ ನಿರ್ವಹಣೆ ಅದಕ್ಕೆ ಸಂಬಂಧಿಸಿದಂತೆ ವಿಧಾನಸಭೆ, ವಿಧಾನ ಪರಿಷತ್ ಪ್ರಶ್ನೆಗಳು ಇತ್ಯಾದಿ ಹಾಗೂ ನ್ಯಾಯಾಲಯಗಳ ಪ್ರಕರಣಗಳು.

**ಹಿರಿಯ ಸಹಾಯಕರು (ಆಂತರಿಕ ಆರ್ಥಿಕ ಸಲಹೆಗಾರರ ಆಯವ್ಯಯ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಯುವಜನ ಸೇವಾ ಇಲಾಖೆಗೆ ಸಂಬಂಧಿಸಿದ ಆಯವ್ಯಯ ತಯಾರಿಕೆ ಹಾಗೂ ಆಡಿಟ್ ಆಕ್ಷೇಪಣೆ ವಿಷಯಗಳು. ಮಹಾಲೇಖಪಾಲರ ತಪಾಸಣಾ ವರದಿ, ಕರಡು ಕಂಡಿಕೆಗಳು, ಸಿ.ಎ.ಜಿ.ರವರ ವರದಿ ಹಾಗೂ ಸಾರ್ವಜನಿಕ ಲೆಕ್ಕಪತ್ರ ವರದಿಗಳ ಕುರಿತಾದ ವಿಷಯಗಳು ನಿರ್ವಹಣೆ.

**ಹಿರಿಯ ಸಹಾಯಕರು (ಅಭಿಪ್ರಾಯ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಹಾಗೂ ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಪಟ್ಟ ಸೇವಾ ವಿಷಯಗಳ ನಿರ್ವಹಣೆ.

**ಸಹಾಯಕರು (ಯುವಜನ ಸೇವಾ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಅಕಾಡಮಿಗೆ ಸಂಬಂಧಿಸಿದ ವಿಷಯಗಳು. ಯುವಜನ ಸೇವೆಗಳು ಮತ್ತು ಕ್ರೀಡಾ ಇಲಾಖೆಯ ಹಲವು ಯುವಜನಾಭಿವೃದ್ಧಿ ಹಾಗೂ ಕ್ರೀಡಾಭಿವೃದ್ಧಿ ಕುರಿತಾದ ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳ ಅನುಷ್ಠಾನ ಕುರಿತಾದ ವಿಷಯಗಳ ಸಂಸ್ಕರಣೆ, ಪಂಚಾಯತ್ ಯುವ ಕ್ರೀಡಾ ಔರ್ ಖೇಲ್ ಅಭಿಯಾನ (ಪೈಕಾ) ಯೋಜನೆಯ ವಿಷಯಗಳು, ಇತ್ಯಾದಿ ಅನುದಾನ ಬಿಡುಗಡೆ ಕುರಿತಾದ ಆದೇಶ ಹೊರಡಿಸುವಿಕೆ ವಿಷಯಗಳ ನಿರ್ವಹಣೆ.

**ಸಹಾಯಕರು (ಸ್ವೀಮರ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಸಭೆಗಳು ಹಾಗೂ ವಿವಿಧ ಹಂತದ ಮಾಸಿಕ ಪ್ರಗತಿ ಪರಿಶೀಲನ ಸಭೆ ಹಾಗೂ ಇತರ ಸಭೆಗಳ ಕುರಿತು ಸಂಯೋಜನಾಕ್ರಮ. ವಿಧಾನಸಭೆ/ವಿಧಾನಪರಿಷತ್ ಸಾಮಾನ್ಯ ಪ್ರಶ್ನೆಗಳು, ಭರವಸೆಗಳು, ಇತ್ಯಾದಿಗಳ ಸಂಯೋಜನಾ ವಿಷಯ:ಇಲಾಖೆಗೆ ಸಂಬಂಧಿಸಿದ ಉಳಿದೆಲ್ಲ ವಿಷಯಗಳ ನಿರ್ವಹಣೆ.

**ಸಹಾಯಕರು (ಆಯವ್ಯಯ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಪಟ್ಟ ಪ್ರಸ್ತಾವನೆಗಳಿಗೆ ಹಣ ಬಿಡುಗಡೆ ಮಾಡುವ ವಿಷಯಗಳ ಪರಿಶೀಲನೆ ಹಾಗೂ ಇತರೆ ವಿಷಯಗಳ ನಿರ್ವಹಣೆ.

**ಸಹಾಯಕರು (ಅಭಿಪ್ರಾಯ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಪಟ್ಟಂತೆ ಅಭಿಪ್ರಾಯಕ್ಕಾಗಿ ಸ್ವೀಕರಿಸಿದ ಪ್ರಸ್ತಾವನೆಗಳನ್ನು ಪರಿಶೀಲಿಸುವುದು ಹಾಗೂ ಇತರೆ ವಿಷಯಗಳು.

**ಅಕೌಂಟೆಂಟ್(ಲೆಕ್ಕಾಧಿಕಾರಿ):**

ರಾಷ್ಟ್ರೀಯ ಸೇವಾ ಯೋಜನಾ ವಿಷಯಕ್ಕೆ ಸಂಬಂಧಿಸಿದಂತೆ, ಲೆಕ್ಕಪತ್ರ, ನಗದು ಪುಸ್ತಕಗಳ ನಿರ್ವಹಣೆ, ಲೆಕ್ಕಪತ್ರ ಕ್ರೋಢೀಕರಣ, ಮಹಾಲೇಖಪಾಲರ ಆಡಿಟ್ ಪ್ಯಾರ, ಎಂ.ಎಂ.ಆರ್./ಆಯವ್ಯಯ ತಯಾರಿಕೆ, ಅನುದಾನ ಮರುಪಾವತಿ, ಸಂಬಳದ ಬಿಲ್ಲುಗಳು ಇವೇ ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಾರೆ.

**ಆಪ್ತಕಾರ್ಯದರ್ಶಿ ಗ್ರೇಡ್–2:**

ಇವರು ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರ ನಿರ್ದೇಶನಗಳಿಗೆ ಒಳಪಟ್ಟು ಕಾರ್ಯನಿರ್ವಹಿಸುತ್ತಾರೆ.

**ಸಹಾಯಕರು (ರಾಷ್ಟ್ರೀಯ ಸೇವಾ ಯೋಜನಾ ಕೋಶ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ ರಾಷ್ಟ್ರೀಯ ಸೇವಾ ಯೋಜನಾ ವಿಷಯಕ್ಕೆ ಸಂಬಂಧಿಸಿದಂತೆ ಎಲ್ಲ ವಿಶ್ವವಿದ್ಯಾಲಯ/ನಿರ್ದೇಶನಾಲಯಗಳ ಸಾಮಾನ್ಯ ಕಾರ್ಯನಿರ್ವಹಣೆ, ವಿಶೇಷ ಶಿಬಿರಗಳಿಗೆ ಅನುಮೋದನೆ ನೀಡುವ ಬಗ್ಗೆ ಪರಿಶೀಲನೆ, ಸಲಹಾ ಸಮಿತಿ ಸಭೆಗೆ ಸಂಬಂಧಿಸಿದ ವಿಷಯಗಳು, ಇತ್ಯಾದಿ..ಬಗ್ಗೆ ಪರಿಶೀಲಿಸಿ ಕಡತವನ್ನು ರಾಜ್ಯ ಸಂಪರ್ಕಾಧಿಕಾರಿಯವರಿಗೆ ಮಂಡಿಸುತ್ತಾರೆ.

**ಶೀಘ್ರಲಿಪಿಗಾರರು:**

ಇವರು ಅಧಿಕಾರಿಗಳಿಂದ ಉಕ್ತಲೇಖನವನ್ನು ಪಡೆದು ಪತ್ರಗಳನ್ನು ಮತ್ತು ವರದಿಗಳನ್ನು ತಯಾರಿಸಿ ಅಧಿಕಾರಿಗಳಿಗೆ ಬರುವ ಕಾಗದಪತ್ರಗಳು ಹಾಗೂ ಕಡತಗಳನ್ನು ಸ್ವೀಕರಿಸುವುದು, ಸಭೆ/ಸಮಿತಿಗಳ ದಿನಾಂಕಗಳನ್ನು ಗುರುತಿಸಿ, ಅಧಿಕಾರಿಗಳಿಗೆ ನೆನಪಿಸುವುದು ಹಾಗೂ ಕಡತಗಳನ್ನು ಪಡೆದು ಸಲ್ಲಿಸುವುದು, ಸಭೆಯ ನಡೆವಳಿಗಳನ್ನು ತಗೆದುಕೊಂಡು ಕರಡನ್ನು ತಯಾರಿಸುವುದು, ಗಣಕಯಂತ್ರದ ಮೂಲಕ ಎಲ್‌ಎಂಎಸ್/ ಎಫ್‌ಎಂಎಸ್ ನಿರ್ವಹಿಸುವುದು ಹಾಗೂ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು.

**ಬೆರಳಚ್ಚುಗಾರ:**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ ಶಾಖೆಯಲ್ಲಿನ ಎಲ್ಲ ಬೆರಳಚ್ಚು ಕೆಲಸಗಳನ್ನು ನಿರ್ವಹಿಸುವುದು.

**ವಾಹನ ಚಾಲಕರು**: ವಾಹನವನ್ನು ಸುಸ್ಥಿತಿಯಲ್ಲಿಟ್ಟು, ವಾಹನ ಚಾಲನೆ ಕಾರ್ಯನಿರ್ವಹಿಸುತ್ತಾರೆ.

**ದಲಾಯತ್:**

ಇವರು ಕಛೇರಿಗಳನ್ನು ಸ್ವಚ್ಛವಾಗಿಡುವುದು ಪತ್ರಗಳನ್ನು ಮತ್ತು ಕಡತಗಳನ್ನು ವಿವಿಧ ಶಾಖೆಗಳಿಗೆ/ ಇಲಾಖೆಗಳಿಗೆ ನಿಯಮಾನುಸಾರ ನೀಡುವುದು ಮುಕ್ತಾಯಗೊಳಿಸಿದ ಕಡತಗಳನ್ನು ಸರಿಯಾಗಿ ಹೊಲೆದು ದಾಖಲೆಗಳ ಕೊಠಡಿಗೆ ತಗೆದುಕೊಂಡು ಹೋಗುವ ಇವೇ ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಾರೆ.

**4(1)(ಬಿ) iii–ನಿರ್ಣಯ ತಗೆದುಕೊಳ್ಳುವಲ್ಲಿ ಅನುಸರಿಸಲಾಗುವ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿಗಳು**

ಯಾವುದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಸಂಬಂಧಪಟ್ಟ ಶಾಖೆಯಲ್ಲಿ ಸ್ವೀಕರಿಸುವ ಟಪಾಲಿನ ಹಂತದಲ್ಲಿ ಅಧೀನ ಕಾರ್ಯದರ್ಶಿಗೆ ಸಲ್ಲಿಸುವುದು, ನಂತರ ಇದನ್ನು ಶಾಖಾಧಿಕಾರಿ ನೋಡಿ ಸಹಿ ಹಾಕಿದ ನಂತರ ಕಿರಿಯ ಸಹಾಯಕರು, ಗಣಕಯಂತ್ರದಲ್ಲಿ ವಿಷಯವನ್ನು ನಮೂದಿಸಿ ಸಂಖ್ಯೆ ಗುರುತಿಸಿ ಸಂಬಂಧಪಟ್ಟ ಹಿರಿಯ ಸಹಾಯಕರ/ಸಹಾಯಕರಿಗೆ ನೀಡುವುದು. ಹಿರಿಯ ಸಹಾಯಕರು/ಸಹಾಯಕರು ಸ್ವೀಕೃತಿಯ ಕುರಿತು ಪರಿಶೀಲಿಸಿ ಅವಶ್ಯವಿರುವ ನಿಯಮ ಸೂಚನೆ ಪ್ರತಿಗಳು ಹಾಗೂ ಈ ಬಗ್ಗೆ ಈಗಾಗಲೇ ಕಡತ ಪ್ರಾರಂಭಿಸಲಾಗಿದ್ದಲ್ಲಿ ಅದರೊಂದಿಗೆ ಶಾಖಾಧಿಕಾರಿಗೆ ಸಲ್ಲಿಸಬೇಕು. ಶಾಖಾಧಿಕಾರಿ ಟಿಪ್ಪಣಿಯನ್ನು ಪರಿಶೀಲಿಸಿ ತಮ್ಮ ಟಿಪ್ಪಣಿಯನ್ನು ಸ್ಪಷ್ಟವಾಗಿ ದಾಖಲಿಸಿ ಅಧೀನ ಕಾರ್ಯದರ್ಶಿಗಳಿಗೆ ಸಲ್ಲಿಸತಕ್ಕದ್ದು. ಹೆಚ್ಚುವರಿ ಮಾಹಿತಿ ಅವಶ್ಯವಿದ್ದಲ್ಲಿ ಅವುಗಳನ್ನು ಪಡೆಯಲು ಅಧೀನ ಕಾರ್ಯದರ್ಶಿಯು ಸೂಚಿಸಿ ಕಡತ ಹಿಂದಿರುಗಿಸತಕ್ಕದ್ದು. ಇದನ್ನು ಅನುಸರಿಸಿ ಕ್ಷೇತ್ರ ಇಲಾಖೆಗಳಿಂದ ಮಾಹಿತಿ ಪಡೆಯಲು ಕರಡು ಪತ್ರವನ್ನು ಮಂಡಿಸಿ ಶಾಖಾಧಿಕಾರಿ ಹಾಗೂ ಅಧೀನ ಕಾರ್ಯದರ್ಶಿಯವರ ಹಂತದಲ್ಲಿ ಅನುಮೋದನೆ ಪಡೆದು ಅವಶ್ಯ ಪತ್ರವನ್ನು ಹೊರಡಿಸುವುದು, ಮಾಹಿತಿ ಬಂದ ನಂತರ ಅಥವಾ ಅವಶ್ಯವಿಲ್ಲದಿದ್ದಲ್ಲಿ, ಮೇಲೆ ಸೂಚಿಸಿದ ಹಂತವನ್ನು ಅನುಸರಿಸಿ ಅಧೀನ ಕಾರ್ಯದರ್ಶಿಯವರಿಗೆ ಸಲ್ಲಿಸತಕ್ಕದ್ದು. ಅಧೀನ ಕಾರ್ಯದರ್ಶಿಯವರ ಸ್ಪಷ್ಟವಾದ ಅಭಿಪ್ರಾಯವನ್ನು ದಾಖಲಿಸಿ, ಆರ್ಥಿಕ ಅಥವಾ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಥವಾ ಕಾನೂನು ಇಲಾಖೆ ಇತ್ಯಾದಿ ಇಲಾಖೆಗಳ ಸಮಾಲೋಚನೆ ಅವಶ್ಯವಿದ್ದಲ್ಲಿ ಸಲ್ಲಿಸತಕ್ಕದ್ದು. ಅಪರ/ಸಹ/ಉಪಕಾರ್ಯದರ್ಶಿಯವರ ಹಂತದಲ್ಲಿ ಅವಶ್ಯವಿದ್ದಲ್ಲಿ ಸಂಬಂಧಪಟ್ಟ ಇಲಾಖೆಗಳೊಡನೆ ಸಮಾಲೋಚಿಸಿ ಅಭಿಪ್ರಾಯ ಪಡೆದ ನಂತರ, ಅಧಿಕಾರ ಪ್ರತ್ಯಾಯೋಜನೆಯನ್ನು ದಾಖಲಿಸಿ ಕಾರ್ಯದರ್ಶಿಯವರಿಗೆ ಸಲ್ಲಿಸತಕ್ಕದ್ದು.

ಆರ್ಥಿಕ ಯೋಜನೆಗಳನ್ವಯ ಅಥವಾ ನಿಯಮಗಳಲ್ಲಿ ಸೂಚಿಸಿರುವ ಅಧಿಕಾರದನ್ವಯ ಪ್ರಧಾನ ಕಾರ್ಯದರ್ಶಿಯವರು ನಿರ್ಣಯ ತೆಗೆದುಕೊಳ್ಳಬಹುದು ಹಾಗೂ ಅಧಿಕಾರಪ್ರತ್ಯಾಯೋಜನೆ ಇಲ್ಲದಿದ್ದಲ್ಲಿ ಮಾನ್ಯ ಸಚಿವರಿಗೆ ಕಡತವನ್ನು ಸಲ್ಲಿಸತಕ್ಕದ್ದು. ಈ ರೀತಿ ನಿರ್ಣಯ ತೆಗೆದುಕೊಂಡ ನಂತರ ಕರಡು ಆದೇಶದ ಅನುಮೋದನೆಯನ್ನು ಅಧೀನ ಕಾರ್ಯದರ್ಶಿ ಹಂತದಲ್ಲಿ ಪಡೆದು ಅಂತಿಮ ಆದೇಶ ಹೊರಡಿಸುವುದು.

**ಹೊಣೆಗಾರಿಕೆ, ಮೇಲ್ವಿಚಾರಣೆ:**

ವಿಷಯ ನಿರ್ವಾಹಕರು ಶಾಖೆಯಲ್ಲಿ ಸ್ವೀಕೃತಿಯಾದ ಪತ್ರಗಳನ್ನು ಆ ಪತ್ರಗಳಿಗೆ ಸಂಬಂಧಪಟ್ಟಂತೆ ಕಡತಗಳಿದ್ದಲ್ಲಿ ಅದರೊಂದಿಗೆ ಸಲ್ಲಿಸುವುದು, ಇಲ್ಲದಿದ್ದಲ್ಲಿ ಹೊಸ ಕಡತವನ್ನು ತೆರೆದು ಸಲ್ಲಿಸುವುದು. ಸ್ವೀಕೃತಿಗೆ ಸಂಬಂಧಪಟ್ಟಂತೆ ವಿಷಯ ಸಂಬಂಧವಾಗಿ ಪರಿಶೀಲಿಸಿ ಕಡತವನ್ನು ಶಾಖಾಧಿಕಾರಿಗೆ ಸಲ್ಲಿಸುವುದು.

ಶಾಖಾಧಿಕಾರಿಯು ವಿಷಯ ನಿರ್ವಾಹಕರು ಸಲ್ಲಿಸಿದ ಕಡತವನ್ನು ಪರಿಶೀಲಿಸುವರು. ಅವಲಂಬಿತ ಭಾಷಾಶೈಲಿ ಪರಿಶೀಲಿಸುವುದು ಇವರ ಕರ್ತವ್ಯ. ಇವರು ಕಡತದಲ್ಲಿರುವ ಟಿಪ್ಪಣಿಯನ್ನು ಸಂಬಂಧಪಟ್ಟ ನಿಯಮಗಳಿಗನುಸಾರವಾಗಿ ಪರಿಶೀಲಿಸಿ, ಹೆಚ್ಚುವರಿ ಟಿಪ್ಪಣಿಯೊಂದಿಗೆ ಮೇಲಾಧಿಕಾರಿಗೆ ಸಲ್ಲಿಸುವರು. ಶಾಖಾಧಿಕಾರಿಯವರು ಕಡತವನ್ನು ಅಧೀನ ಕಾರ್ಯದರ್ಶಿ/ ಅಪರ/ಸಹ/ಉಪಕಾರ್ಯದರ್ಶಿ ರವರಿಗೆ ಅನುಮೋದನೆಗಾಗಿ ಸಲ್ಲಿಸುವುದು. ತುರ್ತು ಮತ್ತು ಮುಖ್ಯ ಸ್ವೀಕೃತಿಗಳನ್ನು ವಿಷಯ ನಿರ್ವಾಹಕರಿಗೆ ರವಾನಿಸದೆ ತಾವೇ ಸ್ವತ: ಸಲ್ಲಿಸಲು ಶಾಖಾಧಿಕಾರಿ/ಅಧೀನ ಕಾರ್ಯದರ್ಶಿಯವರಿಗೆ ಅಧಿಕಾರವಿದೆ.

ಪ್ರಧಾನ ಕಾರ್ಯದರ್ಶಿಯವರು ಪ್ರಕರಣಕ್ಕೆ ಸಂಬಂಧಪಟ್ಟಂತೆ ತೀರ್ಮಾನ ತೆಗೆದುಕೊಂಡು ಕಡತವನ್ನು ಹಿಂದಿರುಗಿಸುವರು. ಸರ್ಕಾರದ ನೀತಿಗಳಿಗೆ ಸಂಬಂಧಪಟ್ಟ ವಿಷಯ ಮತ್ತು ಕರ್ನಾಟಕ ಸರ್ಕಾರ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977 ರ ಪ್ರಕಾರ ಸಚಿವರಿಗೆ ಸಲ್ಲಿಸಬೇಕಾದ ವಿಷಯಗಳಲ್ಲಿ ಅಂತಿಮ ತೀರ್ಮಾನಕ್ಕೆ ಕಡತವನ್ನು ಸಲ್ಲಿಸುವರು.

**4(1)(ಬಿ)ಕರ್ತವ್ಯಗಳ ನಿರ್ವಹಣೆಯಲ್ಲಿ ಅನುಸರಿಸಬೇಕಾದ ಸೂತ್ರಗಳು**

ಸಚಿವಾಲಯ ಕಛೇರಿ ಕೈಪಿಡಿ ಮತ್ತು ಕರ್ನಾಟಕ ಸರ್ಕಾರ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ಪ್ರಕಾರ ಕಡತ ವಿಲೇವಾರಿ ಮಾಡುವಲ್ಲಿ ಸಚಿವಾಲಯದ ಇಲಾಖೆಗಳು ಕಾರ್ಯ ನಿರ್ವಹಿಸುತ್ತಿವೆ. ಕಡತ ವಿಲೇವಾರಿ ಮಾಡುವಲ್ಲಿ ಆ ವಿಷಯಕ್ಕೆ ಸಂಬಂಧಪಟ್ಟ ವಿವಿಧ ಶಾಸನ ಮತ್ತು ನ್ಯಾಯಾಲಯದ ಆದೇಶಗಳ ಮೂಲಕ ಪರಿಶೀಲಿಸುತ್ತದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಸರ್ಕಾರದ ಉಪ ಕಾರ್ಯದರ್ಶಿಗಳು
ಸರ್ಕಾರದ ಅಧೀನ ಕಾರ್ಯದರ್ಶಿಗಳು
ಶಾಖಾಧಿಕಾರಿಗಳು
→ :ಪ್ರಕರಣಗಳ ಬಗ್ಗೆ ಆದ್ಯತೆಯ ಮೇಲೆ ಹಾಗೂ ತುರ್ತಾಗಿ ಕ್ರಮ ಕೈಗೊಳ್ಳಬೇಕಾಗಿರುತ್ತದೆ.

ಸಹಾಯಕರು/ಹಿರಿಯ ಸಹಾಯಕರು → : ಕಡತಗಳನ್ನು/ ಸ್ವೀಕೃತಿಗಳನ್ನು 5 ದಿನಗಳೊಳಗಾಗಿ ನಿರ್ವಹಿಸಬೇಕಾಗಿರುತ್ತದೆ.

ಶೀಘ್ರಲಿಪಿಗಾರರು/ಬೆರಳಚ್ಚುಗಾರರು
ಕಿರಿಯಸಹಾಯಕರು
→ :ಇವರು ತಮಗೆವಹಿಸಿದ ಕರ್ತವ್ಯಗಳನ್ನು ಆಯಾಯ ದಿನವೇ ಮುಗಿಸಬೇಕಾಗಿರುತ್ತದೆ.

ವಾಹನ ಚಾಲಕರು → :ವಾಹನವನ್ನು ಸಿದ್ದತೆಯಲ್ಲಿಡಬೇಕಾಗಿರುತ್ತದೆ.

ದಲಾಯತ್ → ಶಾಖೆಯಲ್ಲಿ ಅವರಿಗೆ ವಹಿಸಿದ ಪತ್ರಗಳನ್ನು/ಕಡತಗಳನ್ನು ಆಯಾಯ ದಿನವೇ ಅಧಿಕಾರಿಗಳ ಸೂಚನೆಯಂತೆ ಆಯಾಯ ಅಧಿಕಾರಿಗಳಿಗೆ ಮತ್ತು ಇಲಾಖೆಗಳಿಗೆ ನೀಡಬೇಕಾಗಿರುತ್ತದೆ.

**4.(1)(ಬಿ)(v)ರನ್ವಯ ಅನುಸರಿಸಬೇಕಾದ ನಿಯಮ ಇತ್ಯಾದಿ ಪಟ್ಟಿ**

1) ಕರ್ನಾಟಕ ನಾಗರೀಕ ಸೇವಾ ನಿಯಮಗಳು
2) ಸರ್ಕಾರಿ ನೌಕರರ ಸೇವಾ ಷರತ್ತುಗಳಿಗೆ ಸಂಬಂಧಪಟ್ಟ ಕಾಯ್ದೆ ಮತ್ತು ನಿಯಮಗಳು
3) ಕರ್ನಾಟಕ ಆರ್ಥಿಕ ಸಂಹಿತೆ
4) ಕರ್ನಾಟಕ ಸರ್ಕಾರಿ ನೌಕರರ(ವೈದ್ಯಕೀಯ ಮರುಪಾವತಿ) ನಿಯಮಗಳು 1962
5) ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977
6) ಸಚಿವಾಲಯ ಕೈಪಿಡಿ
7) ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು, 1966
8) ಕರ್ನಾಟಕ ನಾಗರೀಕ ಸೇವೆ (ಪರಿವೀಕ್ಷಣಾವಧಿ) ನಿಯಮಗಳು
9) ಕರ್ನಾಟಕ ನಾಗರೀಕ ಸೇವೆ (ಕಾಲಮಿತಿ ವೇತನ ಬಡ್ತಿ) ನಿಯಮಗಳು
10) ಕರ್ನಾಟಕ ನಾಗರೀಕ ಸೇವೆ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಬಡ್ತಿ) ನಿಯಮಗಳು
11) ಕರ್ನಾಟಕ ನಾಗರೀಕ ಸೇವೆ (ಜೇಷ್ಠತೆ) ನಿಯಮಗಳು

**4(1)(ಬಿ)(vi) ದಾಖಲೆಗಳ ತ:ಖ್ತೆ**

| ಶಾಖೆ | ಕಡತ ಶೀರ್ಷಿಕೆ | ವಿಷಯ |
|---|---|---|
| ಸ್ವೀಮರ | ಯುಇಸೇ | ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಸೇವಾ ವಿಷಯಗಳು |
| | ಸಮನ | ಯುವಜನ ಸೇವಾ ಇಲಾಖೆಗೆ ಸಂಬಂಧಿಸಿದ ಎಲ್ಲ ಸಮನ್ವಯ ವಿಷಯಗಳು |
| ಐಎಫ್ಎ | ಐಎಫ್‌ಡಬ್ಲೂ | ಆಯವ್ಯಯ ಹಾಗೂ ಆಡಿಟ್ ಪ್ಯಾರ ಹಾಗೂ ಇತರ ವಿಷಯಗಳಿಗೆ ಸಂಬಂಧಿಸಿದ ವಿಷಯಗಳು |
| ಯುಸೇಇ | ಯುಸೇಕ್ರೀ | ಕ್ರೀಡಾಂಗಣಗಳಿಗೆ ಸಂಬಂಧಿಸಿದ ವಿಷಯಗಳು |
| | ಯುಸೇಭಾ | ವಿಧಾನಸಭೆ/ವಿಧಾನಪರಿಷತ್ತು/ಭರವಸೆಗಳಿಗೆ ಸಂಬಂಧಿಸಿದ ವಿಷಯಗಳು |
| | ಯುರಾಸೇ | ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಿಸಿದ ವಿಷಯಗಳು |
| ರಾಜ್ಯ ಸಂಪರ್ಕಾಧಿಕಾರಿ | ರಾಸೇಯೋ | ರಾಷ್ಟ್ರೀಯ ಸೇವಾ ಯೋಜನೆಗೆ ಸಂಬಂಧಿಸಿದ ಎಲ್ಲ ವಿಷಯಗಳು |

**4(1)(ಬಿ)(vii) ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ:–**

ರೀತಿ ನೀತಿಗಳನ್ನು ರಚಿಸುವಲ್ಲಿ ಅಥವಾ ಅನುಷ್ಠಾನಗೊಳಿಸುವಲ್ಲಿ ಸಾರ್ವಜನಿಕರೊಂದಿಗೆ ಅಥವಾ ಸಾರ್ವಜನಿಕ ಪ್ರತಿನಿಧಿಗಳೊಂದಿಗೆ ಸಮಾಲೋಚನೆ ವ್ಯವಸ್ಥೆ ಇರುವುದಿಲ್ಲ. ಸಾರ್ವಜನಿಕರಿಂದ ಯಾವುದಾದರೂ ಸಲಹೆ/ ಸೂಚನೆಗಳು ಸ್ವೀಕೃತವಾದಲ್ಲಿ ಅದನ್ನು ಸರ್ಕಾರದ Policy Formulating Body ಗೆ ಕಳುಹಿಸುವುದು.

ಕಾಯ್ದೆ ಅಥವಾ ನಿಯಮಗಳಲ್ಲಿ ಪೂರ್ವಭಾವಿಯಾಗಿ ಕರಡು ಕಾಯ್ದೆ ಅಥವಾ ನಿಯಮಗಳನ್ನು ರೂಪಿಸಬೇಕೆಂದು ಉಪಬಂಧಗಳು ಇದ್ದಲ್ಲಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸುವ ಮೂಲಕ ಸದರಿ ವಿಧಾನವನ್ನು ಅನುಸರಿಸಲಾಗುವುದು.

**4(1)(ಬಿ)(viii) ಇಲಾಖೆಯಲ್ಲಿರುವ ನಿಗಮ/ಪರಿಷತ್ತು/ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ನಡೆವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ:–**

ಈ ಇಲಾಖೆಯ ವ್ಯಾಪ್ತಿಯಲ್ಲಿ ಈ ಕೆಳಕಂಡ ಸಂಸ್ಥೆ/ ಸಮಿತಿಗಳು ಬರುತ್ತವೆ.

1.ಕರ್ನಾಟಕ ಕ್ರೀಡಾ ಪ್ರಾಧಿಕಾರ, ಬೆಂಗಳೂರು.

2.ಎನ್.ಎಸ್.ಎಸ್.ಕೋಶದ ಸಲಹಾ ಸಮಿತಿ.

3.ರಾಷ್ಟ್ರ /ರಾಜ್ಯ ಪ್ರಶಸ್ತಿ ಆಯ್ಕೆ ಸಮಿತಿ.

4.ಕರ್ನಾಟಕ ಕ್ರೀಡಾಂಗಣ ವ್ಯವಸ್ಥಾಪಕ ಸಮಿತಿ.

**4 (1)(ಬಿ) (ix) ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ:–**

| ಕ್ರ.ಸಂ. | ಹುದ್ದೆಯ ಹೆಸರು | ಅಧಿಕಾರಿ/ನೌಕರರ ಹೆಸರು ಶ್ರೀ/ಶ್ರೀಮತಿ | ಕಛೇರಿ ದೂರವಾಣಿ ಸಂಖ್ಯೆ |
|---|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ | ಶಂಭು ದಯಾಲ್ ಮೀನಾ | 22255827/<br>22032589 |
| 2 | ಸರ್ಕಾರದ ಉಪ ಕಾರ್ಯದರ್ಶಿ | ಹೆಚ್.ಕೆ.ಸಾವಿತ್ರಿ | 22254393<br>22032598 |
| 3 | ರಾಜ್ಯ ಸಂಪರ್ಕಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ (ಎನ್.ಎಸ್.ಎಸ್ ಕೋಶ) | ಡಾ॥ ಧನಂಜಯ ಕೆ.ಬಿ. | 22284498<br>22032442 |
| 4 | ಆಂತರಿಕ ಆರ್ಥಿಕ ಸಲಹೆಗಾರರು | ಬಿ.ದೇವಿಕಾ(ರಜೆಯಲ್ಲಿ) | 22353993 |
| 5 | ಸರ್ಕಾರದ ಅಧೀನ ಕಾರ್ಯದರ್ಶಿ | ಕೆ.ಎ.ಹಿದಾಯತ್ತುಲ್ಲ | 22032596 |
| 6 | ಪೀಠಾಧಿಕಾರಿ (ಯುವಜನ ಸೇವೆ) | ಹನುಮಂತರಾಯಪ್ಪ.ಜಿ | 22032166 |
| 7 | ಶಾಖಾಧಿಕಾರಿ (ಆಯವ್ಯಯ) | **ಕೆ.ಎಸ್.ನಿಂಗಯ್ಯ** | 22032829 |
| 8 | ಶಾಖಾಧಿಕಾರಿ (ಅಭಿಪ್ರಾಯ) | **ಖಾಲಿ** | 22032713 |
| 9 | ಶಾಖಾಧಿಕಾರಿ (ಸ್ವೀಮರ) | ರಾಜಿಕಾ ಬಾನು | 22032170 |
| 10 | ಆಪ್ತ ಕಾರ್ಯದರ್ಶಿ (ಗ್ರೇಡ್–2) | ಖಾಲಿ | 22255827 |
| 11 | ಹಿರಿಯ ಸಹಾಯಕರು (ಯುವಜನ ಸೇವೆ) | ಬಿಳಿಯಪ್ಪ.ಕೆ | 22032166 |
| 12 | ಭಾಷಾಂತರಕಾರರು<br>(ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಎನ್.ಎಸ್.ಗಾಯಿತ್ರಿದೇವಿ | 22255827 |
| 13 | ಹಿರಿಯ ಸಹಾಯಕರು (ಸ್ವೀಮರ) | ಖಾಲಿ | 22032170 |
| 14 | ಹಿರಿಯ ಸಹಾಯಕರು(ಅಭಿಪ್ರಾಯ) | ಮಾಧವಿ | 22032713 |
| 15 | ಹಿರಿಯ ಸಹಾಯಕರು(ಆಯವ್ಯಯ) | ಎನ್.ಎ.ರಾಜೇಶ್ವರಿ | 22032829 |
| 16 | ಹಿರಿಯ ಸಹಾಯಕರು(ಆಯವ್ಯಯ) | ಆರ್ ಲತಾ | 22032829 |
| 17 | ಸಹಾಯಕರು(ಸ್ವೀಮರ) | ಎನ್ .ರಾಜೇಶ್ವರಿ | 22032170 |
| 18 | ಸಹಾಯಕರು(ಸ್ವೀಮರ) | ಚಂದ್ರಕಲಾ.ಎಸ್ | 22032170 |
| 19 | ಸಹಾಯಕರು(ಅಭಿಪ್ರಾಯ) | ಹೆಚ್.ಎಸ್. ಹೊನ್ನೇಗೌಡ | 22032713 |
| 20 | ಸಹಾಯಕರು (ಅಭಿಪ್ರಾಯ) | **ಎಸ್.ಗೀತಾ** | 22032713 |
| 21 | ಸಹಾಯಕಿ(ಯುವಜನ ಸೇವೆ) | ಆರ್.ಶಾಂತಿ | 22032166 |
| 22 | ಸಹಾಯಕರು(ಆಯವ್ಯಯ) | ಬಿ.ಜಿ.ಲೇಖಾ | 22032829 |
| 23 | ಕಿರಿಯ ಸಹಾಯಕ(ಅಭಿಪ್ರಾಯ) | **ರಮೇಶ ರಾಜು.ಟಿ.ವಿ** | 22032713 |
| 24 | ಕಿರಿಯಸಹಾಯಕ(ಎನ್.ಎಸ್.ಎಸ್ ಕೋಶ) | ಡಿ. ಜಯಂತ್ ಕುಮಾರ್ | 22032410 |
| 25 | ಅಕೌಂಟೆಂಟ್(ಎನ್.ಎಸ್.ಎಸ್ ಕೋಶ) | ಖಾಲಿ | – |

| ಕ್ರ.ಸಂ. | ಹುದ್ದೆಯ ಹೆಸರು | ಅಧಿಕಾರಿ/ನೌಕರರ ಹೆಸರು ಶ್ರೀ/ಶ್ರೀಮತಿ | ಕಛೇರಿ ದೂರವಾಣಿ ಸಂಖ್ಯೆ |
|---|---|---|---|
| 26 | ಶೀಘ್ರಲಿಪಿಗಾರರು | ಬಿ.ಎಸ್. ಕುಬೇರ | 22032410 |
| 27 | ಶೀಘ್ರಲಿಪಿಗಾರರು (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಯೋಗೀಶ ಎಂ.ವಿ. | 22255827 |
| 28 | ಹಿರಿಯ ಶೀಘ್ರಲಿಪಿಗಾರರು, (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ಎ.ಪಿ. ರಾಜೇಶ್ವರಿ | 22254393 |
| 27 | ಶೀಘ್ರಲಿಪಿಗಾರರು (ಆಂ.ಆ.ಸ.ಶಾಖೆ) | ಮಹಾಲಕ್ಷ್ಮೀ ರಮೇಶ್ ಕರೇಮನಿ | 22032713 |
| 28 | ಶೀಘ್ರಲಿಪಿಗಾರರು (ಅಧೀನಕಾರ್ಯದರ್ಶಿಯವರ ಶಾಖೆ) | ಹೆಚ್.ಲತ | 22032596 |
| 29 | ಕಿರಿಯಸಹಾಯಕ (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಜಿ.ವೆಂಕಟೇಶ್ | 22255827 |
| 30 | ಸಹಾಯಕಿ (ಎನ್‌ಎಸ್‌ಎಸ್) | ಕುಸುಮಾದೇವಿ ಎಂ.ಸಿ. | 22032410 |
| 31 | ಕಿರಿಯ ಸಹಾಯಕ (ಯುವಜನ ಸೇವೆ) | ಮಾಯಣ್ಣ ಗೌಡ (ದೀರ್ಘ ರಜೆ) | 22032166 |
| 32 | ಕಿರಿಯ ಸಹಾಯಕ (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ಖಾಲಿ | – |
| 33 | ಕಿರಿಯ ಸಹಾಯಕಿ (ಸ್ತ್ರೀಮರ) | ಖಾಲಿ | 22032170 |
| 34 | ಬೆರಳಚ್ಚುಗಾರ (ಆಯವ್ಯಯ) / (ಅಭಿಪ್ರಾಯ) | ಖಾಲಿ | – |
| 35 | ಬೆರಳಚ್ಚುಗಾರ್ತಿ (ಸ್ತ್ರೀಮರಶಾಖೆ) | ಖಾಲಿ | 22032170 |
| 36 | ಬೆರಳಚ್ಚುಗಾರ್ತಿ (ಯುವಜನ ಸೇವೆ ) | ಖಾಲಿ | – |
| 37 | ವಾಹನ ಚಾಲಕರು | ಆನಂದಕೃಷ್ಣ | 22254393 |
| 38 | ವಾಹನ ಚಾಲಕರು | ಎಂ.ರಾಮು | 22255827 |
| 39 | ದಲಾಯತ್ (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಮಂಚಮ್ಮ | 22255827 |
| 40 | ದಲಾಯತ್ (ಎನ್‌ಎಸ್‌ಎಸ್ ಕೋಶ) | ಎನ್.ವಿ. ದೇವರಾಜ್ | 22032410 |
| 41 | ದಲಾಯತ್ (ಸ್ತ್ರೀಮರ ಶಾಖೆ) | ಎ.ಎಸ್.ವಿಜಯಮ್ಮ | 22032170 |
| 42 | ದಲಾಯತ್ (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಕೆಂಪೇಗೌಡ | – |
| 43 | ದಲಾಯತ್ (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ನಾರಾಯಣಶೆಟ್ಟಿ | 22254393 |
| 44 | ದಲಾಯತ್(ಯುವಜನಸೇವೆ ಶಾಖೆ) | ಸುಶೀಲಮ್ಮ | 22032166 |
| 45 | ದಲಾಯತ್(ಅಭಿಪ್ರಾಯ ಶಾಖೆ) | ನಾಗರತ್ನಮ್ಮ | 22032713 |
| 46 | ದಲಾಯತ್ (ಆಯವ್ಯಯ ಶಾಖೆ) | ರತ್ನಮ್ಮ | 22032829 |

**4(1)(b)(X) ಇಲಾಖೆಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದ ತಿಂಗಳ ವೇತನ/ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು.**

ನಿಯಮಗಳಲ್ಲಿ ಅವಕಾಶ ಮಾಡಿದ ವ್ಯವಸ್ಥೆಯನ್ವಯ ಪರಿಹಾರ ಭತ್ಯೆಯೊಂದಿಗೆ, ಈ ಕೆಳಕಂಡ ಮಾಸಿಕ ಮೂಲ ವೇತನವನ್ನು ಪ್ರತಿಯೊಬ್ಬ ಅಧಿಕಾರಿ/ನೌಕರರು ಪಡೆಯುತ್ತಿದ್ದಾರೆ.

| ಕ್ರ.ಸಂ. | ಹುದ್ದೆಯ ಹೆಸರು | ಅಧಿಕಾರಿ/ನೌಕರರ ಹೆಸರು ಶ್ರೀ/ಶ್ರೀಮತಿ | ಮೂಲ ವೇತನ ರೂ. ಗಳಲ್ಲಿ |
|---|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ | ಶಂಭು ದಯಾಲ್ ಮೀನಾ | 73,040/– |
| 2 | ಸರ್ಕಾರದ ಉಪ ಕಾರ್ಯದರ್ಶಿ | ಹೆಚ್.ಕೆ.ಸಾವಿತ್ರಿ | 40050/– |
| 3 | ರಾಜ್ಯ ಸಂಪರ್ಕಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ(ಎನ್.ಎಸ್.ಎಸ್ ಕೋಶ) | ಡಾ॥ ಧನಂಜಯ ಕೆ.ಬಿ. | 55,433/– |
| 4 | ಆಂತರಿಕ ಆರ್ಥಿಕ ಸಲಹೆಗಾರರು | ಬಿ.ದೇವಿಕಾ(ರಜೆಯಲ್ಲಿ) | 41100/– |
| 5 | ಸರ್ಕಾರದ ಅಧೀನ ಕಾರ್ಯದರ್ಶಿ | ಕೆ.ಎ.ಹಿದಾಯತ್ತುಲ್ಲ | 28100/– |
| 6 | ಪೀಠಾಧಿಕಾರಿ (ಯುವಜನ ಸೇವೆ) | ಹನುಮಂತರಾಯಪ್ಪ.ಜಿ | 29600/– |
| 7 | ಶಾಖಾಧಿಕಾರಿ (ಆಯವ್ಯಯ) | **ಕೆ.ಎಸ್.ನಿಂಗಯ್ಯ** | 34,500/– |
| 8 | ಶಾಖಾಧಿಕಾರಿ (ಅಭಿಪ್ರಾಯ) | **ಖಾಲಿ** | – |
| 9 | ಶಾಖಾಧಿಕಾರಿ (ಸ್ವೀಮರ) | ರಾಜಿಕಾ ಬಾನು | 27400/– |
| 10 | ಆಪ್ತ ಕಾರ್ಯದರ್ಶಿ (ಗ್ರೇಡ್–2) | ಖಾಲಿ | – |
| 11 | ಹಿರಿಯ ಸಹಾಯಕರು (ಯುವಜನ ಸೇವೆ) | ಬಿಳಿಯಪ್ಪ.ಕೆ | |
| 12 | ಭಾಷಾಂತರಕಾರರು (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಎನ್.ಎಸ್.ಗಾಯಿತ್ರಿದೇವಿ | 22200/– |
| 13 | ಹಿರಿಯ ಸಹಾಯಕರು (ಸ್ವೀಮರ) | ಖಾಲಿ | – |
| 14 | ಹಿರಿಯ ಸಹಾಯಕರು(ಅಭಿಪ್ರಾಯ) | ಮಾಧವಿ | 24600/– |
| 15 | ಹಿರಿಯ ಸಹಾಯಕರು(ಆಯವ್ಯಯ) | ಎನ್.ಎ.ರಾಜೇಶ್ವರಿ | 25300/– |
| 16 | ಹಿರಿಯ ಸಹಾಯಕರು(ಆಯವ್ಯಯ) | ಆರ್ ಲತಾ | 24600/– |
| 17 | ಸಹಾಯಕರು(ಸ್ವೀಮರ) | ಎನ್ .ರಾಜೇಶ್ವರಿ | 16400/– |
| 18 | ಸಹಾಯಕರು(ಸ್ವೀಮರ) | ಚಂದ್ರಕಲಾ.ಎಸ್ | 16000/– |
| 19 | ಸಹಾಯಕರು(ಅಭಿಪ್ರಾಯ) | ಹೆಚ್.ಎಸ್. ಹೊನ್ನೇಗೌಡ | 16800/– |
| 20 | ಸಹಾಯಕರು (ಅಭಿಪ್ರಾಯ) | **ಎಸ್.ಗೀತಾ** | 16000/– |
| 21 | ಸಹಾಯಕಿ(ಯುವಜನ ಸೇವೆ) | ಆರ್.ಶಾಂತಿ | 18550/– |
| 22 | ಸಹಾಯಕರು(ಆಯವ್ಯಯ) | ಬಿ.ಜಿ.ಲೇಖಾ | 16000/– |
| 23 | ಕಿರಿಯ ಸಹಾಯಕ(ಅಭಿಪ್ರಾಯ) | **ರಮೇಶ ರಾಜು.ಟಿ.ವಿ** | 11600/– |
| 24 | ಕಿರಿಯಸಹಾಯಕ(ಎನ್.ಎಸ್.ಎಸ್ ಕೋಶ) | ಡಿ. ಜಯಂತ್ ಕುಮಾರ್ | 28100/– |
| 25 | ಅಕೌಂಟೆಂಟ್(ಎನ್.ಎಸ್.ಎಸ್ ಕೋಶ) | ಖಾಲಿ | – |
| 26 | ಶೀಘ್ರಲಿಪಿಗಾರರು | ಬಿ.ಎಸ್. ಕುಬೇರ | 28100/– |
| 27 | ಶೀಘ್ರಲಿಪಿಗಾರರು (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಯೋಗೀಶ ಎಂ.ವಿ. | 17650/– |
| 28 | ಹಿರಿಯ ಶೀಘ್ರಲಿಪಿಗಾರರು, (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ಎ.ಪಿ. ರಾಜೇಶ್ವರಿ | 22,800/– |
| 27 | ಶೀಘ್ರಲಿಪಿಗಾರರು (ಆಂ.ಆ.ಸ.ಶಾಖೆ) | ಮಹಾಲಕ್ಷ್ಮೀರಮೇಶ್ ಕರೇಮನಿ | 19100/– |
| 28 | ಶೀಘ್ರಲಿಪಿಗಾರರು (ಅಧೀನಕಾರ್ಯದರ್ಶಿಯವರ ಶಾಖೆ) | ಲತ | 17400/– |
| 29 | ಕಿರಿಯಸಹಾಯಕ (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಜಿ.ವೆಂಕಟೇಶ್ | 13,900/– |
| 30 | ಸಹಾಯಕಿ (ಎನ್ಎಸ್ಎಸ್) | ಕುಸುಮಾದೇವಿ ಎಂ.ಸಿ. | 23400/– |

| ಕ್ರ.ಸಂ. | ಹುದ್ದೆಯ ಹೆಸರು | ಅಧಿಕಾರಿ/ನೌಕರರ ಹೆಸರು ಶ್ರೀ/ಶ್ರೀಮತಿ | ಮೂಲ ವೇತನ ರೂ. ಗಳಲ್ಲಿ |
|---|---|---|---|
| 31 | ಕಿರಿಯ ಸಹಾಯಕ (ಯುವಜನ ಸೇವೆ) | ಮಾಯಣ್ಣ ಗೌಡ (ದೀರ್ಘ ರಜೆ) | – |
| 32 | ಕಿರಿಯ ಸಹಾಯಕ (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ಖಾಲಿ | – |
| 33 | ಕಿರಿಯ ಸಹಾಯಕಿ (ಸ್ವೀಮರ) | ಖಾಲಿ | – |
| 34 | ಬೆರಳಚ್ಚುಗಾರ (ಆಯವ್ಯಯ) / (ಅಭಿಪ್ರಾಯ) | ಖಾಲಿ | – |
| 35 | ಬೆರಳಚ್ಚುಗಾರ್ತಿ (ಸ್ವೀಮರಶಾಖೆ) | ಖಾಲಿ | – |
| 36 | ಬೆರಳಚ್ಚುಗಾರ್ತಿ (ಯುವಜನ ಸೇವೆ ) | ಖಾಲಿ | – |
| 37 | ವಾಹನ ಚಾಲಕರು | ಆನಂದಕೃಷ್ಣ | 17200/– |
| 38 | ವಾಹನ ಚಾಲಕರು | ಎಂ.ರಾಮು | 23000/– |
| 39 | ದಲಾಯತ್ (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಮಂಚಮ್ಮ | 12,500/– |
| 40 | ದಲಾಯತ್(ಎನ್‌ಎಸ್‌ಎಸ್ ಕೋಶ) | ಎನ್.ವಿ. ದೇವರಾಜ್ | 19000/– |
| 41 | ದಲಾಯತ್ (ಸ್ವೀಮರ ಶಾಖೆ) | ಎ.ಎಸ್.ವಿಜಯಮ್ಮ | 12,500/– |
| 42 | ದಲಾಯತ್ (ಪ್ರ.ಕಾರ್ಯದರ್ಶಿಯವರಆಪ್ತಶಾಖೆ) | ಕೆಂಪೇಗೌಡ | 11,000/– |
| 43 | ದಲಾಯತ್(ಉಪ ಕಾರ್ಯದರ್ಶಿಯಆಪ್ತ ಶಾಖೆ) | ನಾರಾಯಣಶೆಟ್ಟಿ | 13,900/– |
| 44 | ದಲಾಯತ್(ಯುವಜನಸೇವೆ ಶಾಖೆ) | ಸುಶೀಲಮ್ಮ | 13,900/– |
| 45 | ದಲಾಯತ್(ಅಭಿಪ್ರಾಯ ಶಾಖೆ) | ನಾಗರತ್ನಮ್ಮ | 12500/– |
| 46 | ದಲಾಯತ್ (ಆಯವ್ಯಯ ಶಾಖೆ) | ರತ್ನಮ್ಮ | 16400/– |

**4(1)(B)-BUDGET ALLOCATION OF YOUTH SERVICES AND SPORTS DEPARTMENT DURING THE YEAR 2012-2013**

**2204 - SPORTS & YOUTH SERVICE**

**(Rs. In Lakhs)**

| SL. No. | Head of Account And Scheme | 2012-13 | |
|---|---|---|---|
| | | Plan | Non-Plan |
| 01 | 2204-00-001-1-01<br>Directorate of Youth Service and Sports | - | 357.19 |
| 02 | 2204-00-102-2-03<br>Incentive Scholarship to high school students for participation at State/ National level sports | 70.00 | - |
| 03 | 2204-00-103-0-02<br>State youth Centre | 65.00 | 10.11 |
| 04 | 2204-00-103-0-18<br>In House Activities at State Youth Center. | 90.00 | - |
| 05 | 2204-00-103-0-27<br>Implementation of Youth Policy: Four New Schemes Will Be Implimented As Given below<br>a) Family first, Family Always Scheme<br>b) Swami Vivekananda Youth Empowerment Centers<br>c) Vocational skill Development programe for Youth<br>d) Life Skill trainig Development Programme for Youth | 1000.00 | - |

| SL. No. | Head of Account And Scheme | 2012-13 | |
|---|---|---|---|
| | | Plan | Non-Plan |
| 06 | 2204-00-104-0-02<br>Promotion of Sports Activities | 755.00 | 23.02 |
| 07 | 2204-00-104-0-25<br>Sports Institutions & Hostels | 1093.04 | 72.52 |
| 08 | 2204-00-104-0-29<br>Sports Authority of Karnataka | 873.00 | 315.78 |
| 09 | 2204-00-104-0-32<br>Rural Sports & Games | 220.00 | - |
| 10 | 2204-00-104-0-33<br>Yuva Sanjivini | 15.00 | - |
| 11 | 2204-00-789-0-01<br>Special Component Plan(SCP) | 544.58 | - |
| 12 | 2204-00-796-0-01<br>Tribal Area Sub Plan | 420.96 | - |
| 13 | 2204-00-800-0-17<br>Publicity Campaign | 25.00 | - |
| 14 | 2204-00-800-0-18<br>Training Programme for In Service Officers & Coaches | 5.00 | - |
| 15 | 4202-03-102-0-03<br>Sports & Youth Services-Sports Stadium | 3251.21 | - |
| | **Total(A)** | **8427.79** | **778.62** |

**NATIONAL SERVICE SCHEME**

| | | | |
|---|---|---|---|
| 01 | 2204-00-103-0-09<br>Central Sector Scheme of National Service Scheme Programme(State 5:Central:7)l | 1679.63 | - |
| | **Total(B)** | **1679.63** | |

**_GOVERNMENT FLYING TRAINING SCHOOL**

| Sl. NO. | Head of Account | | |
|---|---|---|---|
| | | | |
| 01 | 3053-80-003-0-01<br>Govt. Flying School& Education School | - | **321.60** |
| | **Total(C)** | | **321.60** |
| **Total(A)+ Total(B) )+ Total(C)** | | 10107.42 | 1100.22 |

**4(1)(ಬಿ)(xii) ಇಲಾಖೆಯಲ್ಲಿ ನೀಡುವ ಸಹಾಯಧನ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.**

ಈ ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳು ಇರುವುದಿಲ್ಲ.

**4(1)(ಬಿ)(xiii) ಈ ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರ ಪತ್ರಗಳ ವಿವರ ಮತ್ತು ರಿಯಾಯತಿ ಪಡೆಯುವ ವಿವರ:–**

ಈ ಇಲಾಖೆಯಲ್ಲಿ ಯಾವುದೇ ಪರವಾನಗಿ ಅಧಿಕಾರ ಪತ್ರ ಮತ್ತು ರಿಯಾಯತಿ ನೀಡಲಾಗುವುದಿಲ್ಲ.

**4(1)(ಬಿ)(xiv) ಇಲಾಖೆಯಲ್ಲಿರುವ ಮಾಹಿತಿಯನ್ನು ವೆಬ್ ಸೈಟ್‌ನಲ್ಲಿ ಅಳವಡಿಸಿರುವ ಬಗ್ಗೆ ವಿವರ:–**

http://www.karunadu.gov.in/Pages/Default.aspx ನಲ್ಲಿ Status of Files ಲಿಂಕ್ ಅನ್ನು ಕ್ಲಿಕ್ಕಿಸಿದಾಗ ಗೋಚರವಾಗುವ Document Search ಆಪ್ಷನ್ ಅನ್ನು ಗುರತಿಸಿ, ತದನಂತರ ಯುವಜನ ಸೇವಾ ಇಲಾಖೆಯನ್ನು ಆಯ್ಕೆ ಮಾಡಿದ ನಂತರ ಈ ಮಾಹಿತಿಯನ್ನು ಹುಡುಕಿ ಅಂತರ್ಜಾಲದಲ್ಲಿ ನೋಡಬಹುದಾಗಿದೆ.

**4(1)(ಬಿ)(xv) ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ:–**

ಸಾರ್ವಜನಿಕರು ಮಾಹಿತಿ ಪಡೆಯಲು ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಈ ಕಚೇರಿಯನ್ನು ಸಂಪರ್ಕಿಸಬಹುದು. ಸಾರ್ವಜನಿಕರಿಗೆ ಯಾವುದೇ ಗ್ರಂಥಾಲಯ ಮತ್ತು ಓದುವ ಕೋಣೆಯನ್ನು ವ್ಯವಸ್ಥೆಗೊಳಿಸಿಲ್ಲ.

**4(1)(ಬಿ)(xvi) ಇಲಾಖೆಯ ಸಾರ್ವಜನಿಕ ಮಾಹಿತಿ ಅಧಿಕಾರಿಯ ಹೆಸರು, ಪದನಾಮ ಮತ್ತು ಇತರ ವಿವರಗಳು:–**

1. ಸಾರ್ವಜನಿಕ ಪ್ರಾಧಿಕಾರ – ಪ್ರಧಾನ ಕಾರ್ಯದರ್ಶಿಗಳು, ಯುವಜನ ಸೇವಾ ಇಲಾಖೆ, ಕೊಠಡಿ ಸಂಖ್ಯೆ: 243, 2ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು.
2. ಮೇಲ್ಮನವಿ ಪ್ರಾಧಿಕಾರ – ಸರ್ಕಾರದ ಉಪ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ, ಕೊಠಡಿ ಸಂಖ್ಯೆ: 241, 2ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು.
3. ಸಾರ್ವಜನಿಕ ಮಾಹಿತಿ ಅಧಿಕಾರಿ– ಸರ್ಕಾರದ ಅಧೀನ ಕಾರ್ಯದರ್ಶಿ, ಯುವಜನಸೇವಾ ಇಲಾಖೆ, ಕೊಠಡಿ ಸಂಖ್ಯೆ: 236, 2ನೇ ಮಹಡಿ, ಬಹುಮಹಡಿ ಕಟ್ಟಡ , ಬೆಂಗಳೂರು.
4. ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ –

   (ಅ). ಶಾಖಾಧಿಕಾರಿ, ಯುವಜನ ಸೇವಾ ಇಲಾಖೆ, (ಯು.ಸೇ), ಕೊಠಡಿ ಸಂಖ್ಯೆ: 237, 2ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು.

   (ಆ) ಶಾಖಾಧಿಕಾರಿ, ಯುವಜನ ಸೇವಾ ಇಲಾಖೆ (ಸಮನ್ವಯ) ಕೊಠಡಿ ಸಂಖ್ಯೆ: 238, 2ನೇ ಮಹಡಿ,ಬಹುಮಹಡಿ ಕಟ್ಟಡ, ಬೆಂಗಳೂರು.

**4(1)(ಬಿ)(xvii)ಇತರೆ ವಿವರಗಳು;** ಏನೂ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಕೆ.ಎ.ಹಿದಾಯತ್ತುಲ್ಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಯುವಜನ ಸೇವಾ ಇಲಾಖೆ.

**PR.499**

**SC.200**